೯ನೆಯ ವರುಷದ ಮೊದಲನೆಯ ಕುಡಿ

# ಕಂನಾಡ ಸಾಹಿತ್ಯಜ್ಞರ ಆತ್ಮಕಥನ

●

ಚಾಲುಕ್ಯ ವಿಕ್ರಮ ವರುಷ ೮೬೯

●

ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ.

ಬೆಲೆ:] [೨—೦—೦

# ಮುನ್ನುಡಿ

(ಎರಡನೆಯ ಮುದ್ರಣಕ್ಕಾಗಿ)



ಸಾಹಿತ್ಯಜ್ಞರ ಆತ್ಮಕಥನವು ಎರಡನೆಯ ಮುದ್ರಣ ಕಂಡೆದ್ದನ್ನು ಕಂಡು ಆನಂದವಾಗುತ್ತಿದೆ. ಈ ಗ್ರಂಥವು ಮದ್ರಾಸ ಯುನಿವ್ಹರ್ಸಿಟಿಯಲ್ಲಿ ಬಿ. ಎ. ಕ್ಕೆ ಪಠ್ಯ ಪುಸ್ತಕವಾಗಿದ್ದು ಉಸ್ಮಾನಿಯಾ ಯುನಿವ್ಹರ್ಸಿಟಿಯವರು ಮ್ಯಾಟ್ರಿಕ್ಯುಲೇಶನಕ್ಕೆ ಪಠ್ಯ ಪುಸ್ತಕವನ್ನಾಗಿ ಮಾಡಿದ್ದಾರೆ. ಮುಂಬಯಿ ಸರಕಾರದವರು ವಾಚನಾಲಯುಗಳಿಗೆ ಮಂಜೂರ ಮಾಡಿದ್ದಾರೆ. ಎಲ್ಲ ಜನರಿಗೆ ಈ ಪುಸ್ತಕವು ಲೋಕಪ್ರಿಯುವಾಗಿದೆ ಇದೇ ಬಗೆಯಾಗಿ ಜನತೆಯು ಆಶ್ರಯವನ್ನಿತ್ತುದಾದರೆ ಆತ್ಮಕಥನದ ಎರಡನೇ ಭಾಗವು ಬೇಗನೇ ಪ್ರಕಟವಾಗುವ ಆಶಾಕಿರಣ ಮೂಡುತ್ತಿದೆ.

—ಪ್ರಕಾಶಕ

ಎರಡನೆಯ ಮುದ್ರಣ ೧೦೦೦ ಪ್ರತಿಗಳು

೧೯೫೩

ಮುದ್ರಕರು:
ಬಿ. ಎನ್. ಹುದ್ದಾರ.
ಭಾರತ ಮುದ್ರಣಾಲಯು,
ಧಾರವಾಡ.

ಪ್ರಕಾಶಕರು:
ಬುರ್ಲಿ ಬಿಂದುಮಾಧವರು
ಮಿಂಚಿನ ಬಳ್ಳಿಯ ಚಾವಡಿ,
ಧಾರವಾಡ.

# ಒಂದೆರಡು ಮಾತುಗಳು

ಬಳ್ಳಿಯು ೯ನೆಯ ವರುಷದಲ್ಲಿ ಕಾಲಿಟ್ಟಿದೆ. ಕನ್ನಡಿಗರ ಆಶೀರ್ವಾದವನ್ನು ಬಯಸುತ್ತಿದೆ. ತಮ್ಮ ಸಕ್ರಿಯ ಸಹಾಯವೇ ಅದರ ಶಕ್ತಿ. ಕನ್ನಡಿಗರ ಸೇವೆಯೇ ಅದರ ಗುರಿ. ಇದನ್ನೇ ಮುಂದಿಟ್ಟುಕೊಂಡು ಮುನ್ನಡೆಯುವ ಸಂಕಲ್ಪವನ್ನು ಮಾಡಿದೆ. ಬಳ್ಳಿಯ ಈ ರಾಷ್ಟ್ರೀಯೋದ್ಯಮದಲ್ಲಿ ಎಲ್ಲ ಕನ್ನಡಿಗರೂ ಎಂದಿನಂತೆ ನೆರವಾಗಬೇಕೆಂದು ಬಿನ್ನವಿಸುತ್ತೇನೆ.

ಆಧುನಿಕ ಕನ್ನಡಸಾಹಿತ್ಯದ ಮುನ್ನಡೆಯನ್ನು ಕಣ್ಣೆದುರಿಗಿಟ್ಟುಕೊಂಡು ಈ ಆತ್ಮಕಥನವನ್ನು ಬರೆಯಿಸಲಾಗಿದೆ. ನಾವು ಈ ಗುರಿಯನ್ನು ಸಾಧಿಸುವದಕ್ಕಾಗಿ ಕೇಳಿದ ಪ್ರಶ್ನೆಗಳನ್ನೆಲ್ಲ ಶ್ರೀರಂಗರು ತಮ್ಮ ಬರೆಹದಲ್ಲಿ ಉದ್ಧರಿಸಿದ್ದಾರೆ. ನಮ್ಮ ಉದ್ದೇಶವು ಸಫಲವಾಗಿದೆಯೋ ಇಲ್ಲವೋ ಎಂಬುದನ್ನು ವಾಚಕರೇ ಹೇಳಬೇಕು. ತರುಣ ಸಾಹಿತಿಗಳಿಗೆ ಈ ಪುಸ್ತಕವು ಮಾರ್ಗದರ್ಶಕವಾಗುವದೆಂದು ನಂಬಿದ್ದೇನೆ.

ತಮ್ಮ ಆತ್ಮಕಥನವನ್ನು ಬರೆದುಕೊಟ್ಟ ಮಹನೀಯರಿಗೆ, ಬಳ್ಳಿಯು ಕೃತಜ್ಞವಾಗಿದೆ. ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳ ಆಜ್ಞೆಯ ಮೇರೆಗೆ, ಪ್ರಬುದ್ಧ ಕರ್ನಾಟಕದ ಬೆಳ್ಳಿಯ ಸಂಚಿಕೆಯಲ್ಲಿಯ ಅವರ ಬರೆಹವನ್ನು ಎತ್ತಿ ತೆಗೆದುಕೊಂಡಿದ್ದೇನೆ. ಪ್ರಬುದ್ಧ ಕರ್ನಾಟಕಕ್ಕೂ ಬಳ್ಳಿಯು ಋಣಿಯಾಗಿದೆ. ಪಡಿಯಚ್ಚನ್ನು ಕೊಟ್ಟ ಕೆ. ಇ. ಬೋರ್ಡಿಗೂ ಬಳ್ಳಿಯು ಋಣಿಯಾಗಿದೆ. ಎಂದಿನಂತೆ ಕನ್ನಡಿಗರು ಮಿಂಚಿನಬಳ್ಳಿಗೆ ಸಕ್ರಿಯ ಸಹಾಯ ನೀಡಬೇಕೆಂದು ಬಿನ್ನವಿಸುತ್ತೇನೆ.

ಗಾಂಧೀ ಜಯಂತಿ
೨-೧೦-೪೬

ತಮ್ಮ ವಿಧೇಯ
**ಬುರ್ಲಿ ಬಿಂದುಮಾಧವ**

# ಹಿನ್ನೆಲೆ

ಈ 'ಆತ್ಮಕಥನಕ್ಕೊಂದು' ಆತ್ಮಕಥನ'ವಿದೆ. ನೆರೆಮನೆಯಲ್ಲಿ (೧೯೪೨) ಗುಜರಾಥ, ಮಹಾರಾಷ್ಟ್ರ, ಆಂಧ್ರ, ಸಂಯುಕ್ತಪ್ರಾಂತ, ಕರ್ನಾಟಕ ಪ್ರಾಂತಗಳ ಜನರೆಲ್ಲರೂ ಒಂದೆಡೆಯಲ್ಲಿ ಸೇರಿದ್ದೆವು. ಪರಸ್ಪರರಲ್ಲಿ ಸ್ನೇಹ ಪರಿಚಯಗಳುಂಟಾಗಬೇಕೆಂದು ಚರ್ಚಾಮಂಡಳವನ್ನೇರ್ಪಡಿಸಿದ್ದೆವು. ಪ್ರತಿಯೊಂದು ಪ್ರಾಂತದವರು ತಮ್ಮ ತಮ್ಮ ಪ್ರಾಂತದ ರಾಜಕಾರಣ, ಸಾಹಿತ್ಯ, ಸಂಸ್ಕೃತಿಗಳ ಪರಿಚಯವನ್ನು ಮಾಡಿಕೊಡುವ ಕಾರ್ಯಕ್ರಮವನ್ನೇರ್ಪಡಿಸಿದ್ದೆವು. ಕರ್ನಾಟಕದ ಆಧುನಿಕ ಸಾಹಿತ್ಯದ ಪರಿಚಯವನ್ನು ಮಾಡಿಕೊಡುವ ಪ್ರಸಂಗ ಬಂದಾಗ, ಶ್ರೀ. ಬೇಂದ್ರೆ, ಕೆ. ವಿ. ಪುಟ್ಟಪ್ಪ, ಜಹಗೀರದಾರ ಮೊದಲಾದವರ ಕೃತಿಗಳನ್ನು ಪರಿಚಯ ಮಾಡಿಕೊಡುವಾಗ, ಈ ಆತ್ಮಕಥನದ ಆವಶ್ಯಕತೆಯು ಭಾಸವಾಯಿತು.

ಜೇಲಿನಿಂದ ಮರಳಿದ ನಂತರ ನನ್ನ ಗೆಳೆಯರಾದ ಶಂ. ಬಾ. ಜೋಶಿಯವರಿಗೆ, ಈ ಕಲ್ಪನೆಯನ್ನು ಹೇಳಿದೆ. ಅವರು 'ಈ ಕಲ್ಪನೆಯೇನೋ ಒಳ್ಳೆಯದಿದ್ದರೂ ನಿನ್ನ ಉದ್ದೇಶವು ಸಾಧಿಸದೆ, ಆತ್ಮಪ್ರೌಢಿಗೆ ಮಾತ್ರ ಸಾಧನವಾಗುವದು' ಎಂದು ತಣ್ಣೀರೆರಚಿದರು. ಆದರೂ ನಿರಾಶನಾಗಲಿಲ್ಲ.

ಶ್ರೀ. ಸಿದ್ಧನಾಥಪಂತರು ಹಿಂದಿಯಲ್ಲಿ ಈ ಬಗೆಯ ಪುಸ್ತಕವಿದೆಯೆಂದೂ ಆಧುನಿಕ ಹಿಂದೀ ಸಾಹಿತ್ಯದ ಮೇಲೆ ಅದು ಒಳ್ಳೇ ಬೆಳಕು ಕೆಡವುವುದೆಂದೂ ಹೇಳಿದರು. ನಾನು ಮತ್ತಿಷ್ಟು ಆತುರನಾದೆ. ಮುಂದೆ ಕೆಲ ದಿನಗಳಲ್ಲಿಯೇ ರಬಕವಿಯ ಸಾಹಿತ್ಯಸಮ್ಮೇಲನ ಕೂಡುವದಿತ್ತು. ಅಲ್ಲಿ ಈ ಕಲ್ಪನೆ ಸಾಹಿತಿಗಳ ಮುಂದೆ ಇಟ್ಟು ಇದಕ್ಕೆ ಮೂರ್ತಸ್ವರೂಪ ಕೊಡಬೇಕೆಂದು ನಿಶ್ಚಯಿಸಿ ರಬಕವಿಗೆ ಹೊರಟೆ. ಶಕ್ಯವಿದ್ದಷ್ಟು ಜನರನ್ನು ಒಂದೆಡೆ ಕೂಡಿಸಿ, ಈ ಕಲ್ಪನೆಯನ್ನಿಟ್ಟೆ. ಶ್ರೀ. ಗೋಕಾಕರಿಗೆ, ಇದು ಬಲು ಸೇರಿತು. ಕರ್ನಾಟಕದರ್ಶನದಂತೆಯೇ ಇದು ಉಪಯುಕ್ತಗ್ರಂಥವಾಗುವದೆಂದರು. ಸಭೆಯಲ್ಲಿ ಚರ್ಚೆಯಾಗಿ, ಕೇಳುವ ಪ್ರಶ್ನೆಗಳ ರೂಪರೇಷೆಗಳು ಗೊತ್ತಾದವು. ಪರಿಷತ್ತಿನಿಂದ ಬಂದೊಡನೆ ಈ ಸಂಗತಿಯನ್ನು ಶ್ರೀ. ಬಿ ಎಂ. ಶ್ರೀಕಂಠಯ್ಯನವರಿಗೆ ಅರುಹಿದೆ. ಅವರು ಬರೆಯುವೆನೆಂದು ವಚನವಿತ್ತರು. ಕೆಲವು ಸೂಚನೆಗಳನ್ನು ಮಾಡಿದರು. ಆದರೆ ನಾಡಿನ ದುರ್ದೈವದಿಂದ ಪುಸ್ತಕ ಪ್ರಕಟವಾಗುವ ಈ ಕಾಲದಲ್ಲಿ ಅವರು ನಮ್ಮನ್ನಗಲಿ ಹೋಗಿರುವರು. ಉಪಾಯವಿಲ್ಲ.

ಈ ಸಾಹಿತಿಗಳ ಆತ್ಮಕಥನವು ಆಧುನಿಕ ಕನ್ನಡ ಸಾಹಿತ್ಯದ ಕಥನವಾಗುವದೆಂದೂ, ನಾಡಿನ ಮುನ್ನಡೆಗೆ ಸಹಾಯವಾಗುವದೆಂದೂ ಬಗೆದು ಇದೇ ಉದ್ದೇಶವನ್ನೇ ಪ್ರಕಟವಾಗಿ ಬರೆದು, ಕೆಲವು ಪ್ರಶ್ನಗಳುಳ್ಳ ಕಾಗದಗಳನ್ನು ಕನ್ನಡನಾಡಿನ ಎಲ್ಲ ಭಾಗದ ಎಲ್ಲ ಬಗೆಯ ಹಿರಿಕಿರಿಯ ಸಾಹಿತಿಗಳಿಗೆ ಕಳುಹಿಸಿದೆ. ಉತ್ತರಗಳೇ ಬರಲಿಲ್ಲ. ಮತ್ತೆ ಮತ್ತೆ ಬರೆದೆ, ಬೆನ್ನುಹತ್ತಿದೆ. ಎಷ್ಟೋ ಜನರ ಮನೆಗೆ ಎಷ್ಟೋ ಸಲ ಎಡತಾಕಿದೆ, ನಿರುತ್ಸಾಹದ ಕಾರ್ಮೋಡಗಳೇ ಕವಿದವು, ಆದರೂ ಬಿಡಲಿಲ್ಲ. ಅನೇಕ ಜನರಿಗೆ ಭೆಟ್ಟಿಯಾಗಿ ಈ ನನ್ನ ಕರುಣಿಕಥೆಯನ್ನು ಹೇಳಿಕೊಂಡೆ. ಕೆಲವರಿಗೆ ಕರುಣೆ ಬಂದಿತು. ಓಲೆ ಕಳುಹಿದ ೫೦-೬೦ ಜನರಲ್ಲಿ ೮-೧೦ ಜನರಾದರೂ ನಾಡದೇವಿಯ ಪ್ರೇರಣೆಯಿಂದ ಬರೆದು ಕಳುಹಿದರು. ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳ ಬರಹವು ನನ್ನನ್ನು ಸಮಾಧಾನಗೊಳಿಸಿತು; ಅವರು ಮೂವತ್ತು ವರುಷಗಳ ಹಿಂದೆ ಚಿತ್ರಿಸಿದ ನಾಡಿನ ಸ್ಥಿತಿಯ ಚಿತ್ರವು ಇಂದೂ ಕಣ್ಣಿಗೆ ಕಟ್ಟಿತು. ಒಳ್ಳೆಯ ಸದುದ್ದೇಶದಿಂದ ಪ್ರೇರಿತವಾದರೂ ಹೀಗೇಕೆ ? ಎಂದು ಅನೇಕ ಪ್ರಶ್ನೆಗಳು ಉದ್ಭವಿಸಿದವು. ಉದ್ದೇಶವು ಒಳ್ಳೆಯದಿದ್ದರೂ ಅದನ್ನು ನೇರವೇರಿಸುವ

ಶಕ್ತಿಯು ಇರದಿದ್ದರೆ ಅದು 'ಉತ್ಪದ್ಯಂತೇ ವಿಲೀಯಂತೆ' ಎಂಬ ಗಾದೆ-ಯಂತಾಗುವದೆಂಬ ಮಾತಿನ ಸತ್ಯತೆಯು ಅನುಭವಕ್ಕೆ ಬಂದಿತು. ಎಲ್ಲರನ್ನೂ ಪ್ರೇರೇಪಿಸುವ ಸಾಮರ್ಥ್ಯವುಳ್ಳ ಆ ಪರಮಾತ್ಮನ ಅನುಗ್ರಹವಾದರೂ ಬೇಕು. ಇಲ್ಲವೆ ಮಹಾಲಕುಮಿಯ ಸಾನ್ನಿಧ್ಯವಾದರೂ ಇರಬೇಕು. ಆದರೆ ನಾನು ನಾರಾಯಣನ ಒಕ್ಕಲು. ಮೊದಲಿನ ಅನುಗ್ರಹಶಕ್ತಿಯು ಇನ್ನೂ ಪೂರ್ಣ-ವಾಗಿಲ್ಲವೆಂಬುದು ಮೇಲೆಯೇ ಇದೆ. ಈ ಕಾರ್ಯದಲ್ಲಿ ಗೆಳೆತನ–ರೂಪಿ-ಯಾದ ಪರಮಾತ್ಮನ ಶಕ್ತಿಯೊಂದೇ ನನ್ನ ಕೈ ಹಿಡಿಯಿತು. ಅದೇ ಈ ಪುಸ್ತಕವನ್ನು ಬಯಲಿಗೆ ತಂದಿದೆ.

ಈ ಪುಸ್ತಕವು ನಮ್ಮ ಉದ್ದೇಶವನ್ನು ಪೂರ್ಣ ಮಾಡಲಾರದು ಎಂಬ ಅರಿವು ನನಗೆ ಇದೆ. ಆದರೆ ಇದು ಸಾಹಿತಿಗಳನ್ನೆಲ್ಲ ಪ್ರೇರಿಸಿ ಎರಡನೆಯ ಭಾಗಕ್ಕೆ ಮುನ್ನುಡಿಯಾಗುವದೆಂದು ಆಶಿಸಿದ್ದೇನೆ. ಆದರೂ ಈ ಪುಸ್ತಕವು ತನ್ನಷ್ಟಕ್ಕೆ ತಾನು ಪೂರ್ಣವಿದೆ. ಇದರಲ್ಲಿ ಬರೆದಿರುವ ಲೇಖಕರು, ಸಾಹಿತ್ಯ ಸೇವಕರೂ, ಸರಸ್ವತಿಯ ಉಪಾಸಕರೂ, ನಾಡಿಗಾಗಿ ದುಡಿಯುವವರೂ ಇರುವರೆಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ ನಮ್ಮ ಉದ್ದೇಶವನ್ನು ಈ ಪುಸ್ತಕವು ಪರಿಪೂರ್ಣವಲ್ಲದಿದ್ದರೂ ಕೆಲವೊಂದು ಮಟ್ಟಿಗಾದರೂ ಸಾಧಿಸಿದೆ ಯೆಂದು ಹೇಳಬಹುದು. ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳ ಉಗ್ರ ತಪಶ್ಚರ್ಯವು ಇಂದಿನ ಮೈಸೂರಿನ ಅನೇಕ ಸಾಹಿತಿಗಳ ನಿರ್ಮಾಣಕ್ಕೂ ಸಾಹಿತ್ಯದ ಸತ್ವಕ್ಕೂ ಪ್ರೇರಕವಾಗಿದೆಯೆಂಬುದು ಅವರ ಮಾತುಮಾತಿ ನಲ್ಲಿಯೂ ತುಂಬಿ ತುಳುಕುತ್ತಿದೆ. ಮೈಸೂರಿನ ನಾಡಿನಲ್ಲಿ ಕೃಷ್ಣಶಾಸ್ತ್ರಿಗಳು ಪ್ರೇರಕರಿದ್ದಂತೆ ಉತ್ತರ ಕರ್ನಾಟಕದಲ್ಲಿ ಶ್ರೀ. ಬೇಂದ್ರೆ, ಶಂ. ಬಾ. ಜೋಶಿ, ಜಹಗೀರದಾರರೂ ಮಾಡಿದ ಕೃಷಿಯೇನು ಸಾಮಾನ್ಯವಲ್ಲ; ಅವರು ಪಟ್ಟ ಶ್ರಮ, ಮಾಡಿದ ಉದ್ಯೋಗ, ನಾನು ಕಣ್ಣಾರೆ ಕಂಡಿದ್ದೇನೆ. ಅವರ ಸಾಹಿತ್ಯದ ತಪಸ್ಸೇ ಇಂದು ನಾಡಿನಲ್ಲೆಲ್ಲ ನವಸಾಹಿತ್ಯದ ಮುಖಾಂತರ ಸಾಹಿತ್ಯನಿರ್ಮಾಣ ಮಾಡುತ್ತಲಿದೆ. ಆಧುನಿಕ ಸಾಹಿತ್ಯದ ಇತಿಹಾಸದಲ್ಲಿ ಶ್ರೀ. ಎ. ಆರ್. ಕೃಷ್ಣಶಾಸ್ತ್ರಿಗಳ ಹಾಗೂ ಶ್ರೀ. ಬೇಂದ್ರೆಯವರ ಸ್ಥಾನವು ಮೇಲ್ಪಙ್ಕ್ತಿಯಲ್ಲಿ ಬರೆಯಲ್ಪಡುವದೆಂಬುದರಲ್ಲಿ ಸಂಶಯವಿಲ್ಲ. ಶ್ರೀಮಾನ್ ಗೋವಿಂದ ಪೈಗಳ ಸರಳ ಶುದ್ಧಸ್ವರೂಪ, ದೇವುಡುರವರ ಹೋರಾಟ

ನಾಡುನುಡಿಗಳಿಂದ ಪ್ರೇರಿತರಾದ ಶ್ರೀಮಾನ್ ಬೆಟಗೇರಿಯವರ ಸಹಜ ಸ್ವಾಭಾವಿಕ ವಿಕಸಿತ ರಸಿಕ ಜೀವನ, ಶ್ರೀ. ಸಿ. ಕೆ. ವೆಂಕಟರಾಮಯ್ಯನವರ ಸರಸ್ವತಿಯ ಉಪಾಸನೆ, ಶ್ರೀಮಾನ್ ಮುಗಳಿ, ಗೋಕಾಕರ ವಿಕಾಸಪಥವನ್ನೇ ರುತ್ತಿರುವ ಜೀವನಗಳು ನವಯುವಕರಿಗೆ ಮಾರ್ಗದರ್ಶಕವಾಗುವದರಲ್ಲಿ ಸಂಶಯವಿಲ್ಲ ಇವರ ಜೀವನದಲ್ಲಿ ಕಂಡುಬರುವ, ಸಾಹಿತ್ಯಮಾರ್ಗದಲ್ಲಿಯ, ಅಡೆತಡೆಗಳು ಮುಂದಣ ಸಾಹಿತಿಗಳಿಗೆ ಎಚ್ಚರಿಕೆಯನ್ನು ಕೊಡದಿರಲಾರವು. ಈ ಸರಸ್ವತಿ ಉಪಾಸಕರ ತಪಸ್ಸು ನಮ್ಮ ನಾಡಿನ ಜೀವನದಲ್ಲಿ ಒಳ್ಳೆಯ ಹದವನ್ನುಂಟು ಮಾಡುವದರಲ್ಲಿ ಸಂಶಯವಿಲ್ಲ. ಅವರ ಆಶೆ-ಆಕಾಂಕ್ಷೆಗಳು ನಮ್ಮ ನಾಡಿನ ಉಜ್ವಲವಾದ ಭವಿಷ್ಯವನ್ನು ಸೂಚಿಸುತ್ತಲಿವೆ. ಶ್ರೀಮಾನ್ ಕೃಷ್ಣಶಾಸ್ತ್ರಿಗಳ ಹಾಗು ಬೇಂದ್ರೆಯವರ ಪ್ರಾರ್ಥನೆಗಳು ಕಂನಾಡು ಮತ್ತೊಮ್ಮೆ ಜಗದ್ಗುರುತ್ವವನ್ನು ಸಂಪಾದಿಸುವ ಸೂಚನೆಯನ್ನು ಒಡನುಡಿಸುತ್ತಲಿವೆ. ಅಂತೂ ಈ ಮಹನೀಯರೆಲ್ಲರೂ ನಾಡುನುಡಿಗಳ ದಿವ್ಯಪ್ರೇರಣೆಯಿಂದ ಪ್ರೇರಿತ ರಾಗಿ ಸರಸ್ವತಿಯ ಉಪಾಸನೆಗೈಯುತ್ತಲಿದ್ದಾರೆ. ಇವರ ಜೀವನಚರಿತೆಗಳು ಮಾರ್ಗದರ್ಶಕವಾಗುವವೆಂದು ಆಶಿಸುತ್ತೇನೆ.

ನಾಡಿನ ಇನ್ನೂ ಅನೇಕ ಸಾಹಿತಿಗಳ ಜೀವನ ಚರಿತೆಗಳು ಬರದೆ ನಮ್ಮ ಉದ್ದೇಶವು ಪೂರ್ಣವಾಗುವದಿಲ್ಲ, ಎಂದು ಮೊದಲೇ ಹೇಳಿದ್ದೇನೆ. ನಮ್ಮ ಪುಸ್ತಕ ಮುದ್ರಣವು ಪ್ರಾರಂಭವಾದೊಡನೆಯೇ ಕೆಲವರು ಬರೆಯಲು ಉಜ್ಜುಗಿಸಿದ್ದನ್ನು ನಾನು ಬಲ್ಲೆ. ಬರೆಯಬೇಕೆಂಬ ಬಯಕೆಯೂ ಇದರಿಂದ ಉಂಟಾದದ್ದನ್ನು ನಾನು ಅರಿತಿರುವೆ. ಅದೆಲ್ಲವೂ ರೂಪುಗೊಂಡು ಪುಸ್ತಕ ರೂಪದಿಂದ ಆತ್ಮಕಥನದ ಎರಡನೆಯ ಭಾಗವಾಗಿ ಹೊರಬೀಳಲೆಂದು ಆಶಿಸುತ್ತೇನೆ. ಈಗ ಬರೆಯುದವರೆಲ್ಲರೂ ಬರೆಯುತ್ತಿರುವವರೂ ಈ ನನ್ನ ಆಸೆಯನ್ನು ಪೂರ್ಣಮಾಡುವರೆಂದು ನಂಬಿದ್ದೇನೆ. ಅವರ ಮೇಲಿನ ವಿಶ್ವಾಸ ದಿಂದಲೇ ಎರಡನೆಯ ಭಾಗವು ವಾಚಕರ ಕೈಸೇರುವದೆಂದು ಹೇಳಬಲ್ಲೆ. ದೇವರು ಈ ನಮ್ಮ ಸಾಹಿತ್ಯಸೇವಕರ ಆಶೆ-ಆಕಾಂಕ್ಷೆಗಳನ್ನು ಪೂರೈಸಲಿ, ನಾಡು ಮುಂದಡಿಯಿಡಲಿ, ಎಂದು ಪ್ರಾರ್ಥಿಸುವೆ.

ಗಾಂಧೀ ಜಯಂತಿ,
೨-೧೦-೪೬

ತಮ್ಮ
ಬುರ್ಲಿ ಬಿಂದುಮಾಧವ

# ಪ ರಿ ವಿ ಡಿ









ಕನ್ನಡ ಬಾವುಟವನ್ನೆತ್ತಿ
ನಾಡಿನಲ್ಲಿ ನಾಡ–ನುಡಿಗಳ ಅಭಿಮಾನವನ್ನು ತುಂಬಿದ
ನವಕರ್ನಾಟಕದ ನಿರ್ಮಾಣಕರ್ತೃ
ಕೀರ್ತಿಶೇಷ

# ಶ್ರೀ. ಬಿ. ಎಂ. ಶ್ರೀಕಂಠಯ್ಯನವರು,

ಅವರ ಅಡಿದಾವರೆಗಳಿಗೆ.

# ಸಾಹಿತ್ಯಜ್ಞರ ಆತ್ಮಕಥನ

## ಎಂ. ಗೋವಿಂದ ಪೈ

ಜಯ ಸಂವತ್ಸರದ ಮಾಘಮಾಸದ ಕೊನೆಯ ವಾರ, ಕ್ರಿಸ್ತಾನಿಯ ಇಸವಿಯ ಫೆಬ್ರುವರಿ ತಿಂಗಳಿನದೂ ಕೊನೆಯ ವಾರ, ಮಂಗಳೂರಲ್ಲಿ ನಮ್ಮ ಮನೆಯಲ್ಲಿ ತಮ್ಮನ ನೂಲುಮದುವೆಗೆ ಸಮೀಪಿಸಿದೆ. ಚಪ್ಪರ ಹಾಕಿದೆ. ಫೆಬ್ರುವರಿಯಲ್ಲಿ ಎಂದೂ ಇಲ್ಲದ ಮಳೆ ಜಿನುಗುತ್ತಿದೆ. ಅಂದು ಶನಿವಾರವೊ, ರವಿವಾರವೊ, ಅಥವಾ ಪ್ರಾಯಶಃ ಶಿವರಾತ್ರಿಯೊ. ಹೇಗೂ ಸಾಲೆ ಇಲ್ಲದ ಧಿನ. ಚಪ್ಪರದಲ್ಲಿ ಒಂದು ಕಡೆಯಲ್ಲಿ ಲಡ್ಡುಗೆಗಳನ್ನು ಕಟ್ಟುತ್ತಾರೆ, ಮತ್ತೊಂದು ಕಡೆ ಮಂಡಿಗೆಗಳನ್ನು ಮಡಚುತ್ತಾರೆ, ಬೇರೊಂದು ಕಡೆ ಸೇವಿಗೆಯನ್ನು ಒತ್ತುತ್ತಾರೆ. ಜೋಳದ ಗದ್ದೆಯಲ್ಲಿ ಗಿಳಿಗಳ ಕೋಲಾಹಲದಂತೆ ಚಪ್ಪರವೆಲ್ಲಾ ಗದ್ದಲ. ಆ ನಡುವೆ ಕುಗ್ಗಿದ ಕೊರಳಲ್ಲಿ ಇದೊಂದು ಹಾಡು ಕೇಳಿಸಿತು—

ಅಡವಿಗೆ ಪೋಪರೆನೆ । ಕಂದಯ್ಯಾ ॥ ಪಲ್ಲ ॥
ಅಡವಿಯೊಳಗೆ ಬಲು । ಕಡುಖೂಳ ಮೃಗಗಳು
ಬಿಡದೆ ಬಾಧಿಪವೊ ನಿನ್ನ ॥ ಅನು ॥

ಆಗ್ಗೆ ನನಗೆ ಏನಾಯಿತೊ, ಏನು ತೋಚಿತೊ ದೇವರೇ ಬಲ್ಲ. ಮತ್ತೆ ಚಪ್ಪರದ ಗವುಜು ನನಗೆ ಕೇಳಿಸಲಿಲ್ಲ. ನೆಟ್ಟಗೆ ಹೋದೆ, ಅಭ್ಯಾಸದ ಪುಸ್ತಕವನ್ನು

ಹಿಡಿದೆ, ಬರೆಯತೊಡಗಿದೆ. ಇಂದಿನ ಮಾತಿನಲ್ಲಿ ಏಕಾಂಕ ನಾಟಕ ಎನ್ನ ಬಹುದಾದ ಒಂದು ನಾಟಕವನ್ನು ಇಳಿಹೊತ್ತಿನೊಳಗೆ ಬರೆದು ಮುಗಿಸಿದೆ. ಅದಾದ ೨-೩ ದಿನಗಳಲ್ಲಿ ಅಂತಹದೇ ಮತ್ತೊಂದು ನಾಟಕವನ್ನು ಬರೆಯ ಹತ್ತಿದೆ, ಆದರೆ ಅದನ್ನು ಕೊನೆಗೂ ಮುಗಿಸಿಲ್ಲ. ಆ ನಾಟಕಗಳಲ್ಲಿ ಬರೀ ಮಾತು-ಹಾಡುಗಳಲ್ಲದೆ ವೃತ್ತ-ಕಂದಗಳೂ ಇಲ್ಲ, ಒಂದೊ ಅಥವಾ ಎರಡೊ ನೋಟಗಳಲ್ಲದೆ ಹೆಚ್ಚಿಗೆ ನೋಟಗಳೂ ಇಲ್ಲ, ಅವಕ್ಕೆ ಹೆಸರಿಕ್ಕಲೂ ಇಲ್ಲ. ಮುಗಿಸಿದ ನಾಟಕದಲ್ಲಿ ತಾಯಿತಂದೆಯರ ಒಬ್ಬನೇ ಮಗನು ಕಾಡಿಗೆ ಹೋಗು ತ್ತಾನೆ, ಹೋಗಬಾರದೆಂದು ಅವರು ಅಂಗಲಾಚಿ ಬೇಡುತ್ತಾರೆ. ಆಮೇಲಣ ಕಥೆ ಮರೆತುಹೋಗಿದೆ. ಕೇಳಿದ ಹಾಡಿಗೂ ಬರೆದ ನಾಟಕಕ್ಕೂ ಭೇದ ಇಷ್ಟೇ, ಅದು ತತ್ಸಮ, ಇದು ತದ್ಭವ. ಮುಗಿಸಿದ ನಾಟಕದ ಕಥೆ ಇಳಿ ಯುಷ್ಟಾದರೂ ನೆನಪಿಗೆ ಬಾರದು. ಹೀಗೆ ಸಾಹಿತ್ಯಮಂದಿರದ ಹೊಸ್ತಿಲಲ್ಲಿ ಅಕಾಂಡವಾಗಿ ಎಡವಿದೆ, ಮುಚ್ಚುಕದಕ್ಕೆ ಡಿಕ್ಕಿ ಹೊಡೆದೆ, ಅಗುಳಿ ಇಲ್ಲದ ಬಾಗಲು ಹಾರಿತು, ಒಳಹೊಕ್ಕೆ. ನನ್ನ ಜೀವಮಾನದಲ್ಲಿ ಅದೊಂದು ಅಮಗ. ನೆನಪಿನಲ್ಲಿ ಹೆಚ್ಚೆ ಚುಚ್ಚಿದಂತಿರುವ ● ದಿನವನ್ನು ಎಂದಿಗೂ ಮರೆಯುವಂತಿಲ್ಲ.

ಅಂದಿಗೆ ೧-೧॥ ವರ್ಷಗಳ ಹಿಂದೆ ೧೯೪೩ರಲ್ಲಿ ಸಾಂಗಲಿಯದೊಂದು ಮರಾಟಿ ನಾಟಕ ಮಂಡಳಿ ಮಂಗಳೂರಿಗೆ ಬಂದಿತ್ತು. ಅವರು ಆಡಿದ ಹಲವಾರು ನಾಟಕಗಳನ್ನು ಕಂಡಿದ್ದ ನನಗೆ ಅಂಥವನ್ನು ಬರೆಯಬೇಕೆಂದು ಮನಸ್ಸು ತುಯ್ಯುತಿತ್ತು. ಅಲ್ಲಿಂದಲೇ ಕೆಲಕೆಲವು ಹಾಡುಗಳನ್ನು ಮನಸ್ಸಿ ನಲ್ಲೇ ಜೋಡಿಸುತ್ತಲೂ ಮನಸ್ಸಿನಲ್ಲೇ ಜಾಡಿಸುತ್ತಲೂ ಇದ್ದೆ. ಕೊನೆಗೆ ಆ ನಾಟಕಗಳಂತೆ ೫ ಅಂಕಗಳ ಉದ್ದಕ್ಕೆ ಒಮ್ಮೆಲೆ ಹೆಣೆಯಲಾರದೆ ಏಕಾಂಕ ವನ್ನು ಬರೆದೆ. ಆದರೆ ೧೯೪೫ರ ಫೆಬ್ರವರಿಯನಕಾ ಕಾಗದದಲ್ಲಿ ಊರಿದ್ದಿಲ್ಲ.

ನಮ್ಮ ಮನೆತನ ಮಂಗಳೂರಿನದಾದರೂ, ತಂದೆಯ ಮನೆ ಮಂಗ ಳೂರಲ್ಲೇ ಇದ್ದರೂ, ನಾವು ಹುಟ್ಟಿದುದೂ ಬೆಳೆದುದೂ ಮಂಜೇಶ್ವರದಲ್ಲಿ, ನಮ್ಮ ತಾಯಿಯ ತವರುಮನೆಯಲ್ಲಿ. ಮಂಗಳೂರಲ್ಲಿ ನಮ್ಮ ಮನೆಯಲ್ಲಿದ್ದು ಕಲಿಯುತಿದ್ದಾಗಲೂ ಸಾಲೆಯ ಬಿಡುಗಾಲದಲ್ಲಿ ಹೋಗಿ ಉಳಿಯುತಿದ್ದುದೂ ಮಂಜೇಶ್ವರದಲ್ಲಿ. ಅಲ್ಲಿ ಕಾರ್ತಿಕದಿಂದ ವೈಶಾಖದ ವರೆಗೆ ಆಗಾಗ್ಗೆ ಆಯಾ ದಶಾವತಾರದ ಆಟದ ಮೇಳದವರು ಬಂದು ಯಕ್ಷಗಾನದ ಆಟವಾಡುತಿದ್ದರು.

ನಮ್ಮಲ್ಲಿಯೂ ವರ್ಷೇ ವರ್ಷೇ ಹಲವು ಆಟಗಳನ್ನು ಆಡಿಸುತ್ತಿದ್ದರು. ಚಿಕ್ಕಂದಿನಿಂದಲೇ ಅವನ್ನು ನೋಡಿ ವಿಸ್ಮಿತನಾದ ನಾನು ೧೮೯೫ನೆಯ ಮೇ ತಿಂಗಳಲ್ಲಿ ಒಂದು ಯಕ್ಷಗಾನವನ್ನು ಬರೆಯಲಿಕ್ಕೆ ಸಿಲುಕಿದೆ. ಹೆಸರು ಮಕರಾಕ್ಷನ ಕಾಳಗ. ಕಥೆ ೧೯ನೆಯ ಪುರಾಣದಲ್ಲಿಯದು. ಮಕರಾಕ್ಷನಾರೊ ಆತನೇ ಬಲ್ಲ. ಶ್ರೀರಾಮನೇನೋ ಅವನನ್ನು ಸಂಹರಿಸುತ್ತಾನೆ. ಮೂರನೆಯ ಒಂದು ಪಾಲು ಬರೆದಾಯಿತು. ಮನಸ್ಸಿಗೆ ಒಗ್ಗಲಿಲ್ಲ, ಹರಿದುಬಿಟ್ಟೆ.

ಆಮೇಲೆ ಮಂಗಳೂರಿನ ಬಾಸೆಲ್ ಮಿಶ್ಯನಿನವರು (Basel Mission)ಶಬ್ದಮಣಿದರ್ಪಣದಿಂದಲೂ ಛಂದೋಂಬುಧಿಯಿಂದಲೂ ಸಂಗ್ರಹಿಸಿ ಪ್ರಕಟಿಸಿದ (೧೮೮೯) 'ಹಳಗನ್ನಡ ವ್ಯಾಕರಣ ಸೂತ್ರಗಳು' ಎಂಬ ಪುಸ್ತಕವನ್ನು, ಅದರಲ್ಲಿ ಮುಖ್ಯತಃ ಛಂದೋಲಕ್ಷಣ ಪ್ರಕರಣವನ್ನು ಓದಿ ವೃತ್ತ-ಕಂದ-ಷಟ್ಪದಿಗಳ ಲಕ್ಷಣಗಳನ್ನು ಅರಿತುಕೊಂಡೆ. ಜತೆಗೆ ಅರ್ಥಯುಕ್ತವಾದ ಕನ್ನಡ ಜೈಮಿನಿಭಾರತ, ಗದುಗಿನ ಭಾರತ, ಶಬರಶಂಕರವಿಲಾಸವೇ ಮೊದಲಾದ ಮಹಾಕಾವ್ಯಗಳನ್ನು ಓದಿ, ೧೮೯೮ರ ವರೆಗೆ ಆ ವಿವಿಧ ಛಂದಸ್ಸುಗಳಲ್ಲಿ ಎಷ್ಟೋ ಪದ್ಯಗಳನ್ನು ಬರೆದೆ, ಬರೆದಂತೆಯೇ ಹರಿದುಬಿಟ್ಟೆ.

ಈ ನಡುವೆ ೧೮೯೭ರಲ್ಲೇನೋ ಹೀಗಾಯಿತು. ಆ ಚಿಕ್ಕಂದಿನಲ್ಲಿ ಒಮ್ಮೆ ನಮ್ಮಲ್ಲಿ ಸೋದರರೊಳಗೆ ಜಗಳ ಹತ್ತಿದಾಗ ನನ್ನಲ್ಲಿ ಸಿಟ್ಟಿಗೆದ್ದ ನನ್ನ ತಮ್ಮಂದಿರು ನಾನು ಕವನಿಸುತ್ತೇನೆಂದು ನಮ್ಮ ತಾಯಿಯೊಂದಿಗೆ ದೂರಿತ್ತರು. ನಮ್ಮ ತಾಯಿ ತೀರ ಹಳಬಳಕೆಯ ನೇಮವಂತೆ. ತುಳುನಾಡಿನ ಸರ್ವಶ್ರೇಷ್ಠ ಯಕ್ಷಗಾನ ಕವಿಯಾದ ಮೂಲ್ಕಿಯ ವಾಸುದೇವ ಪ್ರಭು ಎಂಬವರು 'ಬಿಲ್ಲಹಬ್ಬ'ವನ್ನು ರಚಿಸುತ್ತಲೆ ಅವರಿಗೆ ಹುಚ್ಚು ಹಿಡಿಯಿತು, ಅನಂತರ 'ಸಮುದ್ರಮಥನ'ವನ್ನು ರಚಿಸಿದಮೇಲೆ ಅವರ ಹುಚ್ಚು ತಿಳಿಯಿತು, ಅತಏವ ಕವನಿಸಿದರೆ ಹುಚ್ಚು ಹತ್ತುತ್ತದೆಂದು ಮನಸಾರೆ ನಂಬಿದ್ದ ನಮ್ಮ ತಾಯಿ ಅದನ್ನು ಕೇಳುತ್ತಲೇ ನನ್ನಲ್ಲಿ ರೇಗಿ ಕವನಿಸುವ ಹುಚ್ಚನ್ನು ಬಿಡಿಸಲೆಂದು ನನ್ನನ್ನು ದಂಡಿಸಿದರು. ಅಂದಿನಿಂದ ಕೆಲಕಾಲ ಮನೆಯಲ್ಲಿ ಕವನಿಸಲಾರದೆ, ನಿದ್ದೆ ಬಂದರೆ ಗದ್ದೆಯಲ್ಲಿ ಮಲಗಬಹುದೆಂದು, ಮರಮರಕ್ಕೆ ತೊಟ್ಟಿಲು ಕಟ್ಟುತ್ತ ಹೋಗುತ್ತಿರುವ ತಿರುಕಿಯಂತೆ ನಡೆದಾಡುವಾಗ ಬೀದಿಯಲ್ಲೂ ಬಿಡುವಾದಾಗ ಸಾಲೆಯಲ್ಲೂ ಕವನಿಸುತ್ತಿದ್ದೆ. ಹೀಗೆಯೇ ೧೮೯೮ರ ವರೆಗೆ ನಡೆಯಿತು.

೧೯೧೯ರಲ್ಲಿ ಶೇಕ್‌ಸ್ಪೀಯರನ (Shakespare) 'Twelfth Night' ಎಂಬ ನಾಟಕದ ಮೊದಲನೆಯ ಅಂಕದಿಂದ ಕೆಲವು ನೋಟಗಳನ್ನು ವೃತ್ತ-ಕಂದಗಳಲ್ಲಿ ಕನ್ನಡಿಸಿ, ಅವನ್ನು ಶ್ರೀ ಶ್ರೀ ನಂದಳಿಕೆ ಲಕ್ಷ್ಮೀನಾರಣಪ್ಪ (ಮುದ್ದಣ)ನವರಿಗೆ ಉಡುಪಿಗೆ ಕಳಿಸಿಕೊಟ್ಟೆ. ಮುಂದರಿಸು ಎಂದು ಅವರು ಹೇಳಿಕಳಿಸಿದರು. ಆದರೆ ಮುಂದರಿಸಲಿಲ್ಲ. ೧೯೧೯-೧೯೨೦ರಲ್ಲಿ ಶ್ರೀ ಶ್ರೀ ಪಂಜೆ ಮಂಗೇಶರಾಯರು ನನ್ನ ಕನ್ನಡ ಅಧ್ಯಾಪಕರಾದರು. ಆ ನಡುವೆ ಪ್ರಾಸವನ್ನು ಬಿಟ್ಟು ಬರೆಯಬೇಕೆಂದು ನನಗೆ ಪದೇಪದೇ ಸ್ಫುರಿಸುತಿತ್ತು. ಆದರೆ ಚೇಳಿನ ಮಂತ್ರ ಬಾರದೆ ಹಾವಿನ ಗುದ್ದಿನಲ್ಲಿ ಕೈಹಾಕಲಾರದೆ, ಆಬಗ್ಗೆ ಬಲ್ಲವರು ಬೆನ್ನು ತಟ್ಟದಲ್ಲದೆ ಹಾಗೆ ಬರೆಯಲಿಕ್ಕೆ ಮನಸ್ಸು ಅಳುಕುತ್ತಿತ್ತು. ಆಕಾರಣ ಒಮ್ಮೆ ಪಂಜೆಯವರನ್ನೇ ಕೇಳಿದೆ, ಪ್ರಾಸವನ್ನು ಬಿಟ್ಟರೆ ಹೇಗೆ? ಎಂದು. ಅವರು ಅರ್ಧ ನಗೆಯಲ್ಲಿ ಏನೋ ಕೊಕ್ಕೆಮಾತಾಡಿ ನನ್ನ ಪ್ರಶ್ನೆಯನ್ನು ತೇಲಿಸಿಬಿಟ್ಟರು. ಬೂರುಗದ ಮರ ಕಾದ ಗಿಣಿಯಂತಾಗಿ, ಇನ್ನು ನನ್ನ ಬೇಳೆ ಅವರಲ್ಲಿ ಬೇಯು ದೆಂದು ಅಲ್ಲಿಯೇ ನಿಲ್ಲಿಸಿ, ಕೈ ತೋರಿಸಿ ಅವಲಕ್ಷಣ ಎನಿಸಿಕೊಳ್ಳುವುದಕ್ಕಿಂತ ಇನ್ನು ಮುಂದೆ ನನ್ನ ಕವಿತೆಯನ್ನು ಕುರಿತು ಯಾರೊಂದಿಗೂ ಕೇಳಬಾರದು, ಯಾರು ಏನೆಂದರೂ ಮಾಡುವುದನ್ನು ಬಿಡಬಾರದು, ಸಾವಿರ ಸುತ್ತಿಗೆ ಒಂದೇ ಗಂಟು, ಆದರೆ ಉತ್ತಮೋಲಲ್ಲವೇ ಬಿತ್ತುವ ಯೋಚನೆ ? ತಕ್ಕಷ್ಟು ಬರೆ ಮೋಲಲ್ಲವೇ ಪ್ರಾಸದ ಗೋಜು? ಆತನಕ ತಣ್ಣಗಿರುವುದೇ ಲೇಸೆಂದು ಪ್ರಾಸ ಇಟ್ಟೇ ಬರೆಯುತ್ತ ಹೋದೆ.

೧೯೨೦ನೆಯ ಜುಲಾಯಿಯಲ್ಲಿ ಮಂಗಳೂರಿನಲ್ಲಿ 'ಸುವಾಸಿನಿ' ಎಂಬ ಮಾಸಪತ್ರಿಕೆ ಹೊರಟಿತು. ಅದೇ ಸಂಚಿಕೆಯಲ್ಲಿ 'ಸುವಾಸಿನಿ'ಯನ್ನು ಕುರಿತು ಕೆಲವು ಪದ್ಯಗಳನ್ನು ರಚಿಸಿದವರಿಗೆ ೫ ರೂಪಾಯಿ ಬಹುಮಾನ ಕೊಡುವರೆಂದು ಪ್ರಕಟಿಸಿರುವುದನ್ನು ಕಂಡು ಪ್ರಾಸುಳ್ಳ ೩ ಕಂದ ಪದ್ಯಗಳನ್ನು ಕಳಿಸಿಕೊಟ್ಟೆ. ಆ ಉಡುಗೊರೆ ನನಗೆ ದಕ್ಕಿತು. ಆ ಪದ್ಯಗಳು ಮರು ತಿಂಗಳಿನ ಸಂಚಿಕೆಯಲ್ಲಿ ಪ್ರಕಟವಾದುವು. ನನ್ನ ಕವಿತೆ ಅಚ್ಚಾದುದು ಅದೇ ಮೊದಲ ಬಾರಿ. ಆಮೇಲೆ ೧೯೨೨ರಲ್ಲೊ ೧೯೨೩ರಲ್ಲೊ ನನ್ನ ಪ್ರಾಸಬದ್ಧ ವಾದ 'ಸುಭದ್ರಾ ವಿಲಾಪ' ಎಂಬ ಕಂದಷಟ್ಕವೂ 'ಕಾಲಿಯಮರ್ದನ' ಎಂಬ ಕಂದಷಟ್ಕವೂ ಸುವಾಸಿನಿಯಲ್ಲಿ ಪ್ರಕಟವಾದುವು. ಅಲ್ಲಿಂದ ಕೆಲವೇ

ತಿಂಗಳಲ್ಲಿ ಸುಹಾಸಿನಿ ನಿತ್ತುಹೋಯಿತು. ಆ ಕವಿತೆಗಳ ಪ್ರತಿಗಳಾದರೂ ನನ್ನೊಂದಿಗಿಲ್ಲ. ಅಲ್ಲಿಗೆ ನನ್ನ ಸಾಹಿತ್ಯ ಜೀವನದಲ್ಲಿ ಸ್ನಾತಕತೆ ಮುಗಿಯಿತು ಎನ್ನಬಹುದು.

೧೯೦೩ರಿಂದ ೧೯೧೦ರ ವರೆಗೆ ನಾನು ಪ್ರಾಸವನ್ನು ಇಟ್ಟೊ ಬಿಟ್ಟೊ ಬರೆಯುತ್ತಿದ್ದೆ. ಪ್ರಾಸವಿಲ್ಲದುವನ್ನು ಹರಿದುಹಾಕಿದೆ. ಪ್ರಾಸವಿದ್ದವಲ್ಲಿ ಮನಸ್ಸಿಗೆ ಬಂದ ಕೆಲವನ್ನು ಮಾತ್ರ ಉಳಿಸಿದೆ. ಇವು ಮಂಗಳೂರಿನ 'ಸ್ವದೇಶಾಭಿಮಾನಿ' ಎಂಬ ಪತ್ರಿಕೆಯಲ್ಲಿ ಅಂದಂದು ಪ್ರಕಟವಾದುವು, ಆಮೇಲೆ ನನ್ನ 'ಗಿಳಿವಿಂಡಿ'ನಲ್ಲಿ ಅಚ್ಚಾಗಿವೆ.

ಆ ನಡವಂತರಲ್ಲಿ ನವೀನ ಚಂದ್ರಸೇನ ಎಂಬವರ ಶ್ರೀಕೃಷ್ಣಚರಿತ್ರಾತ್ಮಕವಾದ 'ರೈವತಕ' 'ಕುರುಕ್ಷೇತ್ರ' ಮತ್ತು 'ಪ್ರಭಾಸ' ಎಂಬ ಅಪ್ರತಿಮವಾದ ೩ ಬಂಗಾಳಿ ಕಾವ್ಯಗಳಿಂದ ಹಲವು ಸರ್ಗಗಳನ್ನು ಆಯ್ದುಕೊಂಡು 'ಶ್ರೀಕೃಷ್ಣ ಚರಿತ್ರ' ಎಂಬ ಹೆಸರಿನಿಂದ ಅವನ್ನು ಗದ್ಯದಲ್ಲಿ ಕನ್ನಡಿಸಿದೆ. ಅದರ ೬ ಪ್ರಕರಣಗಳಷ್ಟೇ ೧೯೦೯ರಲ್ಲಿ ಸ್ವದೇಶಾಭಿಮಾನಿಯಲ್ಲಿ ಪ್ರಕಟವಾದುವು. ಅದೇ ನನ್ನ ಮೊತ್ತಮೊದಲನೆಯ ಗದ್ಯಲೇಖ. ಆಬಳಿಕ ಪಾಲಿಯಿಂದ 'ಸಿಗಾಲ ಸುತ್ತ' ಎಂಬ ಬೌದ್ಧಧರ್ಮಸೂತ್ರವನ್ನು ಕನ್ನಡಿಸಿದೆ. ಅದೂ ೧೯೧೧ರಲ್ಲಿ ಸ್ವದೇಶಾಭಿಮಾನಿಯಲ್ಲಿ ಪ್ರಕಟವಾಯಿತು.

೧೯೧೧ನೆಯ ಏಪ್ರಿಲ್ ತಿಂಗಳಲ್ಲಿ ನಾನು ಸುಮಾರು ಒಂದು ತಿಂಗಳು ಬಡೋದಾ ರಾಜ್ಯದ ನವಸಾರಿ ಎಂಬಲ್ಲಿದ್ದೆ. ಆಗ್ಗೆ ಒಂದು ಮುಂಜಾನೆ ಮಾಳಿಗೆಯಲ್ಲಿ ಶತಪದಗೆಯ್ಯುತಿದ್ದಾಗ ಹಠಾತ್ತಾಗಿ, ಆಗೋದು ಹೋಗೋದು ದೇವರ ಇಚ್ಛೆ, ಹೂಡೋದು ಬಿತ್ತೋದು ನನ್ನ ಇಚ್ಛೆ, ಇನ್ನು ಮಿೂನಮೇಷ ನೋಡದೆ 'ಪ್ರಾಸವನೀಗಲೆ ತೊರೆದುಬಿಡುವುದೇ ನಿಶ್ಚಯಂ' ಎಂದಾಯಿತು. ಮರದ ಹಣ್ಣು ಮರದ ಬುಡದಾಗೆ ಬಂತು. ಕೂಡಲೆ ರವೀಂದ್ರನಾಥ ಠಾಕೂರರ 'ಅಯಿ ಭುವನ ಮನೋಮೋಹಿನೀ' ಎಂದು ಮೊದಲಾಗುವ 'ಭಾರತ ಲಕ್ಷ್ಮೀ' ಎಂಬ ಬಂಗಾಳಿ ಗೀತವನ್ನು ಕನ್ನಡಿಸಿದೆ. ಆಮೇಲೆ ಅವರದೇ 'ಶಿಶು' ಎಂಬ ಗ್ರಂಥದಲ್ಲಿಯ 'ವಿದಾಯ' ಎಂಬ ಕವಿತೆಯನ್ನೂ, ಅನಂತರ ಶೇಖ್ ಮುಹಮ್ಮದ ಇಕ್ಬಾಲರ 'ಹಿಂದುಸ್ತಾನ ಹಮಾರಾ' ಎಂಬ ಉರ್ದೂ ಗೀತ

ವನ್ನೂ ಕನ್ನಡಿಸಿದೆ. ಅಲ್ಲಿಂದ ಮೂರನೆಯ ತಿಂಗಳಲ್ಲಿ ಊರಿಗೈ ಮರಳಿದವನೇ ಅವನ್ನು ಸ್ವದೇಶಾಭಿಮಾನಿಯಲ್ಲಿ ಪ್ರಕಟಿಸಿದೆ. ಪ್ರಾಸರಹಿತವಾದ ನನ್ನ ಕವಿತೆಗಳು ಅಚ್ಚಾದುದು ಅದೇ ಮೊದಲ ಬಾರಿ.

ಆಬಳಿಕ ಅದೇ ಸಪ್ಟಂಬರದಲ್ಲಿ 'ಹೊಲೆಯನು ಯಾರು?' ಎಂಬ ಕವಿತೆಯನ್ನು ಪ್ರಾಸವಿಲ್ಲದೆ ಬರೆದು ಅದನ್ನೂ ಸ್ವದೇಶಾಭಿಮಾನಿಯಲ್ಲಿ ಪ್ರಕಟಿಸಿದೆ. ಅದು ಹೊರಬೀಳುತ್ತಲೆ, ಕನ್ನಡ ಕಾವ್ಯಮಾರ್ಗದಲ್ಲಿ ಹುಲಿ! ಹುಲಿ! ಎಂದು ನನ್ನ ಪ್ರಾಸತ್ಯಾಗವನ್ನು ಬಿರುಸಾಗಿ ಖಂಡಿಸಿ ಆ ಪತ್ರಿಕೆಯಲ್ಲಿ ಪತ್ರವ್ಯವಹಾರದ ಹೂಲಿ ಎಬ್ಬಿತು. ಅದಕ್ಕೆ ಪ್ರತ್ಯುತ್ತರವಾಗಿ, ಆಂಗ್ಲ ಸಾಹಿತ್ಯದಲ್ಲಿ ತಮ್ಮಂದಿನ ವರೆಗೆ ಅವಿಚಾಲ್ಯವಾಗಿದ್ದ ಅಂತ್ಯಪ್ರಾಸವನ್ನು (Rhyme) ಮೊತ್ತಮೊದಲಲ್ಲಿ ಸರ್ರೆ(Surrey, ಕ್ರಿ. ಶ. 1516–47)ಮತ್ತು ವಾಯಟ್ (Wyatt, 1503–44) ಎಂಬವರು ತೀರ ತೊರೆದು, ಕವಿತೆಯನ್ನು ಉಚ್ಛೃಂಖಲಿಸಿ ಪ್ರಾಸರಹಿತವಾಗಿ ಬರೆಯಲಾರಂಭಿಸಿದರು, ಅನಂತರ ಅದೇ ಬಳಿವಿಡಿದು ಶೇಕ್‌ಸ್ಪೀಯರನು (Shakespeare, 1564–1616) ತನ್ನ ನಾಟಕಗಳನ್ನೂ, ಮಿಲ್ಟನನು (Milton, 1608–74) ತನ್ನ ಕಾವ್ಯಗಳನ್ನೂ ಬರೆದರು, ಅಂದಿನಿಂದ ಇಂದಿಗೂ ಅಲ್ಲಿ ಇದೇ ಕ್ರಮ ರೂಢಿಸಿದೆ ಮಾತ್ರವಲ್ಲ, ಕನ್ನಡಕ್ಕೆ ಪ್ರಾಸವೇನೂ ವೇದವಾಕ್ಯವೂ ಅಲ್ಲ, ಶಾಶ್ವತವೂ ಅಲ್ಲ, ಅದನ್ನು ಬೇಕಾದಂತೆ ಬೇಕಾದಾಗ ಬಿಟ್ಟುಬಿಡಬಹುದು, ಅತಏವ ಕಾಲಕ್ಕೆ ತಕ್ಕಂತೆ ರಚನೆಯನ್ನೇ ಅಲ್ಲ, ಛಂದಸ್ಸನ್ನೂ ವ್ಯಾಕರಣವನ್ನೂ ಕೂಡ ತನಗೆ ಬೇಕಾದಂತೆ ಮಾರ್ಪಡಿಸಿಯೂ ನೇರ್ಪಡಿಸಿಯೂ ಕೊಳ್ಳಲಿಕ್ಕೆ ಕವಿಗೆ ಅಧಿಕಾರವಿದೆ, ಬೇಕಾದವರು ಈ ಹೊಸ ಹಾದಿಯನ್ನು ಹಿಡಿಯಲಿ, ಬೇಡದವರು ಹಳೆಯ ಹಾದಿಯಲ್ಲೇ ನಡೆಯಲಿ, ಮತ್ತೂ ಇಂದು ಒಬ್ಬನೇ ನಡೆವ ಮೇಕೆದಾರಿಯೇ ಮುಂದು ತೇರು ಎಳೆವ ಹೆದ್ದಾರಿ ಎಂದು ಮೊದಲಾಗಿ ಆ ಪತ್ರಿಕೆಯಲ್ಲಿ ಬರೆದೆ. ಆ ಪತ್ರವ್ಯವಹಾರ ಹೇಗೆ ಮತ್ತು ಎಲ್ಲಿ ವರೆಗೆ ಸಾಗುತ್ತದೊ, ಕರ್ಣಾಟಕದ ಈ ಛಾಂದಸ ಮಹಾಪ್ರಶ್ನೆಯನ್ನು ಕನ್ನಡದ ಸಾಹಿತಿಗಳು ಹೇಗೆ ಇತ್ಯರ್ಥಿಸುವರೊ ನೋಡಬೇಕೆಂದು ನಾನು ತುಂಬ ಕುತೂಹಲಿಸಿದ್ದೆ. ಆದರೆ ಆ ಕುರಿತು ಮತ್ತೂ ಮತ್ತೂ ಪತ್ರಗಳು ಕನ್ನಡದ ಆಯಾ ಭಾಗಗಳಿಂದ ಬಂದೂ ಬರುತ್ತಲೂ ಇದ್ದರೂ, ಸಾಹಿತ್ಯದ

ಗಂಧಗಾಳಿ ನಸುವೂ ಇಲ್ಲದ ಸ್ವದೇಶಾಭಿಮಾನಿಯ ಅಂದಿನ ಸಂಪಾದಕರು ಅದನ್ನು ಮೊಳೆಯಲ್ಲೇ ಕಿವುಚಿಬಿಟ್ಟರು. ಹಾಗಾಗಿ ಅದು ಬಟ್ಟಲಿನ ಬಿರುಗಾಳಿಯಂತೆ ಎದ್ದಲ್ಲಿಗೇ ಬೇಗನೆ ಆರಿತು. ಆದರೆ ತೊಟ್ಟ ಬಾಣ ತೊಟ್ಟೇ ತೀರಿತು, ಬಿಟ್ಟ ಪ್ರಾಸ ಬಿಟ್ಟೇ ಹೋಯಿತು. ಅನಂತರದ ನನ್ನ ಯಾವತ್ತೂ ಕವಿತೆಗಳಲ್ಲಿ (ಒಂದೆರಡಲ್ಲಿ ಏನೋ ವಿನಾ) ಪ್ರಾಸವಿಲ್ಲ.

೧೯೧೬ನೆಯ ಇಸವಿಯ ಚೂಣಿಯಲ್ಲಿ ಗ್ರೀಕ ರುದ್ರನಾಟಕಕಾರರಾದ ಎಸ್ಕಿಲಸ್ (Aeschylus) ಸೊಫೊಕ್ಲಿಸ್ (Sophocles) ಹಾಗು ಯುರಿಪಿಡಿಸ್ (Euripides) ಎಂಬ ರತ್ನತ್ರಯದ ನಾಟಕಗಳನ್ನು ಓದುತ್ತಲೆ, ಕನ್ನಡದಲ್ಲೂ ಅಂಥವನ್ನು ರಚಿಸಬೇಕೆಂದು ಮನಸ್ಸಾಯಿತು. ವಿರಾಟಪರ್ವದಲ್ಲಿಯ ಸೈರಂಧ್ರಿಯ ಕಥೆಯನ್ನು ಆಬಗ್ಗೆ ಆಯ್ದುಕೊಂಡೆ. ಏನೇನೋ ಕಾರಣಗಳಿಂದ ೧೯೩೦ರ ವರೆಗೆ ಬರೆಯಲಾಗಲಿಲ್ಲ. ಕೊನೆಗೆ ೧೯೩೦ರಲ್ಲಿ 'ಸೈರಂಧ್ರಿ' ಎಂಬ ನಾಟಕವನ್ನು ಬರೆಯಹತ್ತಿದೆ. ಅಂತ್ಯ ಪ್ರಾಸಯುಕ್ತವಾದ ವೀರದ್ವಿಪದಿಯಲ್ಲಿ (Heroic Couplets) ೫೧೦ ಬಂತಿಗಳನ್ನು ರಚಿಸಿದೆ. ಕೀಚಕನು ರಂಗಭೂಮಿಗೆ ಬಂದು ಗೊಂದಳದವರೊಂದಿಗೆ (Chorus) ಮಾತನಾಡುವಷ್ಟರಲ್ಲಿ ನಮಗೊಬ್ಬಳೇ ಇದ್ದ ನಮ್ಮ ಅಕ್ಕರದ ಸೋದರಸೊಸೆ ವೈಕುಂಠವಾಸಿಯಾದಳು. ತಲೆ ಬೆಪ್ಪಾಯಿತು, ಮನಸ್ಸು ಹೆಪ್ಪಾಯಿತು. ಅದನ್ನು ಅಲ್ಲಿಯೇ ಬಿಟ್ಟೆ, ಇನ್ನೂ ಅಲ್ಲಿಯೇ ಇದೆ. ಈ ನಡುವೆ, ಸಾವಿರಾರು ವರ್ಷಗಳ ಹಿಂದೆ ಮೃತಪ್ರಾಯವಾದ ಗ್ರೀಕ ನಾಟಕದ ಮಾದರಿಯನ್ನು ಕಳೆದ ಶತಮಾನದ ಇಂಗ್ಲಾಂಡದಲ್ಲಿ ಮೆಥ್ಯೂ ಆರ್ನೊಲ್ಡನೂ(Matthew Arnold)ಸ್ವಿನ್‌ಬರ್ನನೂ(Swinburne) ಮರುಕಳಿಸಲಿಕ್ಕೆ ಯತ್ನಿಸಿದರೂ, ಅದು ಸಫಲಿಸದೆ ಅವರ ನಾಟಕಗಳು ಗ್ರೀಕರ ನಾಟಕಕಲೆಯ ಮಟ್ಟಿಗೆ ಕೆಡೆದ ದೇಗುಲದ ಒಡೆದ ಮೂರ್ತಿಯಂತೆ ಪೂಜೆಗೆ ಸಲ್ಲದೆ ಅಪರೂಪವೆನಿಸಿ ನಿಂತಿವೆಯಲ್ಲದೆ, ಆ ಕಲೆಯನ್ನು ಆಂಗ್ಲ ಸಾಹಿತ್ಯದಲ್ಲಿ ಉಜ್ಜೀವಿಸಲಾರದೆ ಹೋದುವು. ಆಕಾರಣ ಮಾಗಿ ಹುಲಿಸಿರುವ ಆಂಗ್ಲ ಸಾಹಿತ್ಯಕ್ಕೆ ಸಲ್ಲದ ಗ್ರೀಕ ನಾಟಕವು ಈಗಲೀಗ ಹೂವುತ್ತಿರುವ ಇಲ್ಲವೆ ಹೀಚುತ್ತಿರುವ ಹೊಸಗನ್ನಡಕ್ಕೆ ಸಲ್ಲದೆಂದೇ ಬಗೆಗಾಣುತ್ತಿರುವುದರಿಂದ, ಇನ್ನು ಆ ನಾಟಕವನ್ನು ಕೊನೆಗಾಣಿಸೇನೆಂದು ಹೇಳಲಾರೆ.

ಚಿಕ್ಕಂದಿನಿಂದಲೆ ಪಾಶ್ಚಾತ್ಯ ಸಾಹಿತ್ಯದಲ್ಲಿ ನನಗೆ ಚತುರ್ದಶಪದಿಯ (Sonnet) ಮೆಚ್ಚು. ಪ್ರಾಸವನ್ನು ವಿಸರ್ಜಿಸುವ ವರೆಗೆ ಆಗ ಚತುರ್ದಶಪದಿಗಳನ್ನು ಬರೆಯಲಿಕ್ಕೆ ಯತ್ನಿಸಿದೆನಾದರೂ, ೧೪ ಪ್ರಾಸಾ ಗಳನ್ನು ದೊರಕಿಸಿಕೊಳ್ಳಲಾರದೆ, ಮೊದಲಿಲ್ಲದೆ ಬಡ್ಡಿ ಹೋದಂತೆ, ಒಟ ಆ ಶ್ರಮ ತೀರ ನಿಷ್ಫಲವಾಯಿತು. ಪ್ರಾಸವನ್ನು ತ್ಯಜಿಸಿದಂದಿನಿಂದ ಕೆ ಚತುರ್ದಶಪದಿಗಳನ್ನು ಬರೆದೆ, ಹರಿದೆ. ೧೯೧೬ರ ಪಶ್ಚಾರ್ಧದಲ್ಲಿ 'ಕವಿತ ತಾರ' ಎಂಬ ಒಂದು ಚತುರ್ದಶಪದಿಯನ್ನು ರಚಿಸಿದೆ. ಅದು ಮಂಗಳೂ 'ಕನ್ನಡ ಕೋಗಿಲೆ' ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಯಿತು. ಅ ನಿಂದ ಇಂದಿಗೂ ಚತುರ್ದಶಪದಿಗಳನ್ನು ಸರಾಗವಾಗಿ ಬರೆಯುತ್ತಲಿದ್ದೇ

೧೯೩೭ನೆಯ ಸಪ್ತಂಬರದಲ್ಲಿ ನನ್ನ ಕೈವಿಡಿದಾಕೆ ವೈಕುಂಠವ ಯಾದಳು. ಅಂದಿಗೆ ಹಲಗಾಲದಿಂದ ಉಬ್ಬಸದ ಉಬ್ಬರದಿಂದ ವರ್ಷ ಅತಿಕಾಲ ಹಾಸಿಗೆ ಹಿಡಿಯುತಿದ್ದ ಆಕೆಗೆ ಮಗ್ಗುಲ ದಾಯಿಯಂತಿದ್ದ ನ ಅವಳ ಅಗಲಿಕೆಯಿಂದ ಒಂದೇ ಸವನೆ ಉದ್ಯೋಗವಿಲ್ಲದಂತಾಯಿತು Othello's occupation's gone! ಒಡಲಿಲ್ಲದ ನೆರಳಿನಂ ಯಿತು. ಕೊಂಚ ಚೇತರಿಸಿಕೊಳ್ಳುವಷ್ಟರಲ್ಲಿ ನಮ್ಮ ತುಳುನಾಡಿನ ವೇಣ ಲ್ಲಿಯ ಗೊಮ್ಮಟೇಶ್ವರನ ಮಸ್ತಕಾಭಿಷೇಕಕ್ಕೆ ಓಲೆ ಬಂತು. ಆ ಪ್ರಯ ಆಕೆಯ ೪೫ ವರ್ಷಗಳ ನೆನವಿಗಾಗಿ ೩೫ ವೃತ್ತಗಳುಳ್ಳ ಪ್ರಾಸರಹಿತವ 'ಗೊಮ್ಮಟ ಜಿನಸ್ತುತಿ' ಎಂಬ ಒಂದು ಕವಿತೆಯನ್ನು ರಚಿಸಿ ೧೯೩೮ನೆ ಜನವರಿಯಲ್ಲಿ ಪ್ರಕಟಿಸಿ ಅದನ್ನು ಅವಳ ನೆನವಿಗೆ ಕಾಣಿಕೆಯಾಗಿತ್ತೆ. ಅ ಮೇ ತಿಂಗಳಲ್ಲಿ ಕಲ್ಬುರ್ಗಿಯಲ್ಲಿ ಜರಗತಕ್ಕ ಕರ್ಣಾಟಕ ಸಾಹಿತ್ಯ ಸಮ್ಮೇಲನ ಒಂದು ಲೇಖವನ್ನು ಕಳಿಸಿಕೊಡಬೇಕೆಂದು ಕರ್ಣಾಟಕ ಸಾಹಿತ್ಯ ಪರಿಷತ್ತಿ ಕಡೆಯಿಂದ ಓಲೆ ಬಂದ ಮೇರೆಗೆ ಉಮರ ಖಯ್ಯಾಮನ (Om Khayyam) ೫೦ ಪದ್ಯಗಳನ್ನು ಕನ್ನಡಿಸಿ ಕಳಿಸಿಕೊಟ್ಟೆ. ಅ ಮಂಗಳೂರಿನ 'ರಾಷ್ಟ್ರಬಂಧು'ವಿನಲ್ಲಿಯೂ, 'ಕರ್ಣಾಟಕ ಸಾಹಿತ್ಯ ಪರಿಷ ಪತ್ರಿಕೆ'ಯಲ್ಲಿಯೂ ಪ್ರಕಟವಾದುವು. ಅನಂತರ ನನ್ನ ಸಹಧರ್ಮಿಣಿ ನೆನವಿಗೆ ಬಾಷ್ಪಾಂಜಲಿಯಾಗಿ, ನಮ್ಮನ್ನು ಅಗಲಿಸಿದ ವಿಧಾತನಿಗೆ ಶ್ರದ್ಧಾಂಜ ಯಾಗಿ ಕೆಲವು ಕವಿತೆಗಳನ್ನು ರಚಿಸಬೇಕೆಂದು ಅದೇ ಮೇ ತಿಂಗಳಲಿ ಬರೆ

ತೊಡಗಿದ. ಅಂದು ಅವಳ ಅಗಲಿಕೆಯಿಂದ ನನ್ನಲ್ಲಿ ಹೊತ್ತಿ, ಮುಂದು ನಾನು ಇದ್ದಿರುವನಕಾ ನಂದದ ಶೋಕಾನಲದಿಂದ ದೇವರ ಮುಂದೆ ಹಚ್ಚಿರಿಸಿದ ದೀಪ ಎಂಬ ಅರ್ಥದಲ್ಲಿ ಆ ಕವಿತೆಗಳನ್ನು 'ನಂದಾದೀಪ' ಎಂದೆ. ಅದರ ಮೊತ್ತಮೊದಲಿನ ೮ ಕವಿತೆಗಳು ರಾಷ್ಟ್ರಬಂಧುವಿನಲ್ಲಿ ಪ್ರಕಟವಾದುವು. ೧೯೩೧ನೆಯ ಮೇ ತಿಂಗಳ ವರೆಗೆ ನಂದಾದೀಪದ ೩೭ ಕವಿತೆಗಳು ರಚಿತವಾಗಿವೆ, ಅವು ಕನ್ನಡ ನಾಡಿನ ಆಯಾ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಅಲ್ಲಿಂದ ಮುಂದುವರಿಯಲಿಲ್ಲ.

೧೯೩೦ರಲ್ಲಿ ಒಮ್ಮೆ ಪಂಜೆಯವರ ಸಂಗಾತ ಮದರಾಸಿಗೆ ಹೋಗುತಿದ್ದಾಗ ಮಾತಿಗೆ ಮಾತು ಹೊರಟು. ನನ್ನ ಆವರೆಗಣ ಕವಿತೆಗಳನ್ನು ಪುಸ್ತಕರೂಪವಾಗಿ ಪ್ರಕಟಿಸಬೇಕೆಂದು ಅವರು ಹಟ ಮಾಡಿದರು. ಅಲ್ಲಿಂದ ಮರಳಿದವರೆ ಅವನ್ನು ನನ್ನಿಂದ ಇಸಕೊಂಡರು. ಅದರ ಫಲವಾಗಿ ೧೯೩೧ನೆಯ ಜನವರಿಯಲ್ಲಿ ಅವರ ಬಾಲಸಾಹಿತ್ಯ ಮಂಡಲದ ದ್ವಾರಾ ನನ್ನ 'ಗಿಳಿವಿಂಡು' ಹೊರಟಿತು.

೧೯೩೧ನೆಯ ಜುಲಾಯಿಯಲ್ಲಿ ಶ್ರೀ ವಾಂಡೇಶ್ವರ ಗಣಪತಿರಾಯರು ನಮ್ಮಲ್ಲಿಗೆ ಮಂಜೇಶ್ವರಕ್ಕೆ ಬಂದು ತಮ್ಮ ಕೆಲವು ಕವಿತೆಗಳನ್ನು ಓದಿ ತೋರಿಸಿದರು. ಅವುಗಳಲ್ಲಿ 'ಕ್ರಿಸ್ತಜನ್ಮ' ಎಂಬ ಕವಿತೆಯನ್ನು ಕೇಳುತ್ತಲೆ, ಕ್ರಿಸ್ತನ ಕೊನೆಯ ದಿನವನ್ನು ಕುರಿತೊಂದು ಕವಿತೆಯನ್ನು ರಚಿಸಬೇಕೆಂದು ಸ್ಫುರಣವಾಯಿತು. ಕೆಲವೇ ದಿನಗಳಲ್ಲಿ 'ಗೊಲ್ಗೊಥಾ ಅಥವಾ ಯೇಸುವಿನ ಕಡೆಯ ದಿನ' ಎಂಬ ಕವಿತೆಯನ್ನು ರಚಿಸಿ ಮುಗಿಸಿದೆ. ಅದು ಸ್ವದೇಶಾಭಿಮಾನಿಯ ೪ ಸಂಚಿಕೆಗಳಲ್ಲಿ ಪಾಲಾಗಿ ಬಂತು. ಅದೇ ಮುಂದೆ ೧೯೩೭ರಲ್ಲಿ ಮಂಗಳೂರಿನ 'ತ್ರಿವೇಣಿ' ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಗಿ, ಕೊನೆಗೆ ೧೯೩೭ರ ಮಾರ್ಚಿನಲ್ಲಿ ಪುಸ್ತಕರೂಪವಾಗಿಯೂ ಪ್ರಕಟವಾಯಿತು. ಆಮೇಲೆ ಅಂದಂದು ಕವಿತೆಗಳನ್ನು ಬರೆಯುತ್ತಲೂ ಆಯಾ ಪತ್ರಿಕೆಗಳಿಗೆ ಕಳಿಸುತ್ತಲೂ ಇದ್ದೇನಲ್ಲದೆ ಕವಿತೆಯ ಪುಸ್ತಕಗಳನ್ನು ಪ್ರಕಟಿಸಿಲ್ಲ.*

---

* ಈ ಲೇಖನವನ್ನು ಬರೆದು ಕಳಿಸಿದ ಬಳಿಕ ಇದೇ ೧೯೪೬ರ ಪೂರ್ವಾರ್ಧದಲ್ಲಿ ಏಕಲವ್ಯನ ಕಥಾವಿಷಯಕವಾದ 'ಹೆಬ್ಬೆರಳು' ಎಂಬ ೪ ನೋಟಗಳ ಚಿಕ್ಕದೊಂದು ನಾಟಕವನ್ನೂ ಬುದ್ಧನ ಕೊನೆಯ ದಿನವನ್ನು ಕುರಿತ 'ವೈಶಾಖಿ' ಎಂಬ ಖಂಡಕಾವ್ಯವನ್ನೂ ರಚಿಸಿರುತ್ತೇನೆ.

ಈ ನಡುವೆ, ಕವಿತಾಕ್ಷೇತ್ರದ ಉಳುಮೆಯಲ್ಲಿ ಇದ್ದಿರುವಾಗ ಐತಿಹಾಸಿಕ ಸಂಶೋಧನದ ಮತ್ತೊಂದು ಹೊಲದಲ್ಲೂ ಗೇಯತೊಡಗಿದೆ. ಆ ಕಥೆ ಸಂಕ್ಷೇಪವಾಗಿ ಹೀಗದೆ—

ನಾನು ಸಾರಸ್ವತ ಬ್ರಾಹ್ಮಣ. ಸರಸ್ವತೀ ನದಿಯ ತೀರ ಪ್ರದೇಶದಿಂದ ತ್ರಿಹೋತ್ರ ದೇಶಕ್ಕೆ ಹೋಗಿ ನೆಲಸಿದ ಬ್ರಾಹ್ಮಣರ ಸಂತಾನರಾದ ಸಾರಸ್ವತರು ಅಲ್ಲಿಂದ ಯಾವ ಹಳಗಾಲದಲ್ಲೊ ಪಶ್ಚಿಮ ಕರಾವಳಿಯ ಗೋವೆಯಲ್ಲಿ ಬಂದು ಉಳಕೊಂಡರು. ಅಲ್ಲಿಂದ ಸಾವಿರಾರು ವರ್ಷಗಳ ವರೆಗೆ ಅವರ ಪೀಳಿಗೆ ಯವರು ತಲತಲಾಂತರಗಳಿಂದ ಗೋವೆಯಲ್ಲಿ ಸುಖವಾಗಿ ವಾಸಿಸುತ್ತಿದ್ದರು ಕ್ರಿ. ಶ. ಸು. ೧೫೬೦ರಲ್ಲಿ ಗೋವೆಯಲ್ಲಿ ನಡೆಯುತಿದ್ದ ಪೋರ್ತುಗೀಸ ಶಾಹಿಯ ಘೋರವಾದ ಅತ್ಯಾಚಾರದ ಯುಗದಲ್ಲಿ ಹಿಂದುಗಳು ಒಂದೊ ಕ್ರೈಸ್ತರಾಗ ಬೇಕು, ಇಲ್ಲವೆ ಇನ್ನು ೧-೨ ತಿಂಗಳಲ್ಲಿ ಗೋವೆಯನ್ನು ಬಿಟ್ಟು ಹೋಗಬೇಕು ಎಂದು ಸಾರಿಸಿದ ಉದ್ಘೋಷಣದ ಪ್ರಯುಕ್ತ, ಡೇಗೆಗಳಿಂದ ಅಟ್ಟಲ್ಪಟ್ಟ ಕಾಪೋತಕದಂತೆ ನಮ್ಮ ಹಿರಿಯರು ಚಲ್ಲಾಪಿಲ್ಲಿಯಾಗಿ ಅಲ್ಲಿಂದ ವಲಸೆ ತೆಗೆದು ಸಿಕ್ಕಾಬಟ್ಟೆಯಾಗಿ ಉತ್ತರ ಕನ್ನಡ, ದಕ್ಷಿಣ ಕನ್ನಡ, ಮಲೆಯಾಳ ಮೊದಲಾದ ಕರೆನಾಡುಗಳಲ್ಲಿ ಬಂದು ನೆಲಸಿದರು. ಗೋವೆಯಲ್ಲಿ ನಮ್ಮ ಹಿರಿಯರ ಮನೆತನಗಳಿದ್ದ ಆಯಾ ಊರುಗಳ ಗ್ರಾಮದೇವತೆಗಳು ಈ ಹೊರನಾಡುಗಳಲ್ಲಿ ನಮ್ಮ ಕುಲದೇವತೆಗಳಾದುವು. ನಮ್ಮಲ್ಲಿ ಪ್ರತ್ಯೇಕ ವ್ಯಕ್ತಿ ಆತನ ಜೀವಮಾನದಲ್ಲಿ ಒಮ್ಮೆಯಾದರೂ ಗೋವೆಗೆ ಹೋಗಿ ತನ್ನ ಕುಲದೇವತೆಯನ್ನು ಸಂದರ್ಶಿಸಿ ಬರಬೇಕೆಂದು ಅದೊಂದು ನಡವಳಿಕೆ ಇದೆ. ೧೯೨೪-೨೫ರಲ್ಲಿ ಗೋವೆಯ ಇತಿಹಾಸವನ್ನು, ಮುಖ್ಯತಃ ಪೋರ್ತುಗೀಸರು ಅಲ್ಲಿ ನಡಸಿದ ದಬ್ಬಾಳಿಕೆಯ ಇತಿಹಾಸವನ್ನು, ಇಂಗ್ಲೀಷಿನಲ್ಲಿಯೂ ಮರಾಟಿ ಯಲ್ಲಿಯೂ ತಕ್ಕಷ್ಟು ಓದಿದ್ದೆ. ಆ ಕಾರಣ ೧೯೨೬ರಲ್ಲಿ ಗೋವೆಯ ಯಾತ್ರೆಗೆ ಹೋಗುವಾಗ ನಮ್ಮ ಹಳೆಯ ದೇವಾಲಯಗಳನ್ನು ಕೆಡವಿ ಅಲ್ಲಿ ಇಗರ್ಜಿ ಗಳನ್ನು ಕಟ್ಟಿಸಿದ ಸ್ಥಳಗಳನ್ನು ನೋಡಿ ಬರಬೇಕೆಂದು ಸಂಕಲ್ಪಿಸಿದೆ. ಆ ಹಾಳು ಬೀಳುಗಳನ್ನು ನೋಡಿ—'ಅಪಿ ಗ್ರಾವಾ ರೋದಿತ್ಯಪಿ ದಲತಿ ವಜ್ರಸ್ಯ ಹೃದಯಮ್! '—ಮರಳಿದವನೇ ಪೋರ್ತುಗೀಸ ಕಾಟಕಾಯಿಯ ಕಾಲದ ಗೋವೆಯ ಇತಿಹಾಸವನ್ನು ಬರೆಯಬೇಕೆಂದು ಬಗೆಗೊಂಡು ಆ ಬಗ್ಗೆ ಕೆಲ

ಕಾಲ ಪೋರ್ತುಗೀಸ ಭಾಷೆಯನ್ನೂ ಕೊಂಚ ಕಲಿತುಕೊಂಡೆ. ಆದರೆ ಕೊನೆಗೆ ಗೋವೆಯಲ್ಲೇ ಸಾಕಷ್ಟು ಹೊತ್ತು ಉಳಕೊಳ್ಳದೆ ಆ ಕೆಲಸ ಸಾಗದೆಂದು ಮನವರಿತು, ಅದನ್ನು ಅಲ್ಲಿಯೇ ಮಡಗಿದೆ. ಇನ್ನು ಭಾರತ ವರ್ಷದ ಹಳೆಯ ಶಾಸನಗಳಲ್ಲಿ ಗೋವೆಯ ಸಾರಸ್ವತರ ಹೆಸರುಗಳು ಎಲ್ಲೆಲ್ಲಿ ದೊರೆಯುತ್ತವೊ ನೋಡಿ ಅವನ್ನು ಕುರಿತು ಲೇಖಗಳನ್ನು ಬರೆವೆನೆಂದು ನಿಶ್ಚಯಿಸಿ, ಅದಕ್ಕೋಸ್ಕರ ಕೆಲಕೆಲವು ಶಾಸನಗಳನ್ನೂ ಸಂಗ್ರಹಿಸಿ, 'Flashes from the Past' ಎಂದು ಕೆಲವು ಲೇಖಗಳನ್ನು ಇಂಗ್ಲೀಷಿನಲ್ಲಿ ಬರೆದೆ. ಇತಿಹಾಸ ಸಂಶೋಧನದಲ್ಲಿ ಅವೇ ನನ್ನ ಮೊದಲನೆಯ ಮೊಟ್ಟೆಗಳು. ಅವಲ್ಲಿ ೨-೩ ಲೇಖಗಳು ತಿರುವಾಂಕೋಡು (Travancore) ರಾಜ್ಯದ ಆಲಪ್ಪುಳೆ (Alleppey) ಎಂಬಲ್ಲಿಯ 'ಸಾರಸ್ವತ ಬೋಧಿನಿ' ಎಂಬ ಇಂಗ್ಲೀಷು ಮಾಸಪತ್ರಿಕೆಯಲ್ಲಿ ಪ್ರಕಟವಾದುವು. ಅಷ್ಟರಲ್ಲಿ ಚೂಣಿ ತುತ್ತಿನಲ್ಲಿ ಹರಳು ಕಡಿದಂತೆ ಆ ಪತ್ರಿಕೆ ನಿತ್ತುಹೋಯಿತು ಮಾತ್ರವಲ್ಲ, ನನಗೆ ದೊರೆತ ಆ ಹಳಗಾಲದ ಆ ಕೆಲವು ಶಾಸನಗಳಲ್ಲಿಯ ಹೆಸರುಗಳಲ್ಲಿ ಸಾರಸ್ವತರು ಯಾರು? ಸಾರಸ್ವತೇತರರು ಯಾರು? ಎಂದು ಕೊನೆಕೊನೆಗೆ ನಿಕ್ಷ್ಮಣವಾಗಿ ಭೇದಿಸಲಿಕ್ಕೂ ಬಾರದೆ ಆ ಕೆಲಸವನ್ನೂ ಅಲ್ಲಿಯೇ ಬೀಳುಕೊಂಡೆ.

ಅನಂತರ ಇನ್ನು ಭಾರತದ ಇತಿಹಾಸಕ್ಕೆ ಕೈಹಾಕಬೇಕು, ವೃಥಾ ಬಾವಿಯಲ್ಲಿ ಗಾಳಹಾಕಿ ಲಾಭವೇನು ? ಹಾಕಿದರೆ ಹಾಕಬೇಕು ಕಡಲಲ್ಲಿ ಬೀಸುಬಲೆಯನ್ನು ಎಂದು ನಿರ್ಧರಿಸಿ, ಸಮಗ್ರ ಭಾರತದ ಐತಿಹಾಸಿಕ ಸಂಶೋಧನಕ್ಕೆ ಕೈಹಚ್ಚಿದೆ. ಮೊತ್ತಮೊದಲಲ್ಲಿ ಕಾರ್ಕಳ ಹಾಗೂ ವೇಣೂರಿನ ಗೊಮ್ಮಟ ಮಹಾಮೂರ್ತಿಗಳನ್ನು ಕುರಿತು ಕಾರ್ಕಳದ 'ಶಕ್ತಿ' ಯಲ್ಲಿಯೂ ಆ ಬಳಿಕ ಶ್ರವಣಬೆಳ್ಗೊಳದ ಗೊಮ್ಮಟ ಮಹಾಮೂರ್ತಿಯ ಪ್ರತಿಷ್ಠಾಕಾಲವನ್ನು ಕುರಿತು ಪುತ್ತೂರಿನ 'ಕರ್ಣಾಟಕ ಕೇಸರಿ'ಯಲ್ಲಿಯೂ ಬರೆದೆ. ಅಂದಿನಿಂದ ಇಂದಿಗೂ ಸಂಶೋಧನೆಯ ಕೆಲಸ ಕನ್ನಡದಲ್ಲೂ ಇಂಗ್ಲೀಷಿನಲ್ಲೂ ಯಥಾವಕಾಶವಾಗಿ ಸಾಗುತ್ತಲಿದೆ.

ಕವಿತಾಮಾರ್ಗ ಬೇರೆ, ಸಂಶೋಧನದ ಮಾರ್ಗ ಬೇರೆ. ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯಿತು. ವಿಶಿಷ್ಟವಾದ ದೈವಕೃಪೆ

ಉಳ್ಳವರು ಅವೆರಡನ್ನೂ ಕೈಯ್ಕೊಂಡು ಹೊತ್ತನ್ನು ಹಿಡಿತದಿಂದ ಬಳಸಿದರೆ ಸವ್ಯಸಾಚಿಸಬಹುದಾದರೂ ನನ್ನ ಬಗೆಗಾದರೊ ಅವು ಮುಳುವಾಗಿವೆ. ಹಾಲು ಕಾಸಲಿಕ್ಕೂ ಹುರುಳಿ ಹುರಿಯಲಿಕ್ಕೂ ಸರಿಯಾಗದೆ, ಅವನ್ನು ಸವಡಿಸಲಿಕ್ಕೆ ಯತ್ನಿಸುವಲ್ಲಿ ಒಂದು ಒರೆಯಲ್ಲಿ ಎರಡು ಕತ್ತಿಗಳನ್ನು ಸಿಕ್ಕಿಸಿಡಲಿಕ್ಕೆ ಪೇಚಾಡುತ್ತೇನೆ. ಅವಲ್ಲಿ ಒಂದೊ ಅಥವಾ ಎರಡೂ ಮುರಿಯದಿರವೆಂದು ಬಲ್ಲೆ. ಆದರೆ ಎಷ್ಟೋ ವರ್ಷಗಳಿಂದ ಅವೆರಡನ್ನೂ ಸಾಧಿಸುತ್ತ ಹೋದಮೇಲೆ ಇನ್ನು ಹೆಡಮೆಟ್ಟಲಾಗುವುದಿಲ್ಲ. ಕಾಲವೂ ತಪ್ಪಿತು, ಕಾಲೂ ತಪ್ಪಿತು. ಇನ್ನು ಈಸಿದಷ್ಟು ಈಸುವುದು ಮತ್ತೆ ಗಂಗಾದೇವಿ ತೇಲಿಸಿಕೊಂಡು ಹೋದಲ್ಲಿ. ಇಲ್ಲಿಗೆ ನಾನು ಸಾಹಿತ್ಯಕ್ಷೇತ್ರದಲ್ಲೂ ಸಂಶೋಧನ ಕ್ಷೇತ್ರದಲ್ಲೂ ಹೇಗೆ ಬಂದೆನೆಂಬ ಕಥೆ ಮುಗಿಯಿತು.

ನಾನೊಬ್ಬ ದೊಡ್ಡ ಮೈಗಳ್ಳ, ಯಾವ ಕೆಲಸಕ್ಕೂ ಬಾರದ ಅತೀವ ಸೋಮಾರಿ. ಓದುತ್ತ ಬರೆಯುತ್ತಲಿದ್ದರೆ ಎಷ್ಟೋ ದಿನ ಹಾಗೆಯೇ, ಹೊಗೆಬತ್ತಿ ಸೇದುತ್ತ ಅಟ್ಟವನ್ನು ದಿಟ್ಟಿಸಿ ಕುಳಿತಿದ್ದರೆ ಮತ್ತೆಷ್ಟೋ ದಿನ ಹೀಗೆಯೇ. ಈ ಮುಂಜೋಲೆ ಹಿಂಜೋಲೆಯ ದೆಸೆಯಿಂದ ನಾನು ಬರೆವುದಾದರೂ ಆಟಿಗೊಮ್ಮೆ ಸೋಣೆಕ್ಕೊಮ್ಮೆ. ಹೀಗಾಗಿ ಎಷ್ಟೋ ಕವಿತೆಗಳನ್ನೇ ಅಲ್ಲ, ಕೆಲವು ಸಣ್ಣ ಕಥೆಗಳನ್ನೂ ಗುಣಿಸಿದ್ದೇನೆ, ಕೆಲವು ನಾಟಕಗಳನ್ನೂ ಮನನಿಸಿದ್ದೇನೆ, ಒಂದನ್ನೂ ಒರೆಯಲಿಲ್ಲ. ನಡುವಯಸ್ಸಿನಲ್ಲೆ ಅವೆಷ್ಟೋ ವರ್ಷ ಶಾರದೆಯನ್ನು ವನವಾಸಕ್ಕೆ ಅಟ್ಟಿಬಿಟ್ಟೆ. ನನ್ನ ಗಿಳಿವಿಂಡಿನ ಮುನ್ನುಡಿಯಲ್ಲಿ ಹೇಳಿರುವಂತೆ—'ಆಗಾಗ್ಗೆ ಕವಿತಂದ ದುಃಖಗಳಲ್ಲಿ ವಾಣಿಯು ಕರೆ ಕೇಳಿಸದೆ ನಡುನಡುವೆ ಎಷ್ಟೋ ವರ್ಷಗಳಾಗಿವೆ; ಕೇಳಬಂದ ಕರೆಯನ್ನು ಕೂಡ ಒತ್ತಾಯದ ಕೆಲಸಗಳ ಸಡಗರದಲ್ಲಿ ಈಗ ನಾನೊಲ್ಲೆನೆಂದು ಕಿವಿಗೆ ಹಾಕಿಕೊಳ್ಳದೆ ಇನ್ನೆಷ್ಟೋ ವರ್ಷ ಹೋಗಿವೆ. ಏವಂಚ ಕವಿಧರ್ಮದಿಂದ ಆಕೆಯನ್ನು ಓಲೈಸುವಲ್ಲಿ, ಆಕೆಯ ಸಂದೇಶಗಳನ್ನು ನಂಬುಗೆಯಿಂದ ನೆರವೇರಿಸುವಲ್ಲಿ ನಾನು ಬೇಕಾದಷ್ಟು ಅಸಡ್ಡೆ ಮಾಡಿರುತ್ತೇನೆಂಬುದನ್ನು ಪಶ್ಚಾತ್ತಾಪದಿಂದ ಒಪ್ಪಿಕೊಳ್ಳುತ್ತೇನೆ. ಆಕೆಯಾದರೂ ನನ್ನಲ್ಲಿ ಈಷತ್ತಾದರೂ ಪ್ರತೀಕಾರವನ್ನು ಬಗೆದಿಲ್ಲವಾದರೆ, ಶಾನೆ ಸಿಟ್ಟುಗೊಂಡಿಲ್ಲವಾದರೆ,

ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ

ಎಂಬ ಮಾತು ನಮ್ಮಲ್ಲಿ ಈಡೇರಿತೆಂದೇ ನಿಜ.' ೧೯೩೦ರಲ್ಲಿ ಹೀಗೆ ಬರೆದ ಮೇಲೂ ನಾನೇನೂ ತಿದ್ದಿಕೊಂಡಿಲ್ಲ. ಈಗ ಇಮ್ಮಡಿ ಜೋಬನಾಗಿದ್ದೇನೆ. ಈ ಬಗೆಯ ಆಲಾಜೋಲಿಯಿಂದ ಬಸವನ ಹುಳದಂತೆ ಮುಂದಕ್ಕೂ ಹಿಂದಕ್ಕೂ ತೆವಳುತಿದ್ದು, ಬರುವ ತೂಣ ಬಾರದೆ ಹೋಯಿತು ಇಲ್ಲವೆ ದೂರದೂರಾಯಿತು, ಮಾಡಬೇಕಾಗಿದ್ದ ಎಷ್ಟೋ ಕೆಲಸ ಮಾಡದೆ ಹೋಯಿತು ಇಲ್ಲವೆ ತೇಮಾನವಾಯಿತು. ಆದರೆ ಅಂದಿನ ಪಶ್ಚಾತ್ತಾಪ ನನಗೆ ಇಂದಿಗಿಲ್ಲ. ಏಕೆಂದರೆ ನಾನು ಜನ್ಮಾಂತರದಲ್ಲಿ ತುಂಬ ನಂಬುಗೆಯುಳ್ಳವ, ಆ ನಂಬುಗೆ ದಿನ ಹೋದಂತೆ ಹೆಚ್ಚುತ್ತಲಿದೆ. ಹಿಂದಣ ಜನ್ಮಗಳಲ್ಲಿ ಹಾಡಿ ನಿಲ್ಲಿಸಿದ ಹಾಡು ಅಲ್ಲಿಂದ ಸಾಗಿ ಈ ಜನ್ಮದಲ್ಲಿ ಹಾಡಿಸುತ್ತದೆ, ಇಲ್ಲಿಂದ ಮುಂದರಿಸಿ ಮುಂದಣ ಜನ್ಮದಲ್ಲಿಯೂ ಹಾಡಿಸಬೇಕು; ಹೀಗೆಯೇ ಸಾಗುಸಾಗುತ್ತ ಮುಂದೆ ಯಾವುದೊ ಒಂದು ಜನ್ಮದಲ್ಲಿ ಅದು ಪೂರ್ಣತಾನವಾಗಬೇಕು, ಅಮವರೆಗೆ ಜಂಪು ಹತ್ತಿದವನು ಬಾಜಿಸುವ ವೀಣೆಯಂತೆ ಬಿಟ್ಟಾಡುತ್ತ ನನ್ನನ್ನು ನುಡಿಸುತ್ತಿರಬೇಕು ಎಂದೇ ನನ್ನ ನಂಬುಗೆ.

ನಾನು ಹಾಡುತ್ತಿರುವುದು ತುಲಸೀದಾಸನೆಂದಿರುವಂತೆ ಬರೀ 'ಸ್ವಾಂತಃ ಸುಖಾಯ.' ನನ್ನ ಕೈಯಲ್ಲಿ ಲೆಕ್ಕಣಿಕೆ ಹೇಗೋ ಹಾಗೆ ವಿಧಾತನ ಕೈಯಲ್ಲಿ ನಾನು ಎಂದಷ್ಟೇ ಬಲ್ಲೆ. ಆನಂದಮಯನಾದ ಆತನ ಹುಡುಕಾಟದಲ್ಲಿ ಅಂತಃಸುಖವೇ ನನ್ನ ಸಾಧನೆ, ಕವಿತಾಮಾರ್ಗದಲ್ಲಿ ಅದೇ ನನ್ನ ಪ್ರಚೋದನೆ. ಅದನ್ನು ಬಿಟ್ಟು ಬೇರೆ ಪ್ರಚೋದನಶಕ್ತಿಯನ್ನು ನಾನರಿಯೆ. ಮನಸ್ಸು 'ರಮ್ಯಾಣಿ ವೀಕ್ಷ್ಯ ಮಧುರಾಂಶ್ಚ ನಿಶಮ್ಯ ಶಬ್ದಾನ್ ಪರ್ಯುತ್ಸುಕೀ ಭವತಿ' ಹಾಗೆ ಮನಕದಡಿದಾಗ ಎಂದೋ ಉಲಿವಕ್ಕಿಯಂತೆ ಚಿಲಿಮಿಲಿಸುತ್ತೇನೆ. ಭೇದವಿಷ್ಟೆ, ಹಕ್ಕಿ ನೊಂದಾಗ ಹಾಡದು, ನಾನು ಹೆಚ್ಚಾಗಿ ಹಾಡುವುದು ನೊಂದಾಗ. ಅದೂ ಆ ನೋವನ್ನು ಮರಸುವಂತೆ ಮನಮೆಚ್ಚಿಸಲೇ ಹೊರತು, 'ಅಂತಃ ಸುಖಾಯ'ವೇ ವಿನಾ ಪರರನ್ನು ಮೆಚ್ಚಿಸಲಲ್ಲ. ರತ್ನಾಕರ ಸಿದ್ಧನ ಮಾತಿನಲ್ಲಿ ಹೇಳುವುದಾದರೆ,

ಬೇಕಾದರಾಲಿಸುವುದು ಬೇಡವಾಗೆ ಪ
ರಾಕುಮಾಡುವುದೆನಗಲ್ಲಿ।
ವ್ಯಾಕುಲವಿಲ್ಲ ಸಂತಸವಿಲ್ಲ॥

ನನಗೆ ಯಾವೊಂದು ಗುರಿಯೂ ಇಲ್ಲ, ಅತಏವ ನನ್ನ ಕವಿತೆಗಳು ಯಾವ ಗುರಿಯನ್ನು ಎಷ್ಟರ ಮಟ್ಟಿಗೆ ಮುಟ್ಟಿವೆಯೊ ಇಲ್ಲವೆ ಸಾಧಿಸಿವೆಯೊ ಹೇಳಲಾರೆ. ಏಕೆಂದರೆ ಆವಿನಂತೆ ಕವಿ ಹಿಂಡುವುದು ಹಾಲನ್ನು, ಅದರಿಂದ ಬೆಣ್ಣೆ ಕಡೆವುದೊ, ತುಪ್ಪ ಕಾಸುವುದೊ ವಿಮರ್ಶೆಯ ಕೆಲಸ. ನನ್ನ ಅನುಭವದ ಮಟ್ಟಿಗೆ ಕವಿ ಮನವೊಲಿದಂತೆ ಬರೆವನಲ್ಲದೆ ಬೇರೆ ಯಾವ ಗುರಿಯನ್ನೂ ಅರಿಯ. ಆತನ ಕೃತಿಗಳಲ್ಲಿ ಅವಗಾಹಿಸಿ ಅವಲ್ಲಿ ಆತನು ಅರಿಯನಾದರೂ ಇದ್ದಿರುವ ಗುರಿಯನ್ನು ಕಂಡುಕೊಳ್ಳುವುದಾದರೊ ವಿಮರ್ಶಕನ ಧರ್ಮ. ನಾನು ಕವಿಯೇ ಅಹುದೊ ಅಲ್ಲವೊ ಎಂಬುದು ಭವಿಷ್ಯಕ್ಕೆ ಬಿಟ್ಟ ಪ್ರಶ್ನೆ, ವಿಮರ್ಶಕನಾದರೊ ನಾನು ಸರ್ವಥಾ ಅಲ್ಲ.

ಈ ಸಂಸಾರದಲ್ಲಿ ಸಾಹಿತ್ಯವು ಕಪ್ಪಾನೆ ನಿಕಷದಲ್ಲಿ ತೊಳಗುತ್ತಿರುವ ಚಿನ್ನದ ಒರೆಯಂತಿರಬೇಕು, ದಪ್ಪಾನೆ ಮುಗಿಲಲ್ಲಿ ಬೆಳಗುತ್ತಿರುವ ಮಿಂಚಿನ ಗೆರೆಯಂತಿರಬೇಕು. ಆ ಸಾಹಿತ್ಯವು 'ಸತ್ಯಂ ಶಿವಂ ಸುಂದರಮ್' ಆಗಿರಬೇಕು. ಇವಲ್ಲಿ ಮಧುರವೂ ಲಲಿತವೂ ಶಾಂತವೂ ಶೃಂಗಾರವೂ ಹಾಸ್ಯವೂ ವೀರವೂ ರುದ್ರವೂ ಮೊದಲಾದ ಗುಣಗಳೆಲ್ಲವೂ ಅಡಕವಾಗಿವೆ. ಮಳೆವಿಲ್ಲಿನ ಏಳು ಬಣ್ಣಗಳ ಬೆರಕೆಯಿಂದ ನೇಸರಿನ ಬೆಳಕಾಗುವಂತೆ, ಇವೆಲ್ಲವೂ ಕೂಡಿದಲ್ಲೇ ಸಾಹಿತ್ಯ. ಸಾಹಿತ್ಯದಲ್ಲಿ ಮಾನುಷಕವಾದ ಎಲ್ಲವಕ್ಕೂ ಎಡೆ ಇರಬೇಕು, ಕೊನೆಗೆ ಅಶ್ಲೀಲಕ್ಕೂ ಸ್ಥಾನವಿರಬೇಕು. ಮನುಷ್ಯನ ಹುಟ್ಟೇ ಅಶ್ಲೀಲದಿಂದ ಆಗಿರುವಲ್ಲಿ, ಪ್ರಕೃತಿಗೆತ್ತಿದ ಛಾಯಾಗ್ರಹದಂತಿರುವ ಸಾಹಿತ್ಯದಿಂದ ಅಶ್ಲೀಲವನ್ನು ತೊಡೆದುಬಿಡುವುದಾದರೂ ಹೇಗೆ? ಆದರೆ ಅಶ್ಲೀಲದ ಸೊಗಡು ಹದ ಮೀರಬಾರದು, ಅದಕ್ಕೆ ಆ ತಕ್ಕ ಮರ್ಯಾದೆ ಇರಬೇಕು, ಕಾಡಾಡಿಯಾದರೂ ಸೊಪ್ಪಿನ ಕಚ್ಚೆ ಕಟ್ಟಿಕೊಳ್ಳುವಂತೆ. ಅದನ್ನೆಲ್ಲ ಒಳಕೊಂಡು ಸಾಹಿತ್ಯವು ಸರ್ವತೋಮುಖವಾಗಿ ಸರ್ವತೋಭದ್ರವಾಗಿ ಸಾಗಬೇಕು. ಇದೇ ನನ್ನ ಎಚ್ಚರ ಕನಸು.

ಕೊನೆಯದಾಗಿ ಇದೂ ಒಂದು ಯೋಚನೆಯಾಗುತ್ತದೆ. ಈ ಜಗತ್ತಿನಲ್ಲಿ ಎಷ್ಟೋ ಕವಿಗಳೂ ಎಷ್ಟೋ ಸಾಹಿತಿಗಳೂ ಆಗಿಹೋದರು, ಭಾರತ

ವರ್ಷದಲ್ಲೇ ಎಷ್ಟೋ ಆದರು, ನಮ್ಮ ಕರ್ನಾಟಕದಲ್ಲೇ ಎಷ್ಟೋ ಆಗಿ ಹೋದರು. ಆಗಿಹೋದರೇ ಅಲ್ಲ, ಎಷ್ಟೋ ಈಗಲೂ ಇದ್ದಾರೆ. ಇವರೆಲ್ಲರ ಸಾಹಿತ್ಯವನ್ನು ಓದಲಿಕ್ಕೆ ಮಂದಿಯನ್ನು ಎಲ್ಲಿಂದ ತರಬೇಕು? ಅಥವಾ ಇವರೆಲ್ಲರ ಕೃತಿಗಳಾದರೂ ಉಳಿದಿವೆಯೋ ಅಥವಾ ಉಳಿಯುವವೇ? ಅವೆಲ್ಲವೂ ಓದಲ್ಪಡುತ್ತಿವೆಯೋ? ಬೇಡ, ಅವರಲ್ಲಿ ಶ್ರೇಷ್ಠರಾದವರ ಕವಿತೆಗಳಷ್ಟೇ ಬಾಳುವವು, ಅವಷ್ಟನ್ನೇ ಓದಿದರೆ ಸಾಕೆಂದರೆ, ಆ 'ಅಗ'ನೆಯವರು ಯಾರು? ಉದಾ. ಜಗತ್ತಿನ ಸಾಹಿತ್ಯದಲ್ಲಿ ಮುಗಿಲಿಗೆ ಮುಟ್ಟಿಸಿರುವ ಶೇಕ್‌ಸ್ಪೀಯರನೇ? ಇಲ್ಲವೆ ಅವನ ಎಡಮಗ್ಗುಲಾಗೆ ಕುಳ್ಳಿರಿಸಿರುವ ಮಿಲ್ಟನನೇ? ಅವನ ಬಗ್ಗೆ ಟೊಲ್‌ಸ್ಟಾಯಿಯ (Tolstoy) ವಿಮರ್ಶೆ ನೋಡಿ, ಇವನ ಬಗ್ಗೆ ಬ್ರಿಟಿಷ್ ಸಾಮ್ರಾಜ್ಯದ ವಿಶ್ಲೇಷದನಕಾ ಕಾಯಿ. ಅಥವಾ ಶ್ರೇಷ್ಠರ ಸಾಹಿತ್ಯವನ್ನೇ ಓದಿದರೆ ಸಾಕೆಂದರೆ, ಆ ಶ್ರೇಷ್ಠರೇ ಬರೆದರೆ ಸಾಕಲ್ಲವೇ? ಮಿಕ್ಕವರೇಕೆ ಬರೆಯಬೇಕು? ಮಾರನೆಯ ತಲೆಮಾರಿನ ಮಾತಂತಿರಲಿ, ತಮ್ಮಂದಿನಲ್ಲೇ ತಮ್ಮ ಸಾಹಿತ್ಯ ಓದಲ್ಪಡದಂಥಾ ಬಹುಸಂಖ್ಯಾಕರಾದ ಕವಿಗಳು ತಮ್ಮ ಜೀವಮಾನವನ್ನು ಕಾವ್ಯಸೃಷ್ಟಿಗೇಕೆ ದಂಡಮಾಡಿಕೊಳ್ಳಬೇಕು? ಮುಂದೆ ನಗ್ಗಾಲ ಬಂದೀತು—

> ಉತ್ಪತ್ಸ್ಯತೇ ಮಮ ತು ಕೋऽಪಿ ಸಮಾನಧರ್ಮಾ
> ಕಾಲೋ ಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ ॥

ಎಂದು ತನ್ನ ಪ್ರತಿಷ್ಠೆಯಲ್ಲಿ ದೋಲಾಯಮಾನನಾಗಿ ಭವಭೂತಿ ಬೆನ್ನು ತಟ್ಟಿಕೊಂಡನಾದರೆ, ಅದೇ ಕಾಲ ಮುಂದೆ ಎಲ್ಲವನ್ನೂ ಬಾಚಿಕೊಂಡು ಹೋಗುವುದಲ್ಲ!—

> ಸರ್ವಂ ಯಸ್ಯ ವಶಾದಗಾತ್ಸ್ಮೃತಿಪಥಂ ಕಾಲಾಯ ತಸ್ಮೈ ನಮಃ

ಎಂದು ಭರ್ತೃಹರಿ ನಿಃಶಂಕವಾಗಿ ನಿಟ್ಟುಸುರು ಬಿಟ್ಟ. ಪ್ರತ್ಯುತ, ಮೇಲ್ತರದ ಕವಿಗಳಿಗೂ ಕೆಳತರದವರಿಗೂ ವ್ಯತ್ಯಾಸವಾದರೂ ಎಷ್ಟು? ಅವರು ಪಿಂಗಾಣಿಯ ಒಡವೆಯಾದರೆ, ಇವರು ಮಣ್ಣಿನ ಒಡವೆ. ಅದು ಸೊಂಪಗಾದರೆ ಇದು ತಂಪಗೆ, ಮಣ್ಣು ಮಣ್ಣೇ. ಪಿಂಗಾಣಿಯಷ್ಟೇ ಜೋಪಾನ ಮಾಡಿದರೆ ಮಣ್ಣಿನ ಒಡವೆಯೂ ಅಷ್ಟೇಕಾಲ ಬಂದೀತು. ಹೀಗೆಲ್ಲ ಹಗಲು ಕನಸುಗಳಲ್ಲಿ

ಓಲಾಡುತ್ತ ಪಕ್ಷ-ಪ್ರತಿಪಕ್ಷವನ್ನು ಆಲೋಚಿಸುತ್ತ ಹೋಗುವಂದು, ಫ್ರೆಂಚ ಕವಿ ಮಾಲ್ಲಾರ್ಮೆ (Mallarme) ಎಂಬವನ 'ಕಡಲ ಗಾಳಿ' (Sea-wind) ಎಂಬ ಚಿಕ್ಕದೊಂದು ಕವಿತೆಯಲ್ಲಿಯ 'Whiteness profits best' = ಬಿಳುಪು ಅತ್ಯಂತ ಲಾಭಪ್ರದ, ಅಂದರೆ ಬಿಳೇ ಕಾಗದವನ್ನು ಬಿಳಿದಾಗಿ ಇರಗೊಡಿಸುವುದೇ ಲೇಸು, ಅರ್ಥಾತ್ ಬರೆಯದಿರುವುದೇ ವಾಸಿ ಎಂಬ ಮಾತು ನೆನಪಾಗಿ ಕೆರದೊಳಗಣ ಕಲ್ಲಿನಂತೆ ಹೆಜ್ಜೆಹೆಜ್ಜೆಗೂ ಚುಚ್ಚುತ್ತಿದೆ.

ಗೋವಿಂದ ಪೈ
ಮಂಜೇಶ್ವರ



## ಶ್ರೀರಂಗರ ಸಾಹಿತ್ಯ-ಯಜ್ಞ ++ ++ ++

ತಾವು ಸಾಹಿತ್ಯ ಕ್ಷೇತ್ರದಲ್ಲಿ ಬಂದುದು ಹೇಗೆ ? ತಮಗೆ ಪ್ರಚೋದನ ಶಕ್ತಿ ಯಾವುದು ? ತಾವು ಸಾಹಿತ್ಯದಲ್ಲಿ ಏನು ಸಾಧಿಸಬೇಕೆನ್ನುವಿರಿ? ತಮ್ಮ ಮಾರ್ಗದಲ್ಲುಂಟಾದ ಅನುಕೂಲ-ಪ್ರತಿಕೂಲ ಸಂಗತಿಗಳು ಯಾವುವು? ತಮ್ಮ ಗುರಿಯನ್ನು ತಮ್ಮ ಗ್ರಂಥಗಳು ಎಷ್ಟರಮಟ್ಟಿಗೆ ಸಾಧಿಸಿವೆ ? ಅದರ ಕ್ರಿಯೆ-ಪ್ರತಿಕ್ರಿಯೆ ಏನಾಗಿದೆ? ನಿಮ್ಮ ತಪಸ್ಸಿನ ಫಲಶ್ರುತಿಯೇನು ? ಸಾಹಿತ್ಯವು ಯಾವ ದೃಷ್ಟಿ ಹಾಗು ನಡಿಗೆಯಿಂದ ಮುಂದೆ ಸಾಗಬೇಕೆಂದು ಬಯಸುವಿರಿ? ತಮ್ಮ ಆಶಾವಾದ........? ಈ ಮೊದಲಾದ ಪ್ರಶ್ನೆಗಳು ಎರಡನೆಯವರಿಗೆ ಕೇಳುವುದಾದಲ್ಲಿ ಸುಗಮ, ತಾನು ಉತ್ತರ ಕೊಡಬೇಕಾದಲ್ಲಿ ಕಠಿಣ ಎಂದು ಹೇಳಿದರೆ ಮಿಂಚಿನ ಬಳ್ಳಿಯ ಸಂಪಾದಕರನ್ನು ನಾನು ದೂಷಿಸುತ್ತಲಿದ್ದೇನೆ ಎಂದು ತಿಳಿಯಬೇಕಾಗಿಲ್ಲ. ಯಾಕೆಂದರೆ, ಯಾರು ಯಾರನ್ನು ಕೇಳಿದರೂ ಈ ಪ್ರಶ್ನೆಗಳಿಗೆ ಉತ್ತರಿಸುವುದು ಮನಮೆಚ್ಚುಗೆಯ ಮಾತು ಎಂದು ನನ್ನ ಅಭಿಪ್ರಾಯ.

•

ಒಂದು ತೊಡಕು ಮಾತ್ರ ನನ್ನನ್ನು ಬಿಡುವಂತಿಲ್ಲ. ಮೊದಲ ಪ್ರಶ್ನೆಯನ್ನೇ ಆ ತೊಡಕಿನ ದೃಷ್ಟಾಂತವೆಂದು ನೋಡಬಹುದು. ನಾನು ಸಾಹಿತ್ಯ ಕ್ಷೇತ್ರದಲ್ಲಿ ಬಂದುದು ಹೇಗೆ ? ಶ್ರೀಕೃಷ್ಣನು ಅರ್ಜುನನಿಗೆ ಹೇಳುವ ಹಾಗೆ 'ದೈವಂ ಚೈವಾತ್ರ ಪಂಚಮಂ,' ಅಯ್ದನೆಯದಾದ ದೈವವೇ ನನ್ನನ್ನು

ಲಿಕ್ಕಣಿಕೆ-ಲಂಪಟನನ್ನಾಗಿ ಮಾಡಿತು ಎಂದು ಹೇಳಬಹುದು. ಸಂಸ್ಕೃತ ಮತ್ತು ಗಣಿತ ಈ ವಿಷಯಗಳನ್ನು ಅಭ್ಯಸಿಸಿ ವಕೀಲ, ಎಂಜಿನೀಯರ್ ಇಲ್ಲವೆ ಆಯ್. ಸಿ ಎಸ್. ಈ ಮೂರರಲ್ಲಿ ಒಂದು ನಿರ್ದಿಷ್ಟ ಧ್ಯೇಯವೆಂದು ಸಾಗಿದ ನಾನು ಆಶೆ-ಆಕಾಂಕ್ಷೆಗಳ ತೆರೆಗಳ ಹೊಡೆತಕ್ಕೆ ಸಿಕ್ಕು ಲೇಖನವೃತ್ತಿಗೆ ಬಂದು ತಲುಪಿದ್ದು ನನಗೇ ಆಶ್ಚರ್ಯ. ಇಂದಿಗೂ ಉಪಜೀವನಕ್ಕಾಗಿ ಶಿಕ್ಷಕನ ವೃತ್ತಿಯನ್ನು ಕೈಕೊಂಡಿದ್ದರೂ ಲೇಖನದಿಂದಲೆ ನನ್ನ ಜೀವಕ್ಕೆ ವಿಕಾಸ-ವಿಲಾಸಗಳೆಂಬ ಅನುಭವದಿಂದ ನನಗೆ ಇನ್ನಿಷ್ಟು ಆಶ್ಚರ್ಯ.

ನನಗೆ ಒಂದು ಅಭಿಮಾನದ ನೆನಹು ಇದೆ; ನನ್ನ ಹದಿನೈದನೆಯ ವಯಸ್ಸಿನಲ್ಲಿ ಅದೇ ತಾಯಿಯನ್ನು ಕಳೆದುಕೊಂಡು ನಾನು ಏಕಾಂತಪ್ರಿಯನಾಗುತ್ತಲಿದ್ದೆ; 'ಏಕಾಂತ' ಎಂಬ ಶಬ್ದ ಅಷ್ಟೊಂದು ಸಮರ್ಪಕವಾಗಲಿಕ್ಕಿಲ್ಲ, ಯಾಕೆಂದರೆ ನಾನು ನನ್ನೊಡನೆಯೆ ಸಂಭಾಷಣವನ್ನು ನಡೆಸುತ್ತಲಿದ್ದೆ. ಆ ನನ್ನ ಮನಃಸ್ಥಿತಿಯ ಒಗ್ಗೆ ತಪ್ಪು ಕಲ್ಪನೆಯಾಗುವ ಮುಂಚೆಯೆ ಅದನ್ನು ಸ್ಪಷ್ಟಗೊಳಿಸುವೆ. ಅದೇ ಸಮಯಕ್ಕೆ ನನ್ನ ವಶಕ್ಕೆ ದೊರೆತ ಸಂಸ್ಕೃತ ಮಹಾಭಾರತವನ್ನು ಓದುವ ನಿಮಿತ್ತದಿಂದ ನನ್ನೊಡನೆ ನಾನು ಸಂಭಾಷಣ ನಡೆಸುತ್ತಲಿದ್ದೆ. ಆ ಕಾವ್ಯದಲ್ಲಿಯ ಶ್ಲೋಕಗಳನ್ನು, ವಿಶೇಷವಾಗಿ ಸಭಾಪರ್ವದೊಳಗಿನ ಸಂಭಾಷಣಾತ್ಮಕ ಅಧ್ಯಾಯಗಳನ್ನು, ಗಟ್ಟಿಗಟ್ಟಿಯಾಗಿ, ಪಾತ್ರಕ್ಕನುಸರಿಸಿ ದನಿ ಬದಲಾಯಿಸಿ ಓದುತ್ತಿದ್ದೆ; ಕೋಣೆಯ ಕದವನ್ನು ಭದ್ರಗೊಳಿಸಿ ಓದುತ್ತಲಿದ್ದೆ. ನನಗೂ ಸಾಹಿತ್ಯಕ್ಕೂ ಚಿರಸ್ಮರಣೀಯವಾದ ಸಂಬಂಧವೆಂದರೆ ಇದೇ. ಇದೂ ಬಹುಕಾಲ ತಡೆಯಲಿಲ್ಲ. ಒಂದು ವರ್ಷದೊಳಗಾಗಿ ಮೊದಲನೆಯ ಅಸಹಕಾರ ಚಳವಳದ ರಣಕಹಳೆ ಊದಿತು. ಹದಿನಾರು ವಯಸ್ಸಿನ, ಮಹಾಭಾರತದ ಕಾಲದಲ್ಲಿ ನಿಮಗ್ನನಾದ ನನ್ನ ಹೃದಯವನ್ನು ಆ ಚಳವಳದಷ್ಟು ಬೇರೆ ಯಾವ ಆಂದೋಲನವೂ ಕೆಣಕಲಿಲ್ಲ. ನಾನು ಶಾಲೆಗೆ ಬಹಿಷ್ಕಾರ ಹಾಕಲಿಲ್ಲ, ಜೇಲಿಗೆ ಹೋಗಲಿಲ್ಲ—

ಇದೆಲ್ಲವೂ ನಿಜ; ಆದರೆ ಆ ಕಾರಣಕ್ಕಾಗಿಯೆ ನನ್ನ ಹೃದಯದ ಕ್ಷೋಭೆ ಮೇರೆ ಮೀರಿತು. ಉಕ್ಕಿತು. ದಕ್ಕಿಸಿಕೊಂಡ ಸಂಸ್ಕೃತ ಮಹಾಭಾರತವು ಕನ್ನಡ 'ಧರ್ಮವಿಜಯ'—ನನ್ನ ಮೊದಲ ನಾಟಕವಾಗಿ ಮರುಕಳಿಸಿತು.

ಧರ್ಮರಾಜನು ಗಾಂಧಿ; ಭೀಮಸೇನನು ಶೌಕತಅಲ್ಲಿ, ಅರ್ಜುನನು ಮಹಮ್ಮದಅಲ್ಲಿ; ಶಕುನಿಯು ಸೆಕ್ರೆಟರಿ ಆಫ್ ಸ್ಟೇಟ ಫಾರ್ ಇಂಡಿಯಾ,

ದುರ್ಯೋಧನನು ವೈಸರಾಯನು! ಹೀಗೆ ಸಾಗಿತು ಅಸಹಕಾರದಿಂದ ಕಲಕಿದ ನನ್ನ ಭಾವನಾಝುರಿ. ಒಂದೆಡೆ ಮಹಾಭಾರತ, ಇನ್ನೊಂದೆಡೆ ಮಹಾತ್ಮಾಗಾಂಧಿ—ಇವುಗಳ ಸೆಳೆತಕ್ಕೆ ಸಿಕ್ಕು—ಇಂಗ್ಲಿಶದಲ್ಲಿ ಹೇಳುವು ದಾದರೆ parallelogram of forcesದಂತೆ—ನೇರದ ದಾರಿ ಬಿಟ್ಟು ನಡುವಿನ ದಾರಿಗೆ ಸಿಕ್ಕು ನಾನು ಸಾಹಿತಿಯಾಗಿರಬಹುದೆಂದು ನನ್ನ ಊಹೆ.

ಸಾಹಿತಿಯಾಗುವ ಮಾತು ಇನ್ನೂ ಬಹು ದೂರದಲ್ಲಿದ್ದಿತು. ಗಾಂಧಿಜಿ ಯವರಿಗೆ ಶಿಕ್ಷೆಯಾದೊಡನೆ 'ರಂಗಾಚಾರ್ಯ ವಾಸುದೇವಾಚಾರ್ಯ ಜಾಹ ಗಿರದಾರ' ಇವನ 'ಧರ್ಮವಿಜಯ' ಪತ್ರಿಕೆಯು ಕೆಳಗಿಳಿಯಿತು. ಧರ್ಮ ಕ್ಕಿಂತ ದೇಶಪ್ರೇಮವು ಮುಂದಾಗಿ ಹೃದಯರಂಗಸ್ಥಲದಲ್ಲಿ ನರ್ತಿಸತೊಡ- ಗಿತು. ಆ ಕಾಲಕ್ಕೆ ಅತ್ಯಂತ ಶ್ರದ್ಧೆಯಿಂದ ಈ ತರುಣನು ಪರಿಶ್ರಮಪಟ್ಟು 'ಮರಾಠೇ ವ ಇಂಗ್ರಜ' ಎಂಬ ಮರಾಠೀ ಗ್ರಂಥದ ಕೆಲ ಪುಟಗಳನ್ನು ತಿರುವಿ ಹಾಕಿದನು. ಭಾಷೆ ತಿಳಿಯಲಿಲ್ಲ, ಭಾವ ತಿಳಿಯಿತು. ದೇಶಪ್ರೇಮದ ಒಳಗುದಿಯು ನಾಟಕಜ್ವರವಾಗಿ ಹೊರಬಿದ್ದಿತು, 'ಪ್ರಣಯಸರಣಿ ಅಥವಾ ಸ್ವಾರ್ಥತ್ಯಾಗ' ಎಂದು.

ಸಾಹಿತ್ಯ ಸಂಬಂಧವು ಅಲ್ಲಿಗೆ ಕತ್ತರಿಸಿತೆಂದು ಹೇಳಲು ಅಡ್ಡಿ ಇಲ್ಲ. ಜೂನ್ ೧೯೨೧ರಿಂದ ಜೂನ್ ೧೯೨೯ರ ವರೆಗೆ ಮತ್ತೆ ಯಾವ ವಿಚಾರ ಸುಳಿದರೂ, ಯಾವ ಆಕಾಂಕ್ಷೆ ಹೊಳೆದರೂ ಸಾಹಿತ್ಯಕ್ಕೆ ಮಾತ್ರ ಅದರಲ್ಲಿ ಸ್ಥಾನವಿದ್ದಿರಲಿಲ್ಲ. ಕಾಲೇಜದ ಶಿಕ್ಷಣವೂ ವಿಲಾಯತಿಯ ಪ್ರವಾಸವೂ ಇದೇ ಅವಧಿಯಲ್ಲಿ ನಡೆದುಹೋದುವು. ಎರಡು ವಿಷಯಗಳು ಮಾತ್ರ ತಲೆಯಲ್ಲಿ ಇನ್ನೂ ಹುದುಗಿಕೊಂಡಿದ್ದುವು ಎಂದು ಹೇಳಬಹುದು. ಒಂದು, ಮಹಾಭಾರತ; ಇನ್ನೊಂದು ಮಹಾತ್ಮರ ಭಾರತ. ಒಂದು, ಸಂಭಾಷಣದ ಶೈಲಿ; ಇನ್ನೊಂದು, ತನ್ನವರ ಉನ್ನತಿ.

× × × ×

ಮೇಲೆ ಹೇಳಿದಂತೆ ಎಂಟು ವರ್ಷಗಳ ವರೆಗೆ ಉಚ್ಚ ಶಿಕ್ಷಣದ ಆಕಾಂಕ್ಷೆಯ ಹೊರತು ಬೇರೆ ಆಕಾಂಕ್ಷೆಯೆ ಇದ್ದಿರಲಿಲ್ಲ. ಉಚ್ಚ ಶಿಕ್ಷಣದ ಆಕಾಂಕ್ಷೆಯಾದರೂ ಯಾವುದಿದ್ದಿತು? ಇಂದಿಗೂ ಹೇಳುವುದು ಕಷ್ಟವಾದ್ದ ರಿಂದ, ಆಗಿನ ಕಾಲಕ್ಕಾಗಿ ಹೇಳುವುದು ಶುದ್ಧ ಅಪ್ರಾಮಾಣಿಕವಾಗಬಹು ದಾಗಿದೆ. ಒಂದು ಮಾತನ್ನು ಮಾತ್ರ ಧೈರ್ಯದಿಂದ ಹೇಳಬಹುದು. ೧೯೨೫ರ

ಅಕ್ಟೋಬರದಿಂದ ೧೯೨೮ರ ಡಿಸೆಂಬರದ ವರೆಗೆ ಇಂಗ್ಲಂಡಿನಲ್ಲಿದ್ದಾಗ ಒಳ-ಗಿಂದೊಳಗೆಯೆ ಸ್ವದೇಶದ ಬಗ್ಗೆ ಕಳವಳವು ಕುದಿಯುತ್ತಲಿದ್ದಿತು. ಇಂಗ್ಲಂಡಿನಲ್ಲಿ ಸಾಮಾನ್ಯ ಜನತೆಯ ಶಿಕ್ಷಣದ, ಸುಖಸಾಧನದ, ನಾಗರಿಕ ಹಕ್ಕುಗಳ ಮಟ್ಟು ನಮ್ಮವರಿಗಿಂತ ಮೇಲಿನದು. ಇಂಗ್ಲಂಡ ಚಿಕ್ಕ ದೇಶ, ನಮ್ಮದು ದೊಡ್ಡದು; ಒಂದು ವೇಳೆ ನಮ್ಮಲ್ಲೂ ಸುಖಸಾಧನ ಮತ್ತು ಸ್ವಾತಂತ್ರ್ಯ ಹಕ್ಕು ಪ್ರಸ್ಥಾಪಿತವಾದರೆ—? ಕಲ್ಪನೆ, ಕೇವಲ ಕನಸು!

ಆ ಕನಸನ್ನು ಕಾಣುತ್ತಲಿರುವ ಅರೆನಿದ್ರೆಯಲ್ಲಿಯೆ—ಡಿಸೆಂಬರ ೧೯೨೮ಕ್ಕೆ ಮರಳಿ ಬಂದೆ. ಮೊದಲಿನ ೮—೧೦ ದಿವಸಗಳಲ್ಲಿಯೆ ಉಸಿರಾಡಿಸದಷ್ಟು ಸಂಕುಚಿತ ಸಾಮಾಜಿಕ ಜೀವನ, ನಿರುದ್ಯೋಗ ಇವುಗಳ ಅನುಭವ; ಅಷ್ಟರಲ್ಲಿಯೆ ವಿಷಮುಜ್ವರ; ಹಣ್ಣಾದ ಮನಸ್ಸು, ಹಣ್ಣಾದ ದೇಹ, ಇತ್ತ ಮೂರು ವರ್ಷದ ಇಂಗ್ಲಂಡದ ಅನುಭವದಿಂದ ತನ್ನವರೊಡನೆ, ತನ್ನ ಗೆಳೆಯರೊಡನೆ ಹೊಂದಿಕೊಳ್ಳದಂತಹ ವಿಚಾರದೃಷ್ಟಿ. ಹೀಗಾಗಿ ನನ್ನನ್ನು ಮೊದಲಿನ ನನ್ನ ಸಮಾಜದಿಂದ ನಾನೇ ಬಹಿಷ್ಕರಿಸಿಕೊಂಡೆ ಎಂದು ಹೇಳಬಹುದು.

೧೯೨೯ರ ಜೂನ. ನಿರುದ್ಯೋಗದಿಂದ, ವಿಷಮುಜ್ವರದ ಪರಿಣಾಮವಾಗಿ ತನ್ನನ್ನು ತಾನೇ ಬಹಿಷ್ಕಾರಕ್ಕೆ ಗುರಿಮಾಡಿ, ಅನ್ಯರ ಸಹವಾಸ ಬೇಡವಾಗಿ ಮುಂಬಯಿಯಲ್ಲಿ ಕಾಲ ಕಳೆವಾಗ ಚಿಕ್ಕತನದ ಸ್ವಭಾವವೊಂದು ಮತ್ತೆ ತಲೆ ಎತ್ತಿತು; ಅದೆಂದರೆ, ನನ್ನೊಡನೆಯೆ ನಾನು ಸಂಭಾಷಣವನ್ನು ನಡೆಸಿದೆ. ನಾನೆಂದರೆ ಯಾರು? ವಂಶಾನುವಂಶಿಕವಾಗಿ, ರಕ್ತಗತವಾಗಿ ನಡೆದುಬಂದ ವೈದಿಕ ಸಂಪ್ರದಾಯದ ಪ್ರತೀಕವೂ ನಾನು; ಶಿಕ್ಷಣವನ್ನು ಪಡೆದುದಕ್ಕೆ ಅನಿವಾರ್ಯವಾಗಿ ಸಾಮಾಜಿಕ ಜೀವನದಲ್ಲಿ ಬೆರೆತುಕೊಳ್ಳಬೇಕಾದ ಆಧುನಿಕನೂ ನಾನು; ನನ್ನವರಿಗಿಂತ ಹೆಚ್ಚಿನ ಅನುಭವವನ್ನೂ ಬುದ್ಧಿಶಕ್ತಿಯನ್ನೂ ಪಡೆದು ಅವರಿಗೆ ಮುಂದಾಳು ಆಗಬೇಕೆಂಬ ಸಾಸಿಗನೂ ನಾನು; ನನ್ನವರ ದಡ್ಡತನವನ್ನೂ ಬಡತನವನ್ನೂ ತಡೆಯದ ಕುಟುಂಬದ ಅಸಂತುಷ್ಟ ಸದಸ್ಯನೂ ನಾನು! ಈ ನಾಲ್ವರನ್ನು ಇದಿರು ಸಾಲಾಗಿ ನಿಲ್ಲಿಸಿ, ನಿರುದ್ಯೋಗ ಲಂಪಟನಾಗಿ, ಕೈಯಲ್ಲಿ ಸಿಗರೇಟು ಬಾಯಲ್ಲಿ ತಂಬಾಕು ಹೊಟ್ಟೆ ಬರಿದು ಹೆಮ್ಮೆ ಹಿರಿದು ಆಗಿ ಪರೀಕ್ಷಕನಾಗಿರುವ ಇಂಗ್ಲಂಡ-ರಿಟರ್ನ್ಡ—ಇಂಡಿಯಾ ಟರ್ನ್‌ಟರ್ನ್ಡ ವ್ಯಕ್ತಿಯೊಬ್ಬ ನಾನೆ! ವೇದವ್ಯಾಸಾಚಾರ್ಯ—ಶ್ರೀನಿವಾಸರಾವ-ಮಾಧವ—ಮನೋಹರ—ಆರ್. ವ್ಹಿ. ಜಾಹಗಿರದಾರ—ಈ

ಅಯ್ದು 'ನಾನು'ಗಳೆ ತಂತಮ್ಮೊಳಗೆ ಮಾತನಾಡುತ್ತ ನನ್ನ 'ಉದರ ವೈರಾಗ್ಯ' ನಾಟಕವನ್ನು ಬರೆದುವು—ಇಲ್ಲವೆ ಬರೆಯಿಸಿದುವು ಎಂದು ಹೇಳಬಹುದು.

× × × ×

ನನ್ನ ಪ್ರಾರಂಭದ ನಾಟಕಕ್ಕೆ ಮಹಾಭಾರತವೆ ಸ್ಫೂರ್ತಿ, ನನ್ನ ನಾಟಕದ ಪ್ರಾರಂಭಕ್ಕೆ ಮೇಲೆ ಹೇಳಿದ ಮನಸಿನ ಮಹಾಭಾರತವೆ ಸ್ಫೂರ್ತಿ ಎನ್ನಬಹುದು. ನನ್ನ ನಾಟಕಗಳಲ್ಲಿ ಸಂಭಾಷಣವು ಮಿತವಾಗಿದೆ, ಮಾರ್ಮಿಕ ವಾಗಿದೆ, ಚಿತ್ತವೇಧಕವಾಗಿದೆ, ಅದೊಂದು ನನ್ನ ವೈಶಿಷ್ಟ್ಯವಾಗಿದೆ ಎನ್ನು ವವರೆಲ್ಲ ಈ ಕಾರಣದ ಮಹತ್ತ್ವವನ್ನರಿಯಬಹುದಾಗಿದೆ. ಶ್ರೀರಂಗನಿಗೆ ಸಂಭಾಷಣ ಲೇಖನದ ಚಾತುರ್ಯವನ್ನು ಕಲಿಸಿದವನು ವ್ಯಾಸಮಹರ್ಷಿಯು. ಶ್ರೀರಂಗನ ನಾಟಕಗಳಲ್ಲಿ ಪೌರಾಣಿಕ ಸಂದರ್ಭಗಳಿದ್ದರೆ ಅದೂ ಆ ಮಹ ರ್ಷಿಯ ಪ್ರಭಾವವೆ.

× × × ×

ವ್ಯಾಸಮಹರ್ಷಿಯ ಹೆಸರನ್ನೆತ್ತಿದ ದಂದರ್ಭದಲ್ಲಿಯೆ ನನ್ನ ನಾಟ್ಯ ಜೀವನದ ಇನ್ನೊಂದು ವೈಶಿಷ್ಟ್ಯವನ್ನು ಹೇಳಬೇಕಾಗುವುದು. ಮಹಾಭಾರ ತದ ಒಂದು ಸನ್ನಿವೇಶವನ್ನೆ ಎತ್ತಿಕೊಂಡು,ಗುರುವಿಗಿಂತ ಒಂದು ಹೆಜ್ಜೆ ಮುಂದೆ ಇಡಬೇಕೆಂಬಂತೆ, **ನಿರುತ್ತರ ಕುಮಾರ** ಎಂಬ ಮೂರು ದೃಶ್ಯಗಳ ಏಕಾಂಕ ವನ್ನು ಬರೆದಿದ್ದೇನೆ. ಇಂದಿಗೂ ನನ್ನ ಮೆಚ್ಚುಗೆಯ ನನ್ನ ಬರೆಹಗಳಲ್ಲಿ ಅದಕ್ಕೇ ಮೊದಲ ಸ್ಥಾನವಿದೆ, ಮೇಲಿನ ಸ್ಥಾನವಿದೆ. ನನ್ನ ಮನೋಗತವು ಸೂಚ್ಯವಾಗುವಂತೆ ಆ ಏಕಾಂಕದ ವಿಷಯದಲ್ಲಿ '**ಹ-ವ್ಯಾಸ** ಮುನಿ ವಿರಚಿತ' ಮೊದಲಾಗಿ ಬರೆದುಕೊಂಡಿದ್ದೇನೆ. ಸಾಹಿತ್ಯವನ್ನು ನಾನು ಯಾವ ಉದ್ದೇಶ ದಿಂದ ಬರೆಯುತ್ತೇನೆ? '**ಹವ್ಯಾಸ**'. ಇದೇ ನನ್ನ ಉತ್ತರ. ನಿರುತ್ತರ ಕುಮಾರದಲ್ಲಿಯ ಉತ್ತರಕುಮಾರನಂತೆ ಕೆಣಕುವ, ಕೆದರುವ, ಕುಣಿಯುವ, ಕುತೂಹಲದ ಆತ್ಮರಂಜನೆಗಾಗಿ ನಾನು ನಾಟಕಗಳನ್ನು ಬರೆಯುತ್ತೇನೆ. 'ಅಯ್ದು ಗಂಡಂದಿರನ್ನು ಮಾಡಿಕೊಂಡವಳಿಗೆ ಆರನೆಯ ಗಂಡನ ವಿಚಾರ ಬಂದಿರಬಾರದೇಕೆ?' ಎಂಬ ಉತ್ತರಕುಮಾರನ ಸ್ವಭಾವವೆ ನನ್ನ ಸಾಮಾಜಿಕ ನಾಟಕಗಳಲ್ಲಿಯ ಕಟುವಿಡಂಬನೆಯ ಮತ್ತು ಹೊನಲು ಹಾಸ್ಯದ ಬುನಾದಿ ಯಾಗಿದೆ. ನನ್ನೊಡನೆಯೆ ನಾನು ಸಂಭಾಷಣವನ್ನು ನಡೆಸುವುದರಿಂದ

ಬುದ್ಧಿಪೂರ್ವಕವಾಗಿ ಜನತೆಯು ಸಮಕ್ಷದಲ್ಲಿ ಆಡಲಾಗದ ಕಟುಸತ್ಯವು ನನ್ನ ನಾಟಕಗಳಲ್ಲಿ ಕಾಣಬಹುದು.

ನಾನು ಹೇಳುವ ಮಾತು ಅನೇಕರಿಗೆ, ನನ್ನ ಬರಹಗಳನ್ನು ಮೆಚ್ಚುವವರಿಗೆ ಕೂಡ ಒಪ್ಪಿಗೆಯಾಗುವುದಿಲ್ಲೆಂಬುದನ್ನು ನಾನು ಅರಿತಿರುವೆ. ಇದಕ್ಕೊಂದು ಕಾರಣವಿದೆ; ನಮ್ಮಲ್ಲಿ ವಿಮರ್ಶೆಯ ಅಭಾವವಿದ್ದುದೆ ಕಾರಣ. ಸಮಾಜವನ್ನು ಸುಧಾರಿಸುವುದಕ್ಕಾಗಿ ನಾನು ಬರೆಯುತ್ತಿದ್ದೇನೆ ಎಂದು ಕೆಲವರು; ಇವರಿಗಿಂತ ತಾವು ಪಂಡಿತರೆಂದು ತೋರಿಸಲು ಬರ್ನಾರ್ಡ ಶಾನಂತೆ ನಾನು ಎಂದು ಇನ್ನು ಕೆಲವರು. ನನ್ನ ಅಭಿಪ್ರಾಯದಲ್ಲಿ ನನ್ನ ಸಾಹಿತ್ಯವು ಇವರಿಬ್ಬರಿಗೂ ಅಷ್ಟೆ ಕಡಿಮೆ ತಿಳಿದಿದೆ. ಸಮಾಜಸುಧಾರಕನಾಗಿದ್ದರೆ ಮೊದಲ ನಾಟಕಕ್ಕೇ ನನ್ನ ಸಾಹಿತ್ಯಜೀವನ ಕೊನೆಗಾಣುತ್ತಲಿದ್ದಿತು. ಹದಿನೈದು ದೊಡ್ಡ ನಾಟಕ, ಐವತ್ತು ಚಿಕ್ಕ ದೃಶ್ಯಗಳನ್ನು ಬರೆದರೂ ಅದಕಾಗಿಯೆ ಸಮಾಜ ಒಂದು ಹೆಜ್ಜೆ ಮುಂದೆ ಸರಿದಿಲ್ಲವಾದರೂ ಇನ್ನೂ ನಾಟಕಗಳನ್ನು ಬರೆಯುತ್ತಿರುವೆನಲ್ಲ? ಬರ್ನಾರ್ಡ ಶಾನೊಡನೆ ಹೋಲಿಸುವದರ ಮೋಜು ನನ್ನಷ್ಟು ಯಾರಿಗೂ ಗೊತ್ತಿಲ್ಲ. ಇಂಗ್ಲಂಡಿನ ಮೂರು ವರ್ಷಗಳ ವಸತಿಯಲ್ಲಿ ಶಾ ಇವರ ಸೇಂಟ್ ಜೋನ್ ಎಂಬ ಒಂದೇ ಒಂದು ನಾಟಕವನ್ನು ರಂಗಭೂಮಿಯಲ್ಲಿ ನೋಡಿದ್ದೆ. ಒಂದೂ ಓದಿರಲಿಲ್ಲ. ಇಂಗ್ಲಂಡದಿಂದ ಮರಳಿ ಬಂದ ಮೇಲೆ, ಮೂರು ನಾಟಕಗಳನ್ನು ಬರೆದ ತರುವಾಯ, ನನ್ನೊಬ್ಬ ಗೆಳೆಯರು ಶಾ ಇವರಂತೆಯೆ ನನಗೂ ನಾಟಕಕ್ಕೆ ಮುನ್ನುಡಿ ಬರೆಯುವ ಚಟವಿದೆ ಎಂದರು. ಆಗ ಮಾತಿಗೆ ಮಾತು ಬೆಳೆದು ನನ್ನ ಗೆಳೆಯರು ಮುಂಬಯಿಯಿಂದ ರಾಯಲ್ ಏಸಿಯಾಟಿಕ್ ಸೊಸೈಟಿಯ ವಾಚನಾಲಯದಿಂದ ಓದಲಿಕ್ಕೆಂದು ಶಾ ಇವರ ನಾಟಕಗಳನ್ನು ತಂದು ಕೊಟ್ಟರು. ಅದರಂತೆಯೆ ಇಬ್ಸೆನ್ ಇವರ ಹೆಸರನ್ನೂ ನಾಟಕಗಳನ್ನೂ ಮೊದಲು ಓದಿದ್ದು ಗೆಳೆಯರಲ್ಲಿ —ಅಯ್ದು ನಾಟಕಗಳನ್ನು ಬರೆದ ಮೇಲೆ! ಕೇವಲ ಇಂಗ್ಲಂಡಕ್ಕೆ ಹೋಗಿ ಬಂದ ಸಂಗತಿಯನ್ನು ನೆಚ್ಚಿ ನನ್ನ ನಾಟಕಗಳನ್ನು ವಿಮರ್ಶಿಸುವ ರೂಢಿ ಇದ್ದವರು ಶಾ ಇವರ ಇಡಿಯ ನಾಟಕಗಳಲ್ಲಿ ವೇಣಕ್ಕ, ವೆಂಕಪ್ಪ, ಬಸನಿಂಗ, ಸುಂದರಮ್ಮ, ಮನೋರಮೆ, ಮಾಧವ, ನರಸಿಂಹ—ಇಂತಹ ಭಾವನಾಜೀವಿ ಒಂದೂ ಪಾತ್ರ ದೊರೆಯದೆಂಬುದನ್ನು ನೋಡಬೇಕು.

ಹಾಗಾದರೆ ಸಾಹಿತ್ಯದಲ್ಲಿ ದುಡಿಯುವದರ ನನ್ನ ಉದ್ದೇಶವೇನು ? ಮೇಲೆ ಹೇಳಿದ್ದನ್ನೆ ಖಂಡಿತವಾಗಿ ಮತ್ತೊಮ್ಮೆ ಹೇಳಬಹುದು. ನನ್ನ ಬುದ್ಧಿ-ಸ್ವಭಾವಗಳ ನಿಮಿತ್ತದಿಂದ, ಚಿಕ್ಕಂದಿನ ಒಂದು ರೂಢಿಗಾಗಿ ನನ್ನೊಡನೆ ನಾನು ಚರ್ಚಿಸಬಯಸುವುದೆ ನನ್ನ ಸಾಹಿತ್ಯದ ಉದ್ದೇಶ. ಈ ಮಾತಿಗಾಗಿ ನನ್ನ ಲೆಕ್ಕಣಿಕೆಯ ಹೆಸರನ್ನು ಉದಾಹರಿಸಬಹುದು. ರಂಗಾಚಾರ್ಯ ವಾಸುದೇವಾಚಾರ್ಯ ಜಾಹಗಿರದಾರ ಎಂಬ ವ್ಯಕ್ತಿಯು ಮನೆತನ-ಹಿರಿತನ-ಸಂಪ್ರದಾಯ-ಶಿಕ್ಷಣ-ಉಪಜೀವನ ಇವುಗಳಿಂದ ಬಂಧಿತವಾದ ದಾಸ್ಯವೃತ್ತಿಯ ದಾಗಿದೆ; ಇವನ್ನ ಮೀರಿ, ತೂರಿದಃ, ಇದಿರು ಸೆಟೆದುನಿಂತು ಸಂಭಾಷಣೆ ಯನ್ನು ಕೆಣಕುವ ಸ್ವತಂತ್ರಸಾಸಿಗನು ಶ್ರೀರಂಗ ಎಂಬ ಒಳದನಿ. ಸ್ವಸಂಭಾಷ ಣೆಯೆ ನನ್ನ ಸಾಹಿತ್ಯ ಎಂಬುದಕ್ಕಾಗಿ ಸಾಮಾನ್ಯವಾಗಿ ನನಗೆ ನನ್ನ ಪುಸ್ತಕಗಳ ವಿಮರ್ಶೆಯಿಂದ ಉತ್ಸಾಹವೂ ಇಲ್ಲ, ಉದ್ವೇಗವೂ ಇಲ್ಲ. ನನಗಾಗಿ ನಾನು ಕಟ್ಟಿಸಿಕೊಂಡ ಮನೆ ಇದು. ದಾರಿಗರಂತೆ ವಿಮರ್ಶಕರು ಯಾವ ಅಭಿಪ್ರಾಯ ವನ್ನು ಕೊಟ್ಟರೂ ಮನೆಯ ಸುಖ-ಸೌಂದರ್ಯಗಳು ಒಳಗಿದ್ದುಕೊಂಡ ನನಗೆ ದೊರೆತೇ ದೊರೆಯುವುವು. ಈಗ ಒಂದು ಮಾತನ್ನು ಮಾತ್ರ ಉಪಯುಕ್ತ ವಾಗಿ ಕೇಳಬಹುದು. ನನ್ನೊಡನೆ ನಾನು ಚರ್ಚಿಸುವುದಾದರೆ ಅದನ್ನು ಬರೆದಿಡುವುದೇಕೆ, ಪ್ರಕಟಿಸುವುದೇಕೆ, ಪ್ರಯೋಗಿಸುವುದೇಕೆ ? ಈ ಪ್ರಶ್ನೆ ಎಷ್ಟು ಸಮಂಜಸವಾಗಿದೆಯೊ ಅಷ್ಟೆ ಅದರ ಉತ್ತರ ಮಹತ್ತ್ವದ್ದಾಗಿದೆ. ಸ್ವಸಂಭಾಷಣೆಯನ್ನು ಪ್ರಕಟಮಾಡುವುದಕ್ಕೆ ಸಾಮಾನ್ಯವಾಗಿ ಈ ಕಾರಣ ಗಳನ್ನು ಹೇಳಬಹುದು: (೧) ಮಾನವನಿಗೆ ಸಹಜ ಗುಣವಾದ ಅಹಂಕಾರ, (೨) ಕಲಾವಿದನ ಸಹಜ ದುರ್ಗುಣವಾದ ಆತ್ಮವಿಶ್ವಾಸ, ಮತ್ತು (೩) ಸ್ನಿಗ್ಧ ಜನಸಂವಿಭಕ್ತಂ ಹಿ ದುಃಖಂ (ಸುಖಂ ವಾ) ಸಹ್ಯವೇದನಂ ಭವತಿ, ಎಂಬ ಕಾಳಿದಾಸನ ಶೈಲಿಯಲ್ಲಿ ಹೇಳಬಹುದಾದ ತತ್ತ್ವವೊಂದು.

× × × ×

ಗ್ರಂಥಗಳನ್ನು ಪ್ರಕಟಮಾಡಿ ತನ್ನ ವಿಚಾರಗಳನ್ನು ಹರಡಿಸಬೇಕೆಂಬ ಬಯಕೆ ಸಹಜವಾದರೂ ಆ ಕಾಯಕ ಮಾತ್ರ ಕನ್ನಡ ಗ್ರಂಥಕರ್ತನಿಗೆ ಸುಲಭವಲ್ಲ ಎಂದು ಸ್ಪಷ್ಟವಾಗಿ ಹೇಳಬಹುದು. ಗ್ರಂಥದ ಪ್ರಕಾಶನ ಎಂಬುದು ಹಣದ ಹೊಣೆ; ಅದನ್ನೂ ಗ್ರಂಥಕರ್ತನೆ ಹೊರುವುದಾದರೆ ವ್ಯವಹಾರದ ಮಳಲಿನಲ್ಲಿ ಅವನ ಸ್ಫೂರ್ತಿಪ್ರವಾಹವು ತಳಕ್ಕಿಳಿದು ಮಾಯ

ಇಲ್ಲವೆ ಮಂದವಾಗುವುದು ಖಂಡಿತ. ಆದರೆ ಕನ್ನಡ ಬರೆಹಗಾರನಿಗೆ ಬೇರೆ ಗತಿಯೆ ಇಲ್ಲ. ತೀರ ಇತ್ತೀಚೆಗೆ ಅಲ್ಲೊಂದು ಇಲ್ಲೊಂದು ಪ್ರಕಾಶನ ಸಂಸ್ಥೆ ಉದಯವಾಗಿದ್ದರೂ ಹೆಚ್ಚಾಗಿ ಹೊಟ್ಟೆತುಂಬಿಕೊಳ್ಳುವ ಧ್ಯೇಯವನ್ನಿಟ್ಟು ಕೊಂಡ ಸಂಸ್ಥೆಗಳೆ! ಅವರಿಂದ ಕಷ್ಟಸಾಧ್ಯವಾಗಿ ದೊರೆಯಬಹುದಾದ ಪ್ರತಿಫಲವೆಂದರೆ ಬರೆಹಗಾರನಿಗೆ ಅವಮಾನ ಇಲ್ಲವೆ ಅನುತ್ಸಾಹಕಾರಣ. ಗ್ರಂಥಕರ್ತನು ಸ್ವತಃ ಬಂಡವಳಗಾರನಾಗದಿದ್ದರೆ ಅವನ ಗ್ರಂಥವು ಪ್ರಕಟ ವಾಗದೆಂಬ ಮಾತಿನ ಸತ್ಯತೆಯನ್ನು ಇತ್ತಿತ್ತಲಾಗಿ ಬಂಡವಾಳಗಾರರೆ ಗ್ರಂಥಕರ್ತರಾಗುತ್ತಿರುವ ದೃಷ್ಟಾಂತಗಳಿಂದ ಅರಿತುಕೊಳ್ಳಬಹುದು. ಕನ್ನಡದ ಗ್ರಂಥ ಪ್ರಕಟನೆಯ ಕಷ್ಟ ನಷ್ಟಗಳು ಅಷ್ಟಿಷ್ಟೆಂದು ಹೇಳುವಂತಿಲ್ಲ. ಸಾಕ್ಷರ ತೆಯ ಪ್ರಮಾಣವು ಕರ್ನಾಟಕದಲ್ಲಿ ತೀರ ಸಣ್ಣದಾಗಿದೆ. ಸಾರ್ವಜನಿಕ ವಾಚನಾಲಯಗಳ ಸಂಖ್ಯೆ ಹೇಳಿಕೊಳ್ಳಲು ನಾಚಿಕೆಯಾಗುವಂತಹದು. ಮೇಲೆ ಪ್ರಾಂತವೇ ಬೇರೆ ಬೇರೆ ಆಡಳಿತೆಗಳಲ್ಲಿ ತುಂಡಾಗಿ ಆಯಾ ಪ್ರದೇಶ ಆಯಾ ನೆರೆನುಡಿಯ ಪ್ರಭಾವಕ್ಕೆ ಕನ್ನಡ ಸಿಕ್ಕಿಕೊಂಡುದು. ಶಿಕ್ಷಣಕ್ರಮ-ಪಠ್ಯ ಪುಸ್ತಕಗಳಿಗಾಗಿ ಇಂದಿನ ಕನ್ನಡ ಗ್ರಂಥಗಳಿಗೆ ಉತ್ತೇಜನವೆ ಇಲ್ಲ! ಈ ಮೊದಲೇ ಹೇಳಿದಂತೆ ವಿಮರ್ಶಕರ ಅಭಾವವೂ ದೊಡ್ಡ ತೊಡಕಾಗಿದೆ. ಇಂದಿನ ಜಗತ್ತಿನ, ಇಂದಿನ ನಡೆ-ನುಡಿಗಳ, ಇಂದಿನ ಬೇರೆ ಬೇರೆ ಸಾಹಿತ್ಯಗಳ ಪರಿಚಯದ ಸಹೃದಯ ಅಭ್ಯಾಸಿಗನು ಕನ್ನಡದಲ್ಲಿ ಒಬ್ಬನೂ ಇಲ್ಲವೆಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ.

ನಾಟಕಗಳನ್ನೆ ಹೆಚ್ಚಾಗಿ ಬರೆಯುವ ನನ್ನಂತಹನಿಗಾಗಿ 'ಸ್ಪೆಶಲ್' ಸಂಕಷ್ಟಗಳೂ ಇವೆ. ನಾಟಕದ ಪ್ರಯೋಗವನ್ನು ಮಾಡುವುದು ಹೇಗೆ ಮತ್ತು ಯಾರು? ಪರಂಪರೆಯ ಪ್ರಯೋಗಗಳನ್ನು ಮಾಡುವ ಕಂಪನಿಗಳೆಂದರೆ ಅಶಿಕ್ಷಿತರ ಮತ್ತು ಹೊಟ್ಟೆಹೊರೆದುಕೊಳ್ಳುವವರ ಗುಳೇಕಾರಿಕೆ. ಇದಲ್ಲದೆ ನನ್ನಂತಹ **ಇಂದಿನ** ಸುಶಿಕ್ಷಿತರು ಬರೆಯುವ ನಾಟಕಗಳೆಂದರೆ ಪರಂಪರಾ ಪ್ರಾಪ್ತ ರಂಗಭೂಮಿಯನ್ನು ಬದಲಾಯಿಸಿಕೊಳ್ಳಬೇಕಾದ ಪ್ರಯೋಗಗಳು. ಕಂಪನಿಗಳು, ನಟರು, ಪ್ರಯೋಗಗಳು-ಇವೆಲ್ಲ ಕೀಳು ದರ್ಜೆಯವಾದ್ದ-ರಿಂದ ಉತ್ಸಾಹದ ನಾಟ್ಯವಿಲಾಸಿಗಳಿಗೆ ಮಾದರಿ ಎಂಬುದೆ ಇಲ್ಲ. ಹಾಗೂ ಹೀಗೂ ಸಾಗಿಸಿಕೊಂಡು ಪ್ರಯೋಗ ಮಾಡುವದಾದರೆ ನಾಟಕದ ಅಪಪ್ರಚಾರ ವನ್ನು ಮಾಡಿದಂತೆಯೆ. ಕೊನೆಗೆ ನಾಟ್ಯವೂ ಪ್ರಯೋಗವೂ ವಿಶಿಷ್ಟವಾದ

ಕಲೆಗಳು, ಸಾರ್ವಜನಿಕ ಜೀವನಕ್ಕೆ ಅವಶ್ಯವಾದ ಶಿಕ್ಷಣಸಾಧನಗಳು ಎಂಬ ಅರಿವು ಸುತ್ತಲಿನ ಸಮಾಜವನ್ನರಿಯದ ಹಿರಿಯರಿಗೆ, ಚುನಾವಣೆಯೆ ಮೋಕ್ಷವೆಂಬ ಸ್ವಾರ್ಥಸಾಧುಗಳಿಗೆ, ಉಪಜೀವನವೆ ಶಿಕ್ಷಣ ಎಂಬ ಸುಶಿಕ್ಷಿತರಿಗೆ ಇಲ್ಲವೇ ಇಲ್ಲ. ಸಾಕ್ಷರತೆಯ ಪ್ರಸಾರ ಕಡಿಮೆ ಇದ್ದ ನನ್ನ ಪ್ರಾಂತದಲ್ಲಿ ನಾಟ್ಯಪ್ರಯೋಗವೆ ಉತ್ತಮವಾದ ಶಿಕ್ಷಣಸಾಧನ ಎಂಬ ನನ್ನಂತಹನಿಗೂ ಈ ಅಭಿಪ್ರಾಯಗಳು ಅನಿವಾರ್ಯವಾಗಿವೆ.

× × × ×

ಬರೆದ ನಾಟಕಗಳು ಪ್ರಯೋಗವನ್ನು ಕಾಣದ ಸ್ಥಿತಿಗಾಗಿ ನಾನು ಆಗಾಗ ಕಳವಳಗೊಂಡಿದ್ದೇನೆ; ಆದರೆ ನಿರುತ್ಸಾಹಿತನಾಗಿಲ್ಲ. ಬರೆಯುವ ಹಟವೆ ಅಷ್ಟೊಂದು ಎಂದು ಹೇಳಬಹುದೆ? ಬಹುಜನಸಮಾಜವು ಅಶಿಕ್ಷಿತ; ಇರಲಿ, ಆದರೆ ಸುಶಿಕ್ಷಿತ ಎಂದುಕೊಳ್ಳುವ ಸಮಾಜವೂ ಇದೆಯಲ್ಲ ? ನಾಟಕ ಪ್ರಯೋಗಕ್ಕೆ ಅವಕಾಶ ದೊರೆಯದಿದ್ದಾಗ ಈ ಸುಶಿಕ್ಷಿತರನ್ನೂ ಹೆದರಿಸುವಂತೆ ಗೀತಾಗಾಂಭೀರ್ಯವನ್ನು, ಇವರನ್ನು ಹೊಡೆದೆಬ್ಬಿಸುವಂತೆ ಕೆಮಾಲ್ ಪಾಶಾ ಎಂಬ ಚರಿತ್ರೆಯನ್ನು, ಇವರನ್ನು ಕೆಣಕುವಂತೆ ವಿಶ್ವಾಮಿತ್ರನ ಸೃಷ್ಟಿ ಎಂಬ ಕಾದಂಬರಿಯನ್ನು, ಇವರನ್ನು ಕಡೆಗಣಿಸಿ **ನಗೆ** ಎಂಬ ವಿಮರ್ಶಾಗ್ರಂಥವನ್ನು, ಕೊನೆಗೆ ಎಲ್ಲವನ್ನೂ ನಗೆಗೀಡು ಮಾಡಿಕೊಳ್ಳುವಂತೆ **ಆಹ್ವಾನ** ಎಂಬ ಕವನ ಸಂಗ್ರಹವನ್ನೂ ಬರೆದಿದ್ದೇನೆ, ಪ್ರಕಟಿಸಿದ್ದೇನೆ.

ನನ್ನ ಗುರಿ ಯಾವುದು ? ಸದ್ಯದ ಮಟ್ಟಿಗೆ ಮಿಕ್ಕವರೂ ನನ್ನಂತೆ ತಂತಮ್ಮ ವ್ಯಕ್ತಿತ್ವವನ್ನು ಹೊರಗೆಳೆದು, ಇದಿರು ನಿಲ್ಲಿಸಿ ಅವರೊಡನೆ ಸಂಭಾಷಣವನ್ನು ನಡೆಸುವಂತೆ ಮಾಡುವುದೆ? ಅಹುದು ಎಂದು ಪ್ರಾಮಾಣಿಕವಾಗಿ ಹೇಳಲಾರೆ; ಯಾಕೆಂದರೆ ಆ ಗುರಿಯನ್ನೆ ಕಣ್ಣು ಮುಂದಿಟ್ಟುಕೊಂಡು ಬುದ್ಧಿಪೂರ್ವಕವಾಗಿ ಒಂದೂ ಗ್ರಂಥವನ್ನು ಬರೆದಿಲ್ಲ. ಆದರೂ ಅಲ್ಲಲ್ಲಿ ನನ್ನ ನಿಮಿತ್ತವಾಗಿ ತನ್ನನ್ನು ತಾನು ಪ್ರಾಮಾಣಿಕವಾಗಿ ಪರೀಕ್ಷಿಸಿಕೊಳ್ಳುವ ವೃತ್ತಿಯು ವ್ಯಕ್ತಿಗಳಲ್ಲಿ, ಕೆಲವೆಡೆ ಜನತೆಯಲ್ಲಿ ಮೂಡುತ್ತಿರುವುದರಿಂದ— ನನ್ನ ವಿಚಾರಗಳ ಅಭ್ಯಾಸದ ನಿಮಿತ್ತವಾಗಿಯೆ ಮೂಡುತ್ತಿರುವುದರಿಂದ ಆ ಗುರಿ ನನ್ನದಲ್ಲ ಎಂದು ಹೊಣೆಯನ್ನೂ ಹಾರಿಸಿಕೊಳ್ಳುವಂತಿಲ್ಲ.

ನಾಟಕಗಳನ್ನು ರಂಗಭೂಮಿಯ ಮೇಲೆ ಪ್ರಯೋಗಿಸುವ ನಿಮಿತ್ತವಾಗಿ ನೂರಾರು ಸುಶಿಕ್ಷಿತ ತರುಣರ ನಿಕಟ ಸಂಬಂಧ ನನಗೆ ಬಂದಿದೆ. ಈ ತರುಣರ ಸರ್ವಸಾಮಾನ್ಯಸಂಸ್ಕೃತಿಯನ್ನೂ ಬುದ್ಧಿಯ ಮಟ್ಟವನ್ನೂ ನೋಡಿದರೆ ನನಗೆ ಸಮಾಜಸುಧಾರಣೆಗಾಗಿ ಕಲೆಯ ಉನ್ನತಿಗಾಗಿ ಎಂದೋ ನಿರಾಶೆಯಾಗಬೇಕಿತ್ತು. ಮಾತು ಮನುಷ್ಯನಿಗೆ ಎಂತಹ ಪವಿತ್ರವಾದ ಶಕ್ತಿ, ಹಾರುವ ಎದೆ—ಅರಿಯುವ ಮಿದುಳು—ನುಡಿಯುವ ನಾಲಗೆ ಇವು ಹೇಗೆ ಏಕಸೂತ್ರಬದ್ಧವಾಗಿ ಚಲಿಸುತ್ತಿವೆ, ಇಂದಿನ ನಮ್ಮ ಸಾಮಾಜಿಕ ಮತ್ತು ಕಲಾತ್ಮಕ ಹೀನದಶೆಯಲ್ಲಿ ಸುಶಿಕ್ಷಿತರ ಹೊಣೆ ಯಾವುದು—ಇಂತಹ ಒಂದೂ ವಿಚಾರ ಒಬ್ಬ ತರುಣನನ್ನೂ ತಟ್ಟಿ ಮೈಲಿಗೆ ಮಾಡಿಲ್ಲ! ಆದರೂ ದಿನದಿನಕ್ಕೆ ನನ್ನ ಆಶೆ-ಉತ್ಸಾಹಗಳು ಬೆಳೆಯುತ್ತಲೇ ಇವೆ. ಯಾಕೆ.? ನಿಸ್ಸತ್ವರಾದ ನೂರಾರು ತರುಣರನ್ನು ಮರೆತು ಕಲೆಯನ್ನು ಅರಿತುಕೊಳ್ಳಬಯಸುವ ಒಬ್ಬಿಬ್ಬರನ್ನ ಕಣ್ದೆರೆದು ನೋಡುತ್ತಲಿದ್ದೇನೆ. ಇಂತಹ ನಾಲ್ಕಾರು ತರುಣರನ್ನು ಕೂಡಿಕೊಂಡು ಕಳೆದ ಹನ್ನೆರಡು ವರ್ಷಗಳಿಂದ ನಾಟ್ಯವಿಲಾಸಿಸಂಘವನ್ನು ಕಟ್ಟಿಕೊಂಡು (ಯುದ್ಧದ ಐದು ವರ್ಷಗಳ ಅವಧಿಯನ್ನು ಬಿಟ್ಟು) ಕನಿಷ್ಠ ಇಪ್ಪತ್ತೈದು ಪ್ರಯೋಗಗಳನ್ನು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಮಾಡಿದ್ದೇನೆ. ದಿನದಿನಕ್ಕೆ ನನ್ನ ವಿಲಾಸಿಮಿತ್ರರ ಕಲಾಸೇವೆಯ ಪ್ರಾಮಾಣಿಕತೆಯನ್ನು ಹೆಚ್ಚೆಚ್ಚಾಗಿ ಕಾಣುತ್ತಲಿದ್ದೇನೆ; ಶುದ್ಧ ಗದ್ಯದ ಸಾಮಾಜಿಕ ಸಮಸ್ಯೆಯ ನಾಟಕಗಳನ್ನು ಜನತೆ ತಿಳಿದುಕೊಳ್ಳುವುದಲ್ಲದೆ ಅವುಗಳಿಂದ ಮನರಂಜನೆಯನ್ನು ಉಪಭೋಗಿಸುವುದು; ಪ್ರೇಕ್ಷಕ ವರ್ಗದ ಅಭಿರುಚಿ, ಬುದ್ಧಿಯ ಮಟ್ಟು ಬದಲಾಯಿಸಿದೆ, ಪ್ರಗತಿ ಹೊಂದಿದೆ—ಇದಕ್ಕೆ ನನ್ನ ನಾಟಕಗಳೂ ನನ್ನ ನಾಟ್ಯವಿಲಾಸಿ ಮಿತ್ರರ ನಿರ್ವ್ಯಾಜ ಕಲಾಪ್ರೇಮವೂ ಕೆಲಮಟ್ಟಿಗೆ ಕಾರಣ ಎಂದು ಹೇಳಬಲ್ಲೆ. ಇತ್ತಿತ್ತಲಾಗಿ ಕರ್ನಾಟಕದ ಎಲ್ಲ ಭಾಗಗಳ ನಾಟ್ಯವಿಲಾಸಿಗಳು ಹೆಚ್ಚಾಗಿ ನನ್ನ ನಾಟಕಗಳನ್ನು ಆಡಬಯಸುವುದೂ ನನ್ನ ಈ ಹೆಮ್ಮೆಗೆ ಸಾಕ್ಷಿಯಾಗಿದೆ.

× × × ×

ಕನ್ನಡ ಸಾಹಿತ್ಯ ಮತ್ತು ಕನ್ನಡ ನಾಟ್ಯ ಇವು ಈಗ ಹೊಸ ದಾರಿಯನ್ನು ಹಿಡಿದಿವೆ. ಹಾದಿಯ ಹೊಸತನಕ್ಕಾಗಿ ಹುರುಪು ಇದ್ದಂತೆ ಅನನುಭವವೂ

ಇದೆ. ಹೊಸ ಹುರುಪಿಗಾಗಿ ಜನತೆಯ ಆಶೆ-ಆಕಾಂಕ್ಷೆ-ಉತ್ಸಾಹಗಳ ಪ್ರತಿನಿಧಿಯಾಗಿದೆ ನಮ್ಮ ಸಾಹಿತ್ಯ. ಒಂದೇ ವಿಚಾರಸರಣಿಗುಂಟ ಸಾಗಿದ ನಮ್ಮ ರಾಜಕೀಯ ಮುಂದಾಳುಗಳಿಗಿಂತ ನಮ್ಮ ಸಾಹಿತಿಗಳೆ ಜನತೆಯ ಮುನ್ನಡೆಯ ಪ್ರತಿನಿಧಿಗಳಾಗಿದ್ದಾರೆಂದು ಹೇಳಬಹುದು. ಆದರೆ ರಾಜಕೀಯ ಮುಂದಾಳುಗಳಿಗೂ ಸಾಹಿತಿಗಳಿಗೂ ಒಂದು ಮಹತ್ತ್ವದ ವ್ಯತ್ಯಾಸವಿದೆ. ಅಶಿಕ್ಷಿತ ಮತ್ತು ತೀರ ಸಾಮಾನ್ಯರಾದವರೊಡನೆಯೂ ಮುಂದಾಳುಗಳ ಸಂಪರ್ಕವಿದ್ದರೆ ನಮ್ಮ ಸಾಹಿತಿಗಳು ಮಾತ್ರ ಕೇವಲ ಸುಶಿಕ್ಷಿತ ಜನತೆಯ ದಷ್ಟೆ ಪ್ರತಿನಿಧಿತ್ವವನ್ನು ವಹಿಸಿದ್ದಾರೆ. ಬೌದ್ಧಿಕ ವಿಷಯಕ್ಕಾಗಿ, ಆಂಗ್ಲ ಶಿಕ್ಷಣವನ್ನು ಪಡೆದವರೇ ಸಾಹಿತ್ಯದ ಕ್ರಾಂತಿಕಾರರಾದುದಕ್ಕಾಗಿ ಈ ಪರಿಸ್ಥಿತಿ ಅನಿವಾರ್ಯವಾದುದೇನೊ ನಿಜ; ಆದರೆ ಅನಿವಾರ್ಯವಾದ ಮಾತ್ರಕ್ಕೆ ಅನುಕೂಲ ಎಂದು ತಿಳಿಯಲಾಗದು. ಸಾಕ್ಷರತೆಯ ಪ್ರಸಾರ ಬೆಳೆದಂತೆ ಸ್ಥಿತಿ ಸುಧಾರಿಸಬಹುದಾದರೂ ಸಾಮಾನ್ಯರ ಹೃದಯವನ್ನು ಬಿಚ್ಚಿಡುವ, ಸಾಮಾನ್ಯರ ಹೃದಯವನ್ನು ಮಿಡಿಯಿಸುವ ಸಹಜತೆಯನ್ನೂ ಸರಳತೆಯನ್ನೂ ನಮ್ಮ ಕನ್ನಡ ಸಾಹಿತ್ಯವೂ ಗಳಿಸಿಕೊಳ್ಳಲೇಬೇಕಾಗಿದೆ. ಈ ವಿಷಯವನ್ನು ಹೆಚ್ಚಾಗಿ ಚರ್ಚಿಸುವುದು ಸದ್ಯದ ಲೇಖಕ್ಕೆ ಅಪ್ರಸ್ತುತವಾದುದರಿಂದ ಅಗತ್ಯವಾದ ಮಾತನ್ನು ಮಾತ್ರ—ನನ್ನ ಅನುಭವದಿಂದ ಹೊಳೆದಂತೆ— ಇಲ್ಲಿ ಹೇಳಿದ್ದೇನೆ.

ಸದ್ಯದ ಕನ್ನಡ ಸಾಹಿತ್ಯದ ಇತಿಸ್ಥಿತಿಗಳಿಗಾಗಿ ನನಗೆ ಅಸಮಾಧಾನವಿದೆ ಎಂಬುದನ್ನು ನಾನು ಅನೇಕ ಸಲ ಪ್ರಕಟವಾಗಿ ಹೇಳಿದ್ದೇನೆ. ಕನ್ನಡರ ಅಭಿಮಾನ, ವಿವಿಧ-ವಿಶಾಲವಾದ ಅನುಭವ, ಮುನ್ನೋಟದ ಸಾಹಸ, ತಪ್ಪನ್ನೊಪ್ಪಿಕೊಳ್ಳುವ ತಿಳುವಳಿಕೆ—ಇವು ಮಿಕ್ಕ ಪ್ರಾಂತದವರಿಗಿಂತ ಕನ್ನಡಿಗರಿಗೆ ಕಡಿಮೆ ಎಂದು ನನ್ನ ಅನುಭವ. ಪ್ರಾಂತಕ್ಕೊಂದು ಸಾರ್ವಜನಿಕ ಜೀವನ, ಆ ಜೀವನಕ್ಕೊಂದು ಧ್ಯೇಯ, ಆ ಧ್ಯೇಯ ಸಾಧನೆಗೆ ಮುಂದಾಳುತನ ಇವುಗಳಿಲ್ಲ; ಸದ್ಯಕ್ಕಿದ್ದ ಅಜ್ಞಾನ, ಸಂಕುಚಿತತೆ, ಸ್ವಾರ್ಥ, ಜಾತೀಯತೆ ಇವುಗಳಿಗಾಗಿ ಪರಿಸ್ಥಿತಿ ಸುಧಾರಿಸಲು ವಿಘ್ನವಿದೆ. ಇದೆಲ್ಲವನ್ನೂ ಅರಿತು ನಾನು ಆಶಾವಾದಿಯಾಗಿದ್ದೇನೆ. ಕರ್ನಾಟಕದ ಪರಂಪರೆಯಲ್ಲಿ ನನಗೆ ಅಚಲ ಶ್ರದ್ಧೆಯಿದೆ, ಕನ್ನಡಿಗರ ಜ್ಞಾನ-ಸಾಹಸಗಳಲ್ಲಿ ನನಗೆ ಭರವಸೆ ಇದೆ; ನೂರಾರು ವರ್ಷಗಳಿಂದ ಬುದ್ಧಿ-ಹೃದಯಗಳ ಮೇಲೆ ಕೆನೆಗಟ್ಟಿದ ದೂಳು ಜಾಡಿಸಿ ಕಳೆದ

ಮೇಲೆ ಸ್ವಾರ್ಥ-ಜಾತೀಯತೆಗಳ ತ್ವಚೆರೋಗ ವಾಸಿಯಾಗುವುದಲ್ಲದೆ, ಪರಿಸ್ಥಿತಿಯನ್ನು ಮೈಗೂಡಿಸಿಕೊಳ್ಳುವಷ್ಟು ಆರೋಗ್ಯವೂ ಬಲಗೊಳ್ಳುವುದು ಎಂದು ನನ್ನ ಆತ್ಮವಿಶ್ವಾಸ. ಪ್ರಾಂತ ಒಂದಾಗಿ, ದೇಶ ಸ್ವತಂತ್ರವಾಗುವುದಕ್ಕೆ ಕನ್ನಡಿಗರಲ್ಲಿ ಶಂಕರ-ಬಸವೇಶ್ವರರಂತಹ ಕ್ರಾಂತಿಕಾರರು ಮತ್ತೆ ಜನಿಯಿಸಿ ಕರ್ನಾಟಕದ ಮುಂದಾಳುತನವನ್ನು ಭಾರತಕ್ಕೆ ಒದಗಿಸಿಕೊಡುವರು; ಆ ಯುಗಪರಿವರ್ತನಕ್ಕೆ ಕನ್ನಡ ಸಾಹಿತಿಗಳು ಸಾಕಷ್ಟು ಸ್ಫೂರ್ತಿಯನ್ನು ತಂದುಕೊಡುವರು ಎಂಬುದು ನನ್ನ ಆಶಾವಾದದ ಚಿತ್ರವಾಗಿದೆ; ಸಾಹಿತ್ಯ ಯಜ್ಞದಿಂದ ನಾನು ದೊರೆಕಿಸಬಯಸಿದ ಸ್ವರ್ಗವಾಗಿದೆ.



## ದೇ ವು ಡು ++ ++ ++ ++

ಇನ್ನೆರಡು ದಿನವಾದರೆ ಕ್ರಿಶ್ಚಿಯನ್ನರ ಹೊಸ ವರ್ಷ, ೧೮೯೭. ಆ ದಿನ ದುರ್ಮುಖ ಸಂವತ್ಸರದ ಮಾರ್ಗಶಿರ ಬಹುಳ ದಶಮಿ ಮಂಗಳವಾರ ಜನನ. ತಾಯಿ ಕೋಲಾರದ ಮಂಡಲ ವಂಶದವರು. ತಂದೆ ಕಂಭಾಲೂರ ವಂಶದವರು. ಅರಮನೆಯ ಋತ್ವಿಕ್ಕರಾಗಿ, ರಾಜಕುಲಗಳ ಪುರೋಹಿತ ರಾಗಿ ವೇದಶಾಸ್ತ್ರಸಂಪನ್ನರೆಂದು ಪ್ರಸಿದ್ಧರಾದ ವಂಶ. ತುಂಬಿದ ಮನೆಯು ತುಂಬು ಸಂಸಾರದವರಾದರೂ ತಂದೆಯು ಅಂತರ್ಮುಖಿಗಳೆಂದು ಪ್ರಸಿದ್ಧರು. ಸುಮಾರು ೧೮೮೦ರಲ್ಲಿ ಮೈಸೂರಿನಲ್ಲಿ ಲಕ್ಷ್ಮೀನರಸಿಂಹ ಪ್ರೆಸ್ ಎಂದು ಒಂದು ಸ್ಥಾಪನೆಯಾಯಿತು. ಪುರಾತನ ಶಾಸ್ತ್ರಗಳನ್ನು ಪ್ರಕಟಿಸಬೇಕು ಎಂಬುದು ಅದರ ಉದ್ದೇಶ. ಅದರ ಸ್ಥಾಪಕರಲ್ಲಿ ಇವರೂ ಒಬ್ಬರು. ೧೯೦೨ ರಲ್ಲಿ ಪ್ಲೇಗಿಗೆ ತುತ್ತಾಗದೆ ಇದ್ದರೆ ಇವರು ನಿರ್ಣಯಸಾಗರ ಪ್ರೆಸ್ಸಿನಲ್ಲಿ ಸಂಶೋಧಕರಲ್ಲಿ ಒಬ್ಬರಾಗುತ್ತಿದ್ದರು.

ಪಿತೃವಿಯೋಗವಾದ ಮೇಲೆ ಮನೆಯಲ್ಲಿ ಅನಾಯಕವಾಯಿತು. ಓದುವ ಹಂಬಲ ಹೆಚ್ಚಾಗಿರುವ ಹುಡುಗರಿಗೆ ಸ್ವಚ್ಛಂದತೆಯು ಇರುವುದೇ ಒಳ್ಳೆಯ ದೆಂದು ತೋರುತ್ತದೆ. ಅಂತೂ ಹತ್ತು ಹನ್ನೆರಡು ವರ್ಷಗಳ ವೇಳೆಗೆ ರಾಮಾ ಯಣ, ಭಾರತ, ಭಾಗವತ, ಬ್ರಹ್ಮಾಂಡ ಪುರಾಣ (ಆಗಲೇ ಕನ್ನಡದಲ್ಲಿ ಆಗಿತ್ತು) ಮೊದಲಾದವುಗಳನ್ನು ಓದಿದ್ದೆ. ಬೇಸಿಗೆಯ ರಜೆ ಬಂದಾಗ ಮೈಸೂರು ಕೋಟೆಯಿಂದ ಓರಿಯಂಟಲ್ ಲೈಬ್ರರಿಗೆ ಓದುವುದಕ್ಕೆ ಹೋಗು

ತ್ತಿದ್ದೆ. ಆಗ ಗೋಲಿ, ಚಿನ್ನಿಕೋಲು, ಫುಟ್‌ಬಾಲ, ಇವು ನಮ್ಮ ಆಟಗಳು. ಆದರೂ ನಮ್ಮ ಬೀದಿಯಲ್ಲಿ ಹಿರಿಯರದೊಂದು ಸಂಧ್ಯಾ ಸಂಘವಿತ್ತು. ಅಲ್ಲಿ ಹೋಗಿ ಕುಳಿತು ಅವರ ಹರಟೆಗಳನ್ನು ಕೇಳುವುದರಲ್ಲಿ, ಮಧ್ಯಾಹ್ನದ ಹೊತ್ತು ಹೆಂಗುಸರು ಹೇಳುವ ಹಾಡುಗಳನ್ನು ಕೇಳುವುದರಲ್ಲಿ ಹೆಚ್ಚು ಆಸಕ್ತಿ. ಬೇಗ ಬೇಗ ಬರೆಯುತ್ತಿದ್ದೆನೆಂದು ಹೆಂಗುಸರು ತಿಂಡಿ ಕೊಟ್ಟು ಹಾಡುಗಳನ್ನು ಬರೆ ಸುವರು. ಲಿಂಗರಾಜ ಅರಸಿನವರ ಚಂದ್ರಾವಳಿಯನ್ನು ಸುಮಾರು ಒಂದು ವಾರದೊಳಗಾಗಿ ಬರೆದಿದ್ದೆ. ಹೀಗೆ ಹಿರಿಯರ ಸಂಧ್ಯಾಸಂಘದಲ್ಲೂ ಒಂದು ದಿನ ಒಂದು ಪ್ರಸಂಗ ನಡೆದು ಅಲ್ಲಿ ನನಗೆ ಒಂದು ಸ್ಥಾನ ಸಿಕ್ಕಿತು.

ಕ್ರಿಶ್ಚಿಯನ್ ಪಾದ್ರಿಗಳ ಹೋರಾಟದ ಕಾಲ ಅದು. ಸಾಧ್ವೀ, ವೃತ್ತಾಂತ ಪತ್ರಿಕೆಗಳು ಹಿಂದೂ ಕ್ರಿಶ್ಚಿಯನ್ ಪ್ರತಿನಿಧಿಗಳು. ಒಬ್ಬ ಪಾದ್ರಿಯು "ಕೃಷ್ಣನು ಕೊಳಲು ಊದಿದಾಗ ಒಣಗಿದ್ದ ಗಿಡಮರಗಳೆಲ್ಲ ಚಿಗುರಿದವಲ್ಲ; ಕೈಯಲ್ಲಿದ್ದ ಕೊಳಲೇಕೆ ಚಿಗುರಲಿಲ್ಲ?" ಎಂದು ಒಂದು ಸವಾಲ್ ಹಾಕಿದ್ದ. ಹಿರಿಯರ ಸಂಘದಲ್ಲಿ ಈ ಸವಾಲ್ ಚರ್ಚೆ ನಡೆಯುತ್ತಿದ್ದಾಗ, ನಾನು ಹೇಳಲೇ ಎಂದೆ. ಆಗಬಹುದು ಎಂದರು. "ಚಿಗುರಿದರೆ ತನ್ನನ್ನು ಎಸೆದು ಬಿಡುವನು ಎಂದು ಹೆದರಿಕೊಂಡು ಚಿಗುರಲಿಲ್ಲ" ಎಂದೆ. ಎಲ್ಲರೂ ಭೇಷ್ ಭೇಷ್ ಎಂದರು. ಕೃತವಿದ್ಯರೂ ಕೃತಮತಿಗಳೂ ಆದ ಅನೇಕರು ಅಲ್ಲಿ ಸೇರುವರು. ಪುರುಷಾರ್ಥ ಚತುಷ್ಟಯ ಚಿಂತಾವಿಚಾರವೂ ನಡೆಯುವುದು. ಅದನ್ನು ಕೇಳಿ ಕೇಳುತ್ತ ನನಗೆ ಎಷ್ಟೋ ಸಂಸ್ಕಾರವಾಯಿತು.

ನಮ್ಮ ತಂದೆಯವರು ಕವಿತ್ವಗಳನ್ನು ಮಾಡುತ್ತಿದ್ದರು. ಅವುಗಳನ್ನು ಕೇಳಿದ್ದ ನನಗೂ ಕವಿಯಾಗಬೇಕು ಎನ್ನಿಸಿತು. ಮನೆತನದ ವಾಹಿನಿಗೆ ಅನು ಸಾರವಾಗಿ ಸಂಸ್ಕೃತಾಧ್ಯಯನಕ್ಕೆ ತಿರುಗಿ, ಸಂಸ್ಕೃತ ಕವಿತ್ವಕ್ಕೆ ಹೊರಳಬೇಕಾ ಗಿದ್ದ ಮನಸ್ಸು ಕನ್ನಡದ ಕಡೆ ತಿರುಗಿತು. ಸುಮಾರು ೧೯೧೨ರ ವೇಳೆಗೆ ನಾನು ಛಂದಸ್ಸು ವ್ಯಾಕರಣಗಳನ್ನು ಓದಿ ಪದ್ಯಗಳನ್ನು ಬರೆದಿದ್ದೆ. ನಾಟಕ ಬರೆಯುವ ಹುಚ್ಚು ಹಿಡಿಯಿತು. ಹುಡುಗರ ಕಂಪೆನಿ ನಾಟಕಗಳಿಗೆ ಪದ್ಯ ಬರೆಯುವುದರಿಂದ ಪಾರ್ಟು ಮಾಡುವ ವರೆಗೆ ಎಲ್ಲದರಲ್ಲೂ ನಾನುಂಟು. ೧೯೧೨ರಲ್ಲಿ ನಾನು ಬರೆದಿದ್ದ 'ಸಾಹಸ ವರ್ಮ' ಎಂಬ ನಾವೆಲ್ಲನ್ನು ಪ್ರಕ ಟಿಸಿದೆ. 'ಮಧುರವಾಣಿ' ನನ್ನ ಪದ್ಯಗಳನ್ನು ಪ್ರಕಟಿಸಿತ್ತು. ನಾಟಕ ಬರೆ

ಯುವ ಹುಚ್ಚು ನಾಟಕ ಶಿರೋಮಣಿಗಳ ಹತ್ತಿರಕ್ಕೂ ಎಳೆದುಕೊಂಡು ಹೋಯಿತು. ಅವರ ಕಂಪೆನಿಯಲ್ಲಿ ಪಾರ್ಟು ಮಾಡಿದ್ದೆ. ಮುಂದೆ ರಾಘವಾಚಾರ್ಯರ ಜೊತೆಯಲ್ಲಿ ಪಾರ್ಟು ಮಾಡಿದೆ. ಆದರೂ ನಾನು ರಂಗಭೂಮಿಯಲ್ಲಿ ವರದಾಚಾರ್ಯರ ಶಿಷ್ಯ.

ರತ್ನಾವಳಿ ಕಂಪೆನಿಯಲ್ಲಿ ರಾಜಕವಿ ಶ್ರೀನಿವಾಸಯ್ಯಂಗಾರ್ಯರ ಪರಿಚಯವಾಯಿತು. ಅವರು ನಾಟಕ ಬರೆಯುವುದು, ಪದ್ಯ ಕಟ್ಟುವುದು ಮೊದಲಾದವುಗಳನ್ನೆಲ್ಲ ಕಲಿಸಿದರು. ೧೯೧೭ರಲ್ಲಿ ನಾನೇ ನಾಟಕ ಬರೆದು ಅಭ್ಯಾಸ ಮಾಡಿಸಿ ಆಡಿಸಿದ್ದೆ. ಪಂಡಿತ ಕರಿಬಸವ ಶಾಸ್ತ್ರಿಗಳಲ್ಲಿಗೂ ಆಗಾಗ ಹೋಗುತ್ತಿದ್ದೆ. ಶ್ರೀನಿವಾಸಯ್ಯಂಗಾರ್ಯರ ಪ್ರಭಾವವೇ ನನ್ನ ಸಾಹಿತ್ಯವೃತ್ತಿಯನ್ನು ರೂಪಿಸಿದುದು.

೧೯೦೮ರ ವೇಳೆಗೆ ಮೈಸೂರಿನಲ್ಲಿ ಬಂಕಿಂಚಂದ್ರರ ನಾವೆಲ್ಲುಗಳು ಪ್ರಕಟವಾದವು. ಯಾರಾದರೂ ವೆಂಕಟಾಚಾರ್ಯರ ನಾವೆಲ್ ಎಂದರೆ ನನಗೇಕೋ ಕೋಪ. ಕನ್ನಡ ಬರದೆ ಬಂಗಾಳಿ ಬಲ್ಲವರೊಬ್ಬರು ರಜಪೂತ ಜೀವನ ಸಂಧ್ಯಾ ಎಂಬ ಪುಸ್ತಕವನ್ನು ಕನ್ನಡಕ್ಕೆ ಬರೆದರು. ಅದನ್ನೆಲ್ಲ ತಿದ್ದಿ ಬರೆದಿದ್ದೆ. ನನ್ನ ದ್ವಿತೀಯ ಭಾಷೆ ಸಂಸ್ಕೃತವಾಗಿದ್ದರೂ ಎಫ್. ಎ., ಬಿ. ಎ. ಗಳಿಗೆ ಕನ್ನಡ ಪಾಠ ಹೇಳುತ್ತಿದ್ದೆ. ಒಬ್ಬರು ಕನ್ನಡ ಕಾದಂಬರಿಯನ್ನು ಪಾಠ ಹೇಳಿದ್ದಕ್ಕೆ ಕಾಣಿಕೆಯಾಗಿ ಕೊಟ್ಟರು. ಹೈಸ್ಕೂಲಿಗೆ ಬರುವ ವೇಳೆಗೇ ಶಬ್ದಮಣಿದರ್ಪಣ ಕಂಠಪಾಠವಾಗಿತ್ತು. ಛಂದೋಂಬುಧಿ ಚೆನ್ನಾಗಿ ಓದಿದ್ದೆ.

ಬಂಕಿಂಚಂದ್ರರ ನಾವೆಲ್ಲು ನನಗೆ ಪಂಚಪ್ರಾಣ. ಆದರೂ ಅವು ಭಾಷಾಂತರಗಳು, ದೇಶಾಂತರ ಕಥೆಗಳು ಎಂದು ಸಂಕಟ. ಹೈಸ್ಕೂಲಿನಲ್ಲಿ ಡೂಮಾ, ಸ್ಕಾಟ್ ಮೊದಲಾದವನ್ನು ಓದಿದಾಗ ಬಂಕಿಂರ ಮೂಲ ಎಲ್ಲಿದೆ ಎಂದು ತಿಳಿಯಿತು. ಅಂದಿನಿಂದ ಎಂದರೆ ೧೯೦೮ರಿಂದ ನಾವೆಲ್ ಬರೆಯುವ ಹುಚ್ಚು. ೧೯೩೭ರಲ್ಲಿ ಕಳ್ಳರಕೂಟ ಎಂಬ ಕಥೆಯನ್ನು ಗಯಟೆಯವರ ಫೆಲ್ ಕಲ್ಪ್ರಿಟ್ಸ್ ಎಂಬ ಕಥೆಯ ಆಧಾರದ ಮೇಲೆ ಬರೆದೆ. ೧೯೩೨ರಲ್ಲಿ ಅಂತರಂಗ, ಮಯೂರಗಳು ಬಂದುವು. ಇಂದಿಗೂ ನಮ್ಮ ವಿಮರ್ಶಕರು ಯಾರೂ ಬಂಕಿಂರ ನಾವೆಲ್ಲಿಗೂ ನನ್ನ ನಾವೆಲ್ಲಿಗೂ ಇರುವ ಸಂಬಂಧವನ್ನು ವಿಮರ್ಶಿಸಿಲ್ಲ.

ನಾನು ೧೯೩೫ರಲ್ಲಿ ಬೆಂಗಳೂರಿಗೆ ಬಂದೆ. ಅಥವಾ ತಾತಾಚಾರ್ಯಶರ್ಮ ಮತ್ತು ಮಿತ್ರರು ನನ್ನನ್ನು ಅಲ್ಲಿಗೆ ಎಳೆದರು. ಅಲ್ಲಿಂದ ನನ್ನ ಜೀವನದಲ್ಲಿ ಇನ್ನೊಂದು ಹೊಸ ಅಧ್ಯಾಯ ಆರಂಭಿಸಿತು. ಮೈಸೂರು ನನ್ನ ಸಾಧನರಂಗ. ಬೆಂಗಳೂರು ನನ್ನ ಕಾರ್ಯರಂಗ. ನಾನು ಸಾಧನ, ಕಾರ್ಯಗಳಿಗಾಗಿ ಒದ್ದಾಡಿದಷ್ಟು ಸಿದ್ಧಿಗಾಗಿ ಒದ್ದಾಡಲಿಲ್ಲ. ನನಗೆ ಸಿದ್ಧಿಯಲ್ಲಿ ಅಷ್ಟು ವಿಶ್ವಾಸವಿಲ್ಲ. ೧೯೩೧ರಲ್ಲಿ ನಾನು ಒಂದು ಸಣ್ಣ ಕಾವ್ಯವನ್ನು ಬರೆದಿದ್ದೆ. ಮೇಘ-ಚಾತಕಗಳ ಸಂಬಂಧವನ್ನು ಕಂಡು ಒಬ್ಬ ವಿಚಾರಪರನು ಆಡುವ ಮಾತದು. (ಅದರ ಹಿಂದೆ ನನ್ನದೇ ಒಂದು ಪ್ರಣಯಾಧ್ಯಾಯವಿತ್ತು; ಅದಕ್ಕಾಗಿ ಅದನ್ನು ಪ್ರಕಟಿಸಲಿಲ್ಲ.) ಅದರಲ್ಲಿ ಸಂತೋಷವೆಂದರೇನು ಎಂದು ವಿಚಾರ ಮಾಡುತ್ತ ಅತೃಪ್ತ ಆಶೆಗಾಗಿ ಹೆಣಗುವುದೇ ಸಂತೋಷ ಎಂಬ ಸಿದ್ಧಾಂತಕ್ಕೆ ಬಂದಿದ್ದೆ. ಅದಿನ್ನೂ ನನಗೆ ಹೋಗಿಲ್ಲ. ಗಮ್ಯವನ್ನು ಕೈಗೆ ಸಿಕ್ಕುವಷ್ಟು ಕೆಳಗಿಟ್ಟು ಸಾಧಿಸುವ ಸಿದ್ಧನಾಗುವುದಕ್ಕಿಂತ "ಅತ್ಯತಿಷ್ಠದ್ದ-ಶಾಂಗುಲಂ" ಆಗಿ, ನಾವು ಐದು ಅಡಿ ಬೆಳೆದರೆ ಐದು ಅಡಿ ಹತ್ತಂಗುಲದಲ್ಲಿದ್ದು ಹತ್ತಡಿ ಬೆಳೆದರೆ ಹತ್ತು ಅಡಿ ಹತ್ತು ಅಂಗುಲದಲ್ಲಿರುವ ಗಮ್ಯವನ್ನು ಕುರಿತು ಸಾಧಕನಾಗಿರುವುದೇ ಹಿರಿದು ಎಂದು ನನ್ನ ಭಾವನೆ.

ಸ್ಥಾಹಿತಿಯಾಗಿ ನಿಲ್ಲುವುದಕ್ಕೆ ಆಸೆಯಿದ್ದರೂ ಇನ್ನೂ ಸ್ಥಿತಿ ಚೆನ್ನಾಗಿ ಇರಲಿಲ್ಲ. ಇನ್ನೂ ಆಗ ಹೇಗಿರಬೇಕು ? ಜೊತೆಗೆ ಜನತೆಯು ಇನ್ನೂ ಸಾಹಿತ್ಯದ ಸೊಬಗನ್ನು ಅರಿಯುವಷ್ಟು ಮಟ್ಟಕ್ಕೆ ಬಂದಿಲ್ಲ. ಐದು ಹತ್ತು ರೂಪಾಯಿ ಕೊಟ್ಟು ಸಂಗೀತ ಕೇಳುವ ಜನ ಬೆಂಗಳೂರಲ್ಲಿ ಎಷ್ಟೋ ಸಾವಿರ ಜನರಿದ್ದಾರೆ. ಆದರೆ ಒಂದು ರೂಪಾಯಿ ಕೊಟ್ಟು ಪುಸ್ತಕ ಕೊಳ್ಳುವ ಸಾವಿರ ಜನ ಕೂಡ ಸಿಕ್ಕುವುದಿಲ್ಲ. ನಾಟಕ-ಸಿನೇಮಾಗಳಲ್ಲಿದ್ದ ಲಾಭವು ಪುಸ್ತಕ ಬರೆಯುವುದರಲ್ಲಿದೆಯೋ ? ಸಿನೇಮಾಕ್ಕೆ ದುಡ್ಡು ಸೂರೆಯಾಗುತ್ತಿರುವುದನ್ನು ದಿನಾಲು ನೋಡುತ್ತಿದ್ದೇವೆ. ಹೀಗೆ ಒಂದು ಪುಸ್ತಕವಾದರೂ ದುಡಿಯುವುದೇ? ೧೯೪೪ರಲ್ಲಿ—ಈ ವರ್ಷ ಪಠ್ಯಪುಸ್ತಕವಲ್ಲದ ಯಾವ ಪುಸ್ತಕವೇ ಆಗಲಿ, ೫೦೦೦ ಹೋಗಲಿ, ೩೦೦೦, ಬಿಡಲಿ, ೨೦೦೦ವಾದರೂ ಮುದ್ರಿಸಲ್ಪಟ್ಟವೆಯೋ ?

ಕೆಲವರು ಜನಕ್ಕೆ ಹಿಡಿಯುವ ಪುಸ್ತಕ ಬರೆದರೆ ಯಾಕೆ ಆಗುವುದಿಲ್ಲ ಎನ್ನುತ್ತಾರೆ. ನಾನು 'ಓದುವವರ ಮಟ್ಟಕ್ಕೆ ಪುಸ್ತಕ ಇಳಿದರೆ, ಹೋಟೆಲ್

ತಿಂಡಿಗೂ ಇದಕ್ಕೂ ವ್ಯತ್ಯಾಸವೇನು? ಓದುವವನು ಬರೆಯುವವನ ಮಟ್ಟಕ್ಕೆ ಏರಬೇಕು. ಬೇರು ನೆಲದಲ್ಲಿಯೇ ಬಿಟ್ಟರೂ ಹೂ ಮಾತ್ರ ಗಿಡಹ ತಲೆಯಲ್ಲಿಯೇ ಬಿಡುವುದು. 'ಹಾಗೆ ಸಾಹಿತ್ಯ' ಎನ್ನುತ್ತೇನೆ. ಅಲ್ಲದೆ ಮನಃ ಪೂರ್ವಕ ಪ್ರಯತ್ನ ಓದಿನಲ್ಲಿರಬೇಕು. ಆ ಪ್ರಯತ್ನ ಬಹಳಕಡೆ ಇನ್ನೂ ಬೆಳೆಯಬೇಕು.

ಹೋಗಲಿ. ಹಣವಾದರೂ ಬರುವುದೆಂದರೆ ಅದಾದರೂ ಉಂಟೇನು? ಒಂದು ಕೋಟಿ ಇಪ್ಪತ್ತು ಲಕ್ಷ ಜನರಿರುವ ಕರ್ಣಾಟಕದಲ್ಲಿ ಒಂದು ಸಾವಿರ ಪುಸ್ತಕ ಉಂಟೆ? ಸಾವಿರ ಹಾಕಿ, ಅದು ಕ್ರಯವಾಗಲು ಐದಾರು ವರ್ಷ ವಾದರೂ ಕಾದಿರಬೇಕು. ಈಚೆಗೆ ಕೆಲವಲ್ಲದೆ, ಅಖಿಲ ಕರ್ಣಾಟಕದಲ್ಲೆಲ್ಲಾ ಏರ್ಜೆಸಿಗಳಿರುವ ಪುಸ್ತಕವ್ಯಾಪಾರಿಗಳೆಷ್ಟು ಜನ ? ಇದೆಲ್ಲವನ್ನೂ ಕುರಿತು ಚಿಂತಿಸಿ ಏನು ಮಾಡಿದರೆ ಈ ಸ್ಥಿತಿ ತಪ್ಪುವುದು ಎಂದು ಆಲೋಚಿಸಿ ಅಕ್ಷರ ಪ್ರಚಾರಕ್ಕೆ ಇಳಿದೆ.

ಅಕ್ಷರ ಪ್ರಚಾರ ಸರ್ಕಾರದವರ ಗಮನಕ್ಕೆ ಬಂತು. ಸರ್ಕಾರವು ಲಕ್ಷಾಂತರ ಹಣಕೊಟ್ಟು ಈಗ ಈ ಕಾರ್ಯವನ್ನು ಒಂದು ಸಭೆಯ ಮೂಲಕ ಮಾಡಿಸುತ್ತದೆ.

ಅಕ್ಷರ ಪ್ರಚಾರ ಮುಂದಿನ ಸಾಹಿತಿಗಳ ಕಾಮಧೇನು.

× × × ×

೧೯೨೬ರಲ್ಲಿ ಅಮೆಚೂರ್ ಕಂಪೆನಿಯ ಮೆಂಬರಾದೆ. ಶ್ರೀ ರಾಘವಾ-ಚಾರ್ಯರು, ರಂಗಸ್ವಾಮಿ, ವಾಸುದೇವರಾವ್ ಮೊದಲಾದವರ ಅಭಿನಯ ವನ್ನು ನೋಡಿದಾಗ ನನ್ನಲ್ಲಿದ್ದ ನಟವೃತ್ತಿಯು ಎದ್ದು ಕುಣಿಯುವುದು. ಹಿಂದೆ ೧೯೨೧ರಲ್ಲಿ ಕೆಲವು ದಿನ ಚಾಮುಂಡೇಶ್ವರೀ ಕಂಪೆನಿಯಲ್ಲಿದ್ದೆ. ದೇವುಡು ಶಾಸ್ತ್ರಿಗಳನ್ನು ಒಪ್ಪಿಸುವುದು ಕಷ್ಟ; ಅವರು ತೋರಿಸಿದ ಆಕ್ಟ್ ಮಾಡು ವುದು ಇನ್ನೂ ಕಷ್ಟ ಎಂದು ಅಲ್ಲಿನ ಆಕ್ಟರುಗಳು ಹೇಳುತ್ತಿದ್ದರು.

ಅಮೆಚೂರಿನಲ್ಲಿ ರಾಘವಾಚಾರ್ಯರು ನನ್ನನ್ನು ತಮ್ಮ ಲೆಫ್ಟಿನೆಂಟ್ ಮಾಡಿಕೊಂಡರು. ಮುಂದೆ ಕನ್ನಡದ ಲೆಫ್ಟಿನೆಂಟ್ ಜನರಲ್ ಆದೆನು. ನಚಿಕೇತ, ಮಂಡೋದರಿ, ಮಾರ್ಕಂಡೇಯ, ರಾಮಕೃಷ್ಣ, ಯಶೋಧರಾ ನಾಟಕಗಳಲ್ಲಿ ವಾಜಶ್ರವಸ್, ರಾವಣ, ಯಮ, ರಾಮಕೃಷ್ಣ, ಗೌತಮ ಪಾತ್ರಗಳನ್ನು ವಹಿಸುವ ಅವಕಾಶ ಬಂತು. ಬಹುಶಃ ಚೆನ್ನಾಗಿತ್ತು ಎಂದು ತೋರುತ್ತದೆ.

ಇದೆಲ್ಲ ಬರೆಯುತ್ತ ಹೋದರೆ, ಇದೇ ಒಂದು ಗ್ರಂಥವಾದೀತು! ಆದರೇನು? ನನ್ನದು ರಾಘವಾಚಾರ್–ವರದಾಚಾರ್ ಇಬ್ಬರ ಸಂಪ್ರದಾಯವನ್ನು ಬೆರೆಸಿದ ಅಭಿನಯ. ರಾಘವಾಚಾರ್ಯರು ಧ್ವನಿಯನ್ನು ಬದಲಾಯಿಸುವುದರಲ್ಲಿ ವಿಶ್ವಕರ್ಮ. ವರದಾಚಾರ್ಯರು ತೂಕವಾದ ಮುದ್ರೆಭಾವಗಳನ್ನು ತೋರಿಸುವುದರಲ್ಲಿ ಅದ್ವಿತೀಯ. ಇದುವರೆಗೆ ಈ ಇಬ್ಬರು ಮಹನೀಯರನ್ನು ಅನುಕರಿಸುವವರೂ ಹುಟ್ಟಲಿಲ್ಲ. ನಾನು ಗರುಡರವರನ್ನು ಕಂಡಿದ್ದೇನೆ. ಅವರೊಬ್ಬ ಉತ್ತಮ ನಟರು. ವೀರಣ್ಣನವರು ಹೆಸರು ಪಡೆದ ಅದೃಷ್ಟವಂತರು. ಅವರು ಜನಮೆಚ್ಚಿನ ನಕಲಿಗಾರರು. ಈಗಿನವರು ಸಾಮಾನ್ಯವಾಗಿ ವೀರಣ್ಣನವರ ಗುಂಪು. ವರದಾಚಾರ್ಯರ, ರಾಘವಾಚಾರ್ಯರ ಜಾತಿ ಇನ್ನೂ ಬಂದಿಲ್ಲ. ಬರಬೇಕಾದರೆ ಕನ್ನಡ ಶಾರದೆ, ರಂಗಭೂಮಿಯ ದೇವಿ, ತಪಸ್ಸು ಮಾಡಬೇಕು. ಪಂಡಿತನಾಗಿ, ಪಂಡಿತನಾದರೂ ಅಭ್ಯಾಸ ಜಡನಲ್ಲದ, ಪಾದರಸದಂತೆ ಆಡಬಲ್ಲ, ನಟವರನಾರು? ಅಥವಾ ಅಂಥವನು ಬಂದರೆ ನಮ್ಮ ಜನತೆಯು ಅವನನ್ನು ಒಪ್ಪುವುದೇನು?

ಈ ಸಂದರ್ಭದಲ್ಲಿ ಹಿಂದೆ ಕಾಲೇಜಿನಲ್ಲಿದ್ದಾಗ ನಡೆದ ಒಂದು ಸಂಗತಿ ನೆನಪಾಗುತ್ತದೆ. ಒಂದು ಆಶುಭಾಷಣ ಸ್ಪರ್ಧೆ ನಡೆಯಿತು. ಅದು ಅಂಡರ್ ಗ್ರಾಜುಯೇಟ್‌ಗಳಿಗೆ ಮಾತ್ರ. ಆಗಿನ ಕನ್ನಡ ಪ್ರೊಫೆಸರ್ ಬಲವಂತ ಮಾಡಿ ನನ್ನನ್ನು ಸೇರಿಸಿದರು. ಜನತೆಯೂ ಸಾಹಿತ್ಯವೂ ಎಂಬುದು ಭಾಷಣದ ವಿಷಯ. ನಾನು ಸ್ವತಂತ್ರವಾಗಿ ತೋರಿದ ಎರಡು ಮಾತು ಹೇಳಿದೆ. ಇನ್ನೊಬ್ಬ ಅಂಡರ್ ಗ್ರಾಜ್ಯುಯೇಟ್ ಡಿ. ವಿ. ಗುಂಡಪ್ಪನವರ ಯಾವುದೋ ಒಂದು ಪ್ರಿಂಟಾಗಿದ್ದ ಉಪನ್ಯಾಸದ ಭಾಗ ಚೆನ್ನಾಗಿ ಗಟ್ಟಿಮಾಡಿ ಹೇಳಿದ. ಜಡ್ಜಿಗಳೆಲ್ಲರೂ "ದೇವುಡು ಭಾಷಣಕ್ಕೆ ಬಹುಮಾನ" ಎಂದರು. ವಿದ್ಯಾರ್ಥಿಗಳೆಲ್ಲ "ಗುಣದಲ್ಲಿ ಅದೇ ಹೆಚ್ಚು. ಆದರೂ ಬಹುಮಾನ ಅಂಡರ್ ಗ್ರಾಜುಯೇಟಿಗೇ ಬರಬೇಕು." ಎಂದರು. ಹಾಗೇ ಆಯಿತು.

× × × ×

ನನಗೆ ಇತರರ ಸರ್ಟಿಫಿಕೇಟ ತೋರಿಸಿಕೊಂಡು ಮೆರೆಯುವ ಹುಚ್ಚು ಬಹುಬೇಗ ಬಿಟ್ಟುಹೋಯಿತು. ಇಲ್ಲದಿದ್ದರೆ, ಬುದ್ಧಿಯ ಕಥೆಗಳಿಗೆ ಬಂದ ಸರ್ಟಿಫಿಕೇಟ್‌ಗಳನ್ನು ಬಹಳ ಮೆರೆಸುತ್ತಿದ್ದೆ. ಪಂಜೆ ಮಂಗೇಶರಾಯರು ನನ್ನನ್ನು ತಬ್ಬಿಕೊಂಡು "ಕರ್ಣಾಟಕದಲ್ಲಿ ಮಕ್ಕಳಿಗೆ ಬರೆಯುವವರು

ಇಲ್ಲವಲಾ ಎಂದು ಯೋಚಿಸುತ್ತಿದ್ದೆ. ನಿಮ್ಮ ಬುದ್ಧಿಯ ಕಥೆ ಕಂಡು 'ಹುಸ್ಸಪ್ಪಾ, ಇನ್ನು ನಾನು ನಿರಾತಂಕವಾಗಿ ಸಾಯಬಹುದು' ಎಂದು ಕೊಂಡೆ" ಎಂದರು. ಅಲ್ಲಿಂದೀಚೆಗೆ ಎಷ್ಟೋ ಮಕ್ಕಳ ಕಥೆಗಳು ಬಂದಿವೆ, ವಿಮರ್ಶಕರೂ ಕೊಂಡಾಡಿದ್ದಾರೆ. ಆದರೆ ಇವೆಲ್ಲವೂ ಮುಂಗಾರಿನ ಮೊದಲ ಮಳೆಯಾದ ಮೇಲೆ ಹುಟ್ಟುವ ಸಸಿಗಳಂತೆ. ಇವೆಲ್ಲವೂ ಸತ್ತು ಗೊಬ್ಬರವಾದ ಮೇಲೆ, ಆ ಗೊಬ್ಬರ ತಿಂದು ವೃಕ್ಷರಾಜನು ಹುಟ್ಟುತ್ತಾನೆ ಇಲ್ಲಿಯೂ ಇನ್ನು ಸಂಧಿಕಾಲ.

× × × ×

ಮಕ್ಕಳ ಪುಸ್ತಕ ಈ ಸಂದರ್ಭದಲ್ಲಿ ಮಾಡಿರುವ ಕೆಲಸ ಸ್ತೋತ್ರಾರ್ಹ-ವಾದುದು. ಆದರೆ ಸುಮಾರು ಹದಿನೈದು-ಇಪ್ಪತ್ತು ಸಾವಿರ ವಾರಪತ್ರಿಕೆ ಗಳು ಖರ್ಚಾಗುವ ಈ ಕಾಲದಲ್ಲಿಯೂ ಅದೆಷ್ಟು ಖರ್ಚಾಗುತ್ತಿದೆ?

ಮಕ್ಕಳ ಪುಸ್ತಕಕ್ಕೂ ನನಗೂ ಮೂರು ಸಲ ಸಂಬಂಧ ಬಿತ್ತು. ಮೂರನೆಯ ಸಲ ನಾಲ್ಕು ವರುಷ ಅದರ ಕಚೇರಿಯಲ್ಲಿದ್ದೆ. ಮುಂದೆ ನಾನೇ ಸ್ವತಂತ್ರವಾಗಿ ನಮ್ಮ ಪುಸ್ತಕ ಎಂದು ಹೊರಡಿಸಿದೆ. ಅದು ಮೊದಲನೆಯ ಸಂಚಿಕೆ ಎರಡು ಸಾವಿರ ಸಾಲದೆ ಇನ್ನೆರಡು ಸಾವಿರ ಹಾಕಿಸಿದೆ. ಕಾರಣ ಸಹಜವಾಗಿ ಕೊಳ್ಳುವವರ ಪ್ರೀತಿಯಲ್ಲ. ಸಿಟಿಯಲ್ಲಿ ನಡೆದ ಲೇಖನ ಸ್ಪರ್ಧೆಗೂ ನಮ್ಮ ಪುಸ್ತಕಕ್ಕೂ ಗಂಟು ಬಿದ್ದಿತ್ತು. ಮುಂದೆ ಬಾಲಕರ ಡಿಸ್ಟ್ರಿಕ್ಟ್ ಬೋರ್ಡ್‌ಗಳು ತೆಗೆದುಕೊಂಡಾಗ ನಮ್ಮಪುಸ್ತಕ ಐದು ಸಾವಿರಕ್ಕೆ ಹೋಯಿತು. ಆದರೂ ಅದೆಲ್ಲ "ಆರ್ಟಿಫಿಷಿಯಲ್ ರೆಸ್ಪಿರೇಷನ್" ಇದ್ದ ಹಾಗೆ. ಕೃತ್ರಿಮ, ಸಹಜವಲ್ಲ.

× × × ×.

ತಾತಯ್ಯನವರು ಇದ್ದಾಗ ನನ್ನ ಲೇಖನಗಳು ಸಾಧ್ವಿಯಲ್ಲಿ ಬಂದಿದ್ದವು. ನಾನು ಯುನಿವರ್ಸಿಟಿ ಯೂನಿಯನ್‌ನಲ್ಲಿ ಓದಿದ ಬಂಕಿಂಚಂದ್ರ ಎಂಬ ಲೇಖನ ವನ್ನು ಕನ್ನಡಿಸಿ ಪ್ರಕಟಿಸಿದ್ದರು. ಜಯಕರ್ನಾಟಕದಲ್ಲಿ ಆಲೂರರ ಒತ್ತಾಯ ದಿಂದ ವೈಣಿಕ ಶಿಖಾಮಣಿ ಶೇಷಣ್ಣನವರ ಮೇಲೆ ಬರೆದ ಲೇಖನವೊಂದು ಪ್ರಕಟವಾಗಿತ್ತು. ನನಗೆ ಆಗಿನಿಂದಲೂ "ಸುಪೀರಿಯಾರಿಟಿ ಕಾಂಪ್ಲೆಕ್ಸ" ಅಲ್ಲದೆ, ಅದೇನೋ ಹೊಗಳಿಸಿಕೊಳ್ಳಬೇಕೆಂಬ ಆಸೆಯಿಲ್ಲ. ಯಾರ ಲೇಖನ ವನ್ನು ನೋಡಿದರೂ "ಇದೋ ! ಏನು ಮಹಾ ? " ಎಂದು ಅದರಲ್ಲಿರುವ

ದೋಷಗಳನ್ನೇ ಎತ್ತಿ ಹಾಕುವುದು—ಇಂತಹದು ಬರೆಯದೆ ಹೋದರೆ ಏನು ನಷ್ಟ ಎನ್ನುವುದು. ಹೀಗೇ ಇತ್ತು.

ಕನ್ನಡಿಗರೂ ಕನ್ನಡದಲ್ಲಿ ಮಾತನಾಡಿದರೆ ನಾಲಗೆ ತೊಳೆದುಕೊಳ್ಳಬೇಕು ಎನ್ನುತ್ತಿದ್ದ ಕಾಲದಲ್ಲಿ ಕನ್ನಡ ಕನ್ನಡ ಎಂದು ಕೂಗುತ್ತಿದ್ದ ಅಥವಾ ಗರ್ಜಿಸುತ್ತಿದ್ದ ನಮ್ಮ ತಾತಾಚಾರ್ಯಶರ್ಮ, ಕತ್ತಿನ ಮೇಲೆ ಕೂತು ಲೇಖನ-ಗಳನ್ನು ಬರೆಸಿದರು. ಮೈಸೂರ್ ಕ್ರಾನಿಕಲ್, ವಿಶ್ವಕರ್ಣಾಟಕದಲ್ಲಿ ಲೇಖನಗಳು ಬಂತು.

ಮುಂದೆ ನವಜೀವನ ಬಂದಾಗ ಅದರ ಅನಾಮ ಧ್ಯೇಯ ಸಂಪಾದಕ ನಾದೆ. ಆಗ ಯುದ್ಧ, ಕನ್ಯಾಪಹರಣ, ಹಿಂದೂ ಮುಸ್ಲಿಂ ದೊಂಬಿ, ಮೊಸಲಾದ ಉದ್ರೇಕಕಾಲವಿಲ್ಲದಿದ್ದರೂ ಪತ್ರಿಕೆಯು ಐದು ಸಾವಿರಕ್ಕೆ ಹೋಯಿತು. ಆದರೂ ಅದರಿಂದ ನನಗೆ ಆರ್ಥಿಕ ಏನೂ ಲಾಭವಿರಲಿಲ್ಲ.

ಬಹುಶಃ ಕನ್ನಡದ ದಿನಪತ್ರಿಕೆಗಳಲ್ಲಿ ಧಾರಾವಾಹಿ ಕಥೆ, ವಿಜ್ಞಾನದ ಲೇಖಗಳು, ಇವುಗಳನ್ನು ಪ್ರಕಟಿಸಿದುದು ಮೊದಲು ನವಜೀವನದಲ್ಲಿಯೇ ಎಂದು ತೋರುತ್ತದೆ.

ಒಂದು ದಿನ ಸಾಮಾಜಿಕ ಪ್ರತಿಷ್ಠೆಯನ್ನು ಗಳಿಸುವುದೇ ? ಅಥವಾ ಸದ್ಗತಿಯನ್ನು ಗಳಿಸುವುದೇ ? ಎಂಬ ವಿಚಾರ ತೀವ್ರವಾಗಿ ಬಂತು. ಎಷ್ಟಾದರೂ ಬ್ರಾಹ್ಮಣನ ಮನಸ್ಸು, ಸದ್ಗತಿಯನ್ನು ಗಳಿಸುವುದೇ ಹೆಚ್ಚು ಎನ್ನಿಸಿತು. ನವಜೀವನಕ್ಕೂ ನನಗೂ ಬಿಟ್ಟುಹೋಯಿತು.

× × × ×

ಬೆಂಗಳೂರಿಗೆ ಬಂದುದು ಆರ್ಯಲೋವರ್ ಸೆಕಂಡರಿ ಸ್ಕೂಲಿನ ಹೆಡ್ ಮಾಸ್ಟರಾಗಿ ನಾನು ಅಲ್ಲಿ ಐದು ವರ್ಷಗಳಿದ್ದೆ. ಮೈಸೂರಿನಲ್ಲಿ ಸದ್ವಿದ್ಯಾ ಶಾಲೆಯ ಹೆಡ್‌ಮಾಸ್ಟರಾಗಿದ್ದಾಗ "ಇನ್ನು ಮೇಲೆ ಒಬ್ಬರ ಕೈಕೆಳಗೆ ಕೆಲಸಮಾಡಬಾರದು" ಎನ್ನಿಸಿತ್ತು (೧೯೨೩-೨೪). ಶೃಂಗೇರಿ ಮಠದ ಸರ್ವೀಸಿನಲ್ಲಿ (೧೯೨೪) ಆ ಭಾವ ರೂಢಮೂಲವಾಯಿತು. ಇಲ್ಲಿ ನನಗೆ ಸರ್ವತಂತ್ರ ಸ್ವಾತಂತ್ರ್ಯ ಸಿಕ್ಕಿತು. ಸ್ಕೂಲಿಗೆ ಬೆಂಬಲ ಕೊಡುವ ಒಂದು ಕಾರ್ಪೊರೇಟ್ ಸಂಸ್ಥೆಯಿರಬೇಕೆಂದು ಹಿರಿಯರ ಸಂಘ ಒಂದು ಏರ್ಪಾಡು ಮಾಡಲಾಯಿತು.

× × × ×

ನವಜೀವನದಲ್ಲಿ ಒಮ್ಮೆ "ಮೈಸೂರಿನಿಂದ ದಿನಕ್ಕೆ ನಲವತ್ತು ಸಾವಿರ ರೂಪಾಯಿ ಸಿನಿಮಾ ಮೂಲಕವಾಗಿ ಹೊರಗೆ ಹೋಗುತ್ತಿದೆ" ಎಂದು ಬರೆದ ಲೇಖನವು ನನ್ನನ್ನು ಸಿನಿಮಾ ಪ್ರಪಂಚಕ್ಕೆ ಎಳೆಯಿತು. ಒಂದು ಲಿಮಿಟೆಡ್ ಕಂಪೆನಿ ಆಯಿತು. ಕಾರಣಾಂತರಗಳಿಂದ ನಾನು ಅದನ್ನು ಬಿಡಬೇಕಾಗಿಯೂ ಬಂತು.

ಮುಂದೆ ಧ್ರುವಕುಮಾರದಲ್ಲಿ ಮತ್ತೆ ಸಿನಿಮಾ ಸಂಬಂಧ. ಆಗ ನನಗೆ ಚಲಚ್ಚಿತ್ರಗಳ ಟೆಕ್ನಿಕ್ ಕಲಿಯಲು ಒಳ್ಳೆಯ ಅವಕಾಶವಾಯಿತು. ಮುಂದೆ 'ಚಿರಂಜೀವಿ' ಬಂದಾಗ, ಸ್ವತಂತ್ರವಾದ ಸ್ಟೂಡಿಯೋಯಿಲ್ಲದೆ ಇನ್ನೊಬ್ಬರ ಕೈಕಾದು ಕುಳಿತಿರಬಾರದು ಎಂಬ ಅನುಭವ ಚೆನ್ನಾಯಿತು.

× × × ×

ಸಿನಿಮಾ ಕಂಪೆನಿಯನ್ನು ಬಿಟ್ಟು (೧೯೩೦) ಏನು ಮಾಡುವುದು ಎಂಬ ಚಿಂತೆಯಲ್ಲಿದ್ದಾಗ ಶ್ರೀ ಎಸ್. ಜಿ. ಶಾಸ್ತ್ರಿಗಳ ದಯೆಯಿಂದ ಒಂದು ಎಕ್ಸ್ಟೆರ್ನಲ್ ಲೆಕ್ಚರ್ ಸಿಕ್ಕಿತು. ಅದರ ಫಲವಾಗಿ ಕರ್ಣಾಟಕ ಸಂಸ್ಕೃತಿ ಪುಸ್ತಕ ಬಂತು (೧೯೩೨). ಇದು ವರೆಗೆ ಕನ್ನಡದಲ್ಲಿ ಕರ್ಣಾಟಕ ಸಂಸ್ಕೃತಿಯ ವಿಸ್ತಾರವಾದ ವಿಮರ್ಶೆ ಬಂದಿರಲಿಲ್ಲ. ಆದರೂ ಎಲ್ಲೆಲ್ಲೂ ಸಂಸ್ಕೃತಿಯೆಂಬ ಮಾತು ಕೇಳಿಸುತ್ತಿದೆ. ಅದು ನನ್ನ ಪುಸ್ತಕದಿಂದ ಆಯಿತು ಎನ್ನುವುದಕ್ಕಿಂತ ಕಾಲಮಹಿಮೆ ಎನ್ನುವುದು ಸರಿ.

× × × ×

ಇಂದು ನಾನು ತೃಪ್ತ. ಅದು ನನ್ನ ಸುಪೀರಿಯಾರಿಟಿ ಕಾಂಪ್ಲೆಕ್ಸಿನಿಂದ ಹುಟ್ಟಿದ ಭ್ರಾಂತಿಯಿರಬಹುದು: ನಿಜವಿರಬಹುದು. ನನ್ನ ಸಾಹಿತ್ಯ ಸೇವೆ ನಡೆದಿರುವುದು, ರಂಗಭೂಮಿ, ಶಾಲೆ, ಪತ್ರಿಕೆ, ಭಾಷಣ, ಲೇಖನ, ಗ್ರಂಥ ರಚನೆಗಳಲ್ಲಿ. ಒಂದೊಂದು ಕಡೆಯೂ ಒಂದು ವೈಶಿಷ್ಟ್ಯವಿರುವ ಕೆಲಸ ನಡೆದಿದೆ. ನನಗೆ ಬಿರುದಾವಳಿಗಳು ಬಂದಿಲ್ಲ. ಆದರೂ ನನ್ನ ಕೆಲಸದಿಂದ ಕನ್ನಡ ದೇವಿಗೆ ಸೇವೆ ಸಂದಿದೆಯೆಂಬುದು ನನಗೆ ಗೊತ್ತಿದೆ, ಸಾಕು. ಆಗಲೇ ಹೇಳಿದಂತೆ ಕೀರ್ತಿ, ಹಣ, ಮೊದಲಾದುವು ಬರುವುದು ಒಂದು ವಿಶಿಷ್ಟ ವರ್ಗಕ್ಕೆ. ನಾನು ಯಾವ ವರ್ಗಕ್ಕೂ ಸೇರದೆ ಸ್ವತಂತ್ರವಾಗಿರುವುದೇ ನನಗೆಷ್ಟೋ ಆನಂದ.

ಬರೆದರೆ ಬೇಡ ಎನ್ನುವುದಿಲ್ಲ; ಬಂದರೆ ಹೋಗು ಎನ್ನುವುದಿಲ್ಲ. ಬೇಕಾದ್ದು ಬರೆಯಿರಿ ಪ್ರಕಟಿಸುತ್ತೇವೆ ಎನ್ನುತ್ತಾರೆ. ಕೆಲವರಾದರೂ ಪ್ರಕಾಶಕರು, ನನ್ನ ಮಿತ್ರರು ಏಕಯ್ಯ ಬರೆಯಲಿಲ್ಲ ಎನ್ನುತ್ತಾರೆ. ಬರೆಯುವ ಮೋಹದಲ್ಲಿ ಸಿಕ್ಕಿ ಏನಾದರೂ ಬರೆದೇತೀರಬೇಕೆಂಬ ಹಟವಿಲ್ಲ. ಬರೆಯುವು ದಿಲ್ಲವೆಂಬ ಹಟವೂ ಇಲ್ಲ.

ನನ್ನ ಹರಟೆ, ನನ್ನ ಭಿಕಾರ್, ನನ್ನ ಗಘಾಲಜಿಗಳಿಗೆ ಇನ್ನೂ ನನ್ನ ಮಿತ್ರರಲ್ಲಿ ಗೌರವವಿದೆ, ನನಗೇನಾಗಬೇಕು ?

× × × ×

ಮಾಡಬೇಕೆಂದಿರುವ ಕೆಲಸ. ಅದು ಮಾತ್ರ ನಾನು ಯೋಚಿಸುವುದಿಲ್ಲ. ನನ್ನ ಜೀವನದಲ್ಲಿ ಪರೇಚ್ಛಾ ಪ್ರಾರಬ್ಧ ಬಹಳ ಹೆಚ್ಚು. ನಾನು ವಿನಾಯಕ ನನ್ನು ಮಾಡಬೇಕೆಂದು ಹೊರಡುತ್ತೇನೆ. ಪರೇಚ್ಛಾ ಪ್ರಾರಬ್ಧವು ಅದನ್ನು ಹನುಮಂತರಾಯನನ್ನು ಮಾಡುತ್ತದೆ. ಒಳಗಿನಿಂದ ಏನೋ ಒಂದು ದನಿ "ನಿನ್ನ ಕನ್ನಡದ ಸೇವೆ ಸಾಕು, ಇಂಗ್ಲಿಷಿಗೆ ತಿರುಗು. ಈ ಯುಗ Provincial, national ಎರಡೂ ಅಲ್ಲ Inter-national" ಎನ್ನುತ್ತದೆ. ಹಿಂದೆ ಬಿ. ಎ. ಓದುತ್ತಿದ್ದಾಗ ಕನ್ನಡದಲ್ಲಿ ಹೆಸರಾಂತು ಮಿಕ್ಕೆಲ್ಲ ಕೆಲಸ, "Charity begins at home" ಎಂದುಕೊಂಡಿದ್ದುದು ನೆನವಾಗಿ ಕನ್ನಡದ ಸಹಾರದಲ್ಲಿ ಇದಕ್ಕಿಂತ ಇನ್ನೇನು ಖ್ಯಾತಿ ! ಸಾಕು, ಹೊರಡು ಎನ್ನುತ್ತಿದೆ. ಆದರೂ ಹಳೆಯ ಅಭಿಮಾನ. ಕನ್ನಡ ಕನ್ನಡ ಎನ್ನುತ್ತಿದೆ.

× × × ×

ಮಾಡಿದರೆ ಸಂಸ್ಕೃತ ಪ್ರಚಾರ ಮಾಡಬೇಕು. ಅದಕ್ಕೆ ಒಂದು ಕ್ರಮ ಸಿದ್ಧವಾಗಿದೆ. ಅರವತ್ತು ದಿನ ದಿನಕ್ಕೊಂದು ಗಂಟೆ ಶ್ರಮಪಟ್ಟರೆ ಅರ ವತ್ತೊಂದನೆಯ ದಿನ ಸ್ವತಂತ್ರವಾಗಿ ಗೀತೆ ಓದಬಹುದು. ಆದರೆ? ಅದಷ್ಟು ಸಾಲದು. ಧರ್ಮ, ಅರ್ಥ, ಕಾಮ, ಮೋಕ್ಷ, ನಾಲ್ಕೂ ಒಳಗೊಂಡಿರು ವುದು ಸನಾತನ ಧರ್ಮ. ಅದರ ಸ್ವರೂಪ ಮನಸ್ಸಿಗೆ ಹಿಡಿಯುವಂತೆ ಮಾಡಬೇಕಾದರೆ, ವೇದಗಳಿಂದ ಹಿಡಿದು ಹಲ್ಲೀ ಶಕುನದ ವರೆಗೆ ಎಲ್ಲಾ ತಿಳಿಯಬೇಕು. ಅದಕ್ಕೆ ಎಲ್ಲಾ ಸಂಗ್ರಹ ಮಾಡುತ್ತಿದ್ದೇನೆ, ಅರ್ಧಾಂತವಾಗಿ ಮಾಡಲು ಇಷ್ಟವಿಲ್ಲ, ಎಲ್ಲಾ ಒಟ್ಟಿಗೆ ಬರಲು ಒಂದು ಲಕ್ಷ ರೂಪಾಯಿ ಬೇಕು. ಭಿಕ್ಷೆ ಬೇಡಲು ಇಷ್ಟವಿಲ್ಲ. ಎಲ್ಲಿಂದಲೋ ಬರವುದು ಎಂಬ

ನಂಬಿಕೆ ಮಾತ್ರ ಬೆಟ್ಟದಷ್ಟಿದೆ. ಇದು ಮಾಡಬೇಕಾದುದು ಕನ್ನಡದಲ್ಲೋ ಇಂಗ್ಲಿಷಿನಲ್ಲೊ ? ಇಂಗ್ಲಿಷಿನಲ್ಲಾದರೆ ಗೆಲ್ಲುತ್ತದೆ ಎಂಬ ನಂಬಿಕೆ. ಕನ್ನಡ ದಲ್ಲಾದರೆ ಹುಟ್ಟುವುದಕ್ಕಿಂತ ಮುಂಚೆಯೇ ಸಾಯುತ್ತದೆ ಎಂಬ ದಿಗಿಲು.

× × × ×

ಕನ್ನಡದಲ್ಲಿ ಒಂದು ವಿಶ್ವಕೋಶ ಆಗಬೇಕು. ಅದು ಇನ್ನೂ ಐದು ವರುಷ ಬಿಟ್ಟು ಸುಮಾರು ೧೯೫೦ರಲ್ಲಿ ಆರಂಭಿಸುವ ಕೆಲಸ. ಅದಕ್ಕೆ ಬರೆ ಯುವವರು ಬೇಕು, ಪ್ರಕಾಶಕರು ಬೇಕು, ಕೊಳ್ಳುವವರು ಬೇಕು. ಎಲ್ಲ ಕ್ಕಿಂತ ಮುಂಚೆ ಜನದಲ್ಲಿ ಈ ಬ್ರಾಹ್ಮಣ–ಅಬ್ರಾಹ್ಮಣ ಭೇದ ನಾಯಬೇಕು. ಅದು ಸಾಯುವವರೆಗೂ ವಿಶ್ವಕೋಶ ಬರುವುದಿಲ್ಲ; ಬಂದರೂ ಬದುಕು ವುದಿಲ್ಲ.

× × × ×

ವೇದಗಳದು ಒಂದು ಹುಚ್ಚು. ಇದುವರೆಗೆ ಬಂದ ಭಾಷ್ಯಗಳೆಲ್ಲ ಶಿಕ್ಷಾ, ವ್ಯಾಕರಣ, ನಿರುಕ್ತ, ಛಂದಸ್ಸು, ಕಲ್ಪಗಳಿಗೂ ವೇದಕ್ಕೂ ಇರುವ ಸಂಬಂಧವನ್ನು ತೋರಿಸಿವೆ. ಆದರೆ ಷಡಂಗಗಳ ಸಿದ್ಧಾಂತವೇನು? ಅವಕ್ಕೆ ಅನುಗುಣವಾಗಿ ವೇದದ ಅರ್ಥವೇನು? ಯಾರೂ ಹೇಳಿಲ್ಲ. ಇಂದ್ರಸೂಕ್ತ ವನ್ನು ತೆಗೆದುಕೊಂಡರೆ, ಮಂತ್ರವು ಗಾಯತ್ರಿ, ಉಷ್ಣಿಕ್, ಜಗತೀ ಛಂದಸ್ಸು ಗಳಲ್ಲಿದ್ದರೆ ಏನೇನು ವ್ಯತ್ಯಾಸ? ಅನೇಕರು ಒಬ್ಬನೇ ಇಂದ್ರನನ್ನು ಹಲವು ಸಲ ಸ್ತುತಿಸಿರುವುದೇಕೆ? ಇಂದ್ರನೆಂದು ಆಕಾಶದಲ್ಲಿ ತೋರಿಸುವ ನಕ್ಷತ್ರಕ್ಕೂ ಇಂದ್ರನಿಗೂ ಏನು ಸಂಬಂಧ? ಬ್ರಹ್ಮಾಂಡದ ಇಂದ್ರನು ಪಿಂಡಾಂಡದಲ್ಲಿ ಏನಾಗಿದ್ದಾನೆ ? ಯಾರಾದರೂ ಇಂದ್ರನನ್ನು ಕಂಡಿದ್ದಾರೆಯೇ ? ಅಥವಾ ಇಂದ್ರದೇವತೆಯು ಶುದ್ಧ ಕಲ್ಪನೆಯೇ ? ಮೊದಲಾದ ವಿಚಾರಗಳನ್ನು ವಿಮರ್ಶಿಸಬೇಕು. ಅದನ್ನು ಬರೆಯದೆ ಇಂದ್ರಂ ಹವಾಮ ಹೇ ಎಂಬ ಶಬ್ದಗಳಿಗೆ ಅರ್ಥ ಬರೆದರೆ ಅದೆಂತಹ ಭಾಷ್ಯ ?

ಬಹುಶಃ ಇದು ನನ್ನ ಕೊನೆಯ ಪ್ರಯತ್ನ.

× × × ×

ಕಾಲೇಜಿನಲ್ಲಿದ್ದಾಗ ಮೌರ್ಲ್ಯ, ಬ್ರಾಡ್ಲಿಗಳನ್ನೂ ಓದಿದಾಗಿನಿಂದ ಒಂದು ಭಾರಿಯ ಹುಚ್ಚು, ಕಾಲಿದಾಸ ವಿಕ್ರಮೋರ್ವಶೀಯ, ಮೇಘಸಂದೇಶಗಳಿಗೆ ಹಾಗೆ ವ್ಯಾಖ್ಯಾನ ಬರೆಯಬೇಕು ಎಂದು. ಮೇಘಸಂದೇಶ ಪೂರ್ವಭಾಗಕ್ಕೆ

ಏನೋ ಬರೆದು ಹಾಕಿದ್ದೇನೆ. ವಿಕ್ರಮೋರ್ವಶೀಯಕ್ಕೂ ಬರೆಯಬೇಕು. ಆಗಲೇ ಹೇಳಿದ್ದೇನಲ್ಲ. ಕನ್ನಡದಲ್ಲಿ ಬರೆಯಲು ಅವಸರವಿಲ್ಲ. ಬರೆದರೆ ಇಂಗ್ಲೀಷಿನಲ್ಲಿ ಬರೆಯಬೇಕು. ನೋಡೋಣ.

× × × ×

ಇನ್ನು ನಾವೆಲ್ಲು, ಕಥೆ, ಮೊದಲಾದವು ಬರೆಯುವುದಿಲ್ಲ ಎಂದೂ ಇಲ್ಲ. ಮಹಾಭಾರತದ ಮಹಾಪುರುಷರು ಮುಗಿಸಿದ್ದೇನೆ. ವಾಲ್ಮೀಕಿಯ ವಾಕ್ಯಗಳಲ್ಲಿಯೇ ಸಂಗ್ರಹವಾಗಿರುವ ರಾಮಾಯಣ ಅರ್ಧವಾಗಿದೆ. ಮಹಾಬ್ರಾಹ್ಮಣ ಎಂಬ ನಾವೆಲ್ಲು ಅರ್ಧವಾಗಿದೆ. ಯೋಗವಾಸಿಷ್ಠ ಕನ್ನಡಕ್ಕೆ ಬರೆಯಬೇಕೆಂದು ಒಂದು ದೊಡ್ಡ ಕಡೆಯಿಂದ ಅಪ್ಪಣೆಯಾಗಿದೆ. ಆ ಕೆಲಸ ನಡೆಯುತ್ತಿದೆ.

ಗೀತೆಯ ಪ್ರಚಾರದ ಹುಚ್ಚೊಂದಿದೆ. ಗೀತೆಯ ಮೂರು ಪ್ರಕಟನೆಗಳು ಹೊರಬರಬೇಕು. ಮೊದಲಿನದು ಸುಲಭವಾದ ಭಾಷಾಂತರ, ಇದು ೨ ಆಣೆಗೊಂದರಂತೆ ಸಿಕ್ಕಬೇಕು. ೧ ಲಕ್ಷ ಪ್ರತಿಗಳನ್ನು ಜನತೆಯಲ್ಲಿ ಹಂಚಬೇಕು. ಆಚಾರ್ಯತ್ರಯರ ಭಾಷ್ಯವುಳ್ಳ ಪ್ರತಿಯೊಂದು, ಇದನ್ನು ಪದವೀಧರರಿಗೆಲ್ಲ ಕ್ರಿಶ್ಚನ್ ಲಿಟರರಿ ಸೊಸಾಯಿಟಿಯವರು ಬಾಯಬಲ ಕೊಡುವಂತೆ ಕೊಡಬೇಕು. ಮೂರನೆಯದು, ಇಲ್ಲಿಯ ವರೆಗೆ ಗೀತೆಯ ಮೇಲೆ ಯಾರಾರು ಏನೇನು ಹೇಳಿದ್ದಾರೆ, ಹೇಳಬಹುದು ಎಂಬ ವಿವೇಚನೆಯುಳ್ಳ ೨೦೦೦ ಪುಟದ ಗ್ರಂಥ. ಇದಿಷ್ಟು ಮಾಡಲು ಒಂದು ಸ್ವತಂತ್ರ ಸಂಸ್ಥೆಯು ಆಗಬೇಕು.

× × × ×

ಎಲ್ಲಾ ಆಯಿತು ಎನ್ನೋಣ, ಕಸ್ಮೈ ದೇವಾಯ ಹವಿಷಾ ವಿಧೇಮ ? ಕಸ್ಯ ? ಕುತಃ ? ಗೀತೆಯ ಒಂದು ಶ್ಲೋಕ ಹಿಡಿದುಕೊಂಡು ಚಿಂತಿಸುತ್ತಾ ಒಂದೆರಡು ಗಂಟೆ ಅದು ಒಂದೇ ಶ್ಲೋಕದ ಮೇಲೆ, ಅಸಂಬದ್ಧ ಪ್ರಲಾಪವಲ್ಲದಂತೆ, ಹರಟೆ ಹೊಡೆಯುವುದಕ್ಕಿಂತ ಇವೆಲ್ಲ ಆನಂದಕರವೆ ? ಬ್ರಹ್ಮಸೂತ್ರಗಳಲ್ಲಿ ಒಂದನ್ನು ಹಿಡಿದು ಒಳನುಗ್ಗಿ ಅದರ ವಿಚಾರ ಚಿಂತಿಸುತ್ತ ಮೈಮರೆಯುವುದಕ್ಕಿಂತ ಇದರಲ್ಲೆಲ್ಲಾ ಸೌಖ್ಯವಿದೆಯೇ ? ಅಥವಾ ಅದ್ವೈತಿಗಳು ಹೇಳುವ ಅಮನಸ್ಕ ಯೋಗಕ್ಕಿಂತ ಇನ್ನೇನಿದೆ ?

**ದೇವುಡು ನರಸಿಂಹಶಾಸ್ತ್ರಿ**
**ಎಮ್. ಎ.**

# ಸ್ವ-ದರ್ಶನ ++ ++ ++ ++

ನನ್ನಲ್ಲಿ ಸಾಹಿತ್ಯದ ಸೆಲೆಯೊಡೆದು ಇಪ್ಪತ್ತು ವರುಷಗಳಿಗೆ ಮೇಲಾದ ಕಾಲ ಸಂದಿದೆ. ಈ ಅವಧಿಯಲ್ಲಿ ಬಹುಶಃ ಎಲ್ಲ ರೂಪಗಳಲ್ಲಿ ಬರಿವಣಿಗೆ ಆಗಿದೆ. ವೈವಿಧ್ಯವಿದೆ, ಗಾತ್ರವಿಲ್ಲ. ಬರೆಯಬೇಕೆಂಬ ಯೋಜನೆಗಳ ಮುಂದೆ ಬರೆದದ್ದು ಸ್ವಲ್ಪ. ಹೀಗಿರುವಾಗ ಹಿನ್ನೋಟದ ಈ ಬರಹವನ್ನು ಬರೆಯಬೇಕೆಂಬ ಪ್ರೇರಣೆ ತಾನಾಗಿ ನನ್ನಲ್ಲಿ ಮೂಡಲಿಲ್ಲ. 'ಮಿಂಚಿನ ಬಳ್ಳಿ'ಯ ಸೆಳೆತಕ್ಕೊಳಗಾಗಿ ಇದಕ್ಕೆ ಕೈಹಾಕಿದ್ದೇನೆ. ಹೀಗೆಂದು ಬಲವಂತದ ಮಾಘಸ್ನಾನವೆಂದು ಅರ್ಥವಲ್ಲ. ನಾನಿನ್ನೂ ನನ್ನ ಜೀವನ ಮತ್ತು ನಿರ್ಮಾಣ ಎರಡರಲ್ಲಿಯೂ ಬಹುಮಟ್ಟಿಗೆ ಸಾಧಕನ ಅವಸ್ಥೆಯಲ್ಲಿ ಇದ್ದವನಾದರೂ ಈಗೊಂದು ನಿಶ್ಚಿತವಾದ ನೆಲೆಗೆ ಬಂದು ನಿಂತಿದ್ದೇನೆ ಎಂಬುದು ನಿಜ. ಒಂದು ಗುರಿಯತ್ತ ಹೊರಟ ಪಯಣಿಗನು ನಡುದಾರಿಯಲ್ಲಿ ತಂಗಿ ತಾನು ತುಳಿದ ದಾರಿಯನ್ನು ಅರಿತು ಗುರಿತಿಸಿದಂತೆ ಈ ಬರಹದ ರೀತಿಯಾಗಬಹುದು. ಮುನ್ನಡೆಗೆ ಇಂಥ ನಿರೀಕ್ಷಣೆ ನೆರವಾಗಲೂ ಬಹುದು. ಕನ್ನಡ ವಾಚಕರ ಹಾಗೂ ವಿಮರ್ಶಕರ ದೃಷ್ಟಿಯಿಂದ ಇಂಥ ಬರಹ ತೀರ ಅಗತ್ಯ-ವೆಂಬದನ್ನರಿತು ಇದನ್ನು ಪ್ರೀತಿಯಿಂದ ಬರೆಯುತ್ತಲಿದ್ದೇನೆ.

ನನ್ನಲ್ಲಿ ರಸೋದಯವಾದದ್ದು೧೯೩೪ರಲ್ಲಿ ಕಾಲೇಜವಿದ್ಯಾಭ್ಯಾಸಕ್ಕೆಂದು ಧಾರವಾಡಕ್ಕೆ ಬಂದಾಗಿನಿಂದ ಎನ್ನಬಹುದು. ಆ ಮೊದಲು ೧೯೩೦ರ ರಾಷ್ಟ್ರೀಯ ಚಳವಳಿಯಲ್ಲಿ ಶಾಲೆಗೆ ಬಹಿಷ್ಕಾರ ಹಾಕಿ ಹಳ್ಳಿಹಳ್ಳಿಗೆ ಹೋಗಿ ಖಾದಿಪ್ರಚಾರ ಮಾಡಿದಾಗ ರಾಷ್ಟ್ರೀಯದೃಷ್ಟಿ ಮೊಳೆಯಿತು, ಮುಂದೆ ಸಂಸ್ಕೃತವಾಙ್ಮಯದ ವಿಶೇಷವಾಗಿ ಕಾಲಿದಾಸ ಗ್ರಂಥಗಳ ಅಭ್ಯಾಸದಿಂದ

ಸಾಹಿತ್ಯಪ್ರೀತಿ ಹುಟ್ಟಿತು. ಅಚ್ಚುಕಟ್ಟಾಗಿ ಅಭ್ಯಾಸಮಾಡಿ ಪರೀಕ್ಷೆಯಲ್ಲಿ ಮುಂದುವರಿಯಬೇಕೆಂಬ ಹವ್ಯಾಸದೊಡನೆ ಸ್ವತಂತ್ರ ವಿಚಾರ ಗಂಭೀರವೃತ್ತಿ-ಯೊಂದು ಬೆಳೆಯುತ್ತ ಬಂದಿತು. ಶಾಲೆಯ ಕೊನೆಕೊನೆಯ ವರ್ಷಗಳಲ್ಲಿ ಗಳಗನಾಥರ ಕಾದಂಬರಿಗಳನ್ನೂ ಬೇರೆ ಕನ್ನಡ ಪುಸ್ತಕಗಳನ್ನೂ ಜಯಕರ್ನಾಟಕದಲ್ಲಿಯ ಕವನ-ಲೇಖನಗಳನ್ನೂ ಓದಿ ಮೆಚ್ಚಿದ್ದೆ. ಆದರೆ ಧಾರವಾಡಕ್ಕೆ ಬರುವ ವರೆಗೆ ಸಾಹಿತ್ಯನಿರ್ಮಾಣದ ಪ್ರೇರಣೆ ನನ್ನಲ್ಲಿ ಮೂಡೀತೆಂದು ತೋರಿರಲಿಲ್ಲ. ಬಯಲುಸೀಮೆಯಿಂದ ಮೊದಲನೆಯ ಸಲ ಮಲೆನಾಡಿನ ನೆರಗಿಗೆ ಬಂದ ನಾನು ಮಳೆಗಾಲದ ಸೃಷ್ಟಿಯನ್ನು ನೋಡಿ ಮುಗ್ಧನಾದೆ, ಚಕಿತನಾದೆ. ಏರೇರಿ ಬರುವ ಮೋಡಗಳ ನೆರವಿ, ಅವು ಸುರಿಯುವ ನಿರಂತರಧಾರೆ, ಸುತ್ತೆಲ್ಲ ಕಣ್ಣು ತುಂಬುವ ಹಸುರು, ಕಾಡು ಹೂಗಳ ಶೋಭೆ, ಮಳೆ ನಿಂತು ಸೂರ್ಯಕಿರಣ ಹೊರಹೊಮ್ಮಿದ ನೋಟ ಇಂಥ ನೂರಾರು ಚಿತ್ರಗಳು ನನ್ನ ಹುಚ್ಚು ಹಿಡಿಸಿದುವು. ಬೆಳಗಿನ, ಸಂಜೆಯ ಅಲೆದಾಟಗಳಲ್ಲಿ ನಿಸರ್ಗವನ್ನು ನೋಡಿ ನಲಿಯುತ್ತ ಕುಣಿಯುತ್ತ ಕಾಲಕಳೆದೆ. ಸೌಂದರ್ಯೋಪಾಸನೆಗೆ ಅಂದಿನಿಂದ ಮೊದಲಾಯಿತು. ನನ್ನ ಆಗಿನ ರಸಾನುಭವವನ್ನು 'ಎಂದೊ ಏನೊ' (ಪು ೪೧. ಬಾಸಿಗ) ಎಂಬ ಕವಿತೆಯಲ್ಲಿ ವ್ಯಕ್ತಗೊಳಿಸಲಾಗಿದೆ. ನಾ ಕಂಡ ಚೆಲುವನ್ನು, ಉಂಡ ನಲಿವನ್ನು ಬಣ್ಣಿಸಬೇಕೆಂದು ಹಾತೊರೆದೆ. ಆದರೆ ಕಾವ್ಯಲೇಖನದ 'ಓನಾಮಾಸಿ'ಯೂ ನನಗೆ ಗೊತ್ತಿರಲಿಲ್ಲ. ಭಾವನೆಗಳೂ ಕಲ್ಪನೆಗಳೂ ಧಾರವಾಡದ ಮುಗಿಲಿನಲ್ಲಿಯ ಮೋಡಗಳಂತೆ ನುಗ್ಗಿ ಬರುತ್ತಿದ್ದುವು. ಅವನ್ನು ನನಗೆ ತೋರಿದಂತೆ ಹರಮುರಕ ಮಾತಿನಲ್ಲಿ ಮೂಡಿಸತೊಡಗಿದೆ. ಅವಕ್ಕೆ ಛಂದಸ್ಸಿನ ಬಂಧನವಿಲ್ಲ, ಶೈಲಿಯ ಕಲ್ಪನೆಯಿಲ್ಲ. ಗದ್ಯವೂ ಅಲ್ಲ ಪದ್ಯವೂ ಅಲ್ಲ, ಆದರೆ ಕವಿತೆ ಬರೆದೆನೆಂದು ನನಗೆ ಸಮಾಧಾನ ಕೊಡುವ ಹೊರಪಾಟ. ಇಂಥ ಅನೇಕ ಪೂರ್ಣ, ಅಪೂರ್ಣ ಬರಹಗಳಲ್ಲಿ ಕೆಲವನ್ನು ಛಂದಸ್ಸಿನ ನಿಯಮವರಿತ ಮೇಲೆ ಮುಂದೆ ಸರಿಯಾಗಿ ಬರೆಯಲೆಳಸಿದೆ. 'ನೀರ್‌ನಲ್ಲೆಯು ಓರ್ವಳೇ ಬರುವಳೆಂತು? ನೀರ್ ನಲ್ಲೆಯರು ಬರುವರೆಂತು?' ಎಂಬಿವೆರಡು ಇದಕ್ಕೆ ಉದಾಹರಣೆ. ಇವಿನ್ನೂ ಪ್ರಕಟವಾಗಿಲ್ಲ. ಪ್ರಾರಂಭದ ಕಾಲದಲ್ಲಿ ಕಾಲೇಜಿನ ಪತ್ರಿಕೆಗಾಗಿ ಒಂದೆರಡು ಲೇಖನಗಳನ್ನೂ ಬರೆದೆ, ಅವು ಪ್ರಕಟವಾದುವು. ಅವುಗಳಲ್ಲಿಯ ಒಂದು 'ವಿಶ್ವಭಾರತಿ' ಯಲ್ಲಿ ಬಂದ ಇಂಗ್ಲಿಶ್ ಲೇಖದ

ಆಧಾರದಿಂದ ಕನ್ನಡದಲ್ಲಿ ಬರೆದ 'ಯಜ್ಞೋಪವೀತ'ವೆಂಬ ಲೇಖ. ಅದು ಪತ್ರಿಕೆಯಲ್ಲಿ ಅಚ್ಚಾಗಿ ಬಂದದ್ದು ನೋಡಿದಾಗ ನನಗಾದ ಆನಂದವನ್ನು ಬಣ್ಣಿಸಬಹುದೇ ?

ನನ್ನ ರಸಿಕತನದ ಸ್ಥಾಯಿಗೆ ಧಾರವಾಡದ ಕಾರ ಲಕ್ಷ್ಮಿಯಷ್ಟೇ ಅಲ್ಲಿ ನನಗೆ ದೊರೆತ ಗೆಳೆತನದ ಸಂಪತ್ತಿಯೂ ಉದ್ದೀಪಕವಾಯಿತು. ನನ್ನೂರಿನ ಮಿತ್ರನೊಬ್ಬನ ಮುಖಾಂತರ ಶ್ರೀ ಬೇಂದ್ರೆಯವರ ಹಾಗೂ ಅವರ ಒಡನಾಡಿ-ಗರ ಪರಿಚಯವಾಗಿ ಅದು ಸ್ನೇಹದ ಬಳ್ಳಿಯಾಗಿ ಬೆಳೆಯುತ್ತ ಹೋದಂತೆ ಹೂವಿನಂತೆ ನನ್ನ ಹೃದಯವರಳಿತು, ತನ್ನಲ್ಲಿಯ ಶಕ್ಯತೆಗಳನ್ನು ಅರಿತುಕೊಳ್ಳ ಹತ್ತಿತು. ರಸಿಕವೃತ್ತಿ, ಧ್ಯೇಯಪ್ರವಣತೆ, ಚಿಂತನಪರತೆ, ನಿರ್ಮಾಣಪ್ರವೃತ್ತಿ ಇವೆಲ್ಲ ಜೀವಂತವಾದ ಗೆಳೆತನದ ನೀರುಂಡು ಬೆಳೆಯತೊಡಗಿದುವು. ನನ್ನೆಲ್ಲ ಸಂಸ್ಕೃತಿಗೆ ಈ ಬಗೆಯಲ್ಲಿ ಧಾರವಾಡವೇ ನಿಸರ್ಗ-ಮಾನವ ರೂಪಿಯಾದ ಮೊಲೆಹಾಲುಣಿಸಿ ಸಾಕುತಾಯಿಯಾಯಿತು. ಈ ಪರಿಸರದಲ್ಲಿ ಬೇಂದ್ರೆ ವ್ಯಕ್ತಿಯ ಸಂಪರ್ಕವೊಂದು ನನ್ನ ಪುಣ್ಯವಿಶೇಷದಿಂದ ಒದಗಿಬಂದ ದೈವ ಘಟನೆಯೆಂದು ನಾನು ತಿಳಿದಿದ್ದೇನೆ. ಭಾವನಾಪ್ರಧಾನ ಜೀವಿಯಾದ ನನಗೆ ಅತ್ಯವಶ್ಯವಾದ ಆ ಸಂಪರ್ಕವು ದೊಡ್ಡ ಅನುಗ್ರಹವಾಯಿತು. ಅದರಿಂದ ನನ್ನ ನಾನರಿತುಕೊಳ್ಳಲು ಬಲ್ಲವನಾದೆ. ನನ್ನ ಬರೆವಣಿಗೆಯ ಬಗ್ಗೆ ಆತ್ಮವಿಮರ್ಶೆಯನ್ನು ಮಾಡಿಕೊಳ್ಳಲು ಅರಿತೆ. ಸ್ಫೂರ್ತಿ-ಉತ್ಸಾಹಗಳನ್ನು ತುಂಬಿ ಹೊಸ ದರ್ಶನವನ್ನು ಇನ್ನೊಬ್ಬರಲ್ಲಿ ಸಂಚಾರಗೊಳಿಸುವುದಲ್ಲದೆ, ಅವರ ದೌರ್ಬಲ್ಯವನ್ನರಿತು ಯೋಗ್ಯ ವಿಮರ್ಶೆಯಿಂದ ಅದನ್ನು ಕಳೆಯುವ ಅದ್ಭುತ ಶಕ್ತಿ ಬೇಂದ್ರೆಯವರಲ್ಲಿದೆ. ಅನೇಕ ಸಲ ಅದರ ಪ್ರಭಾವದಿಂದ ನಾನು ಪುನೀತನಾಗಿದ್ದೇನೆ. ನನ್ನ ಮೊದಲತೊದಲಿನ ಬರಹಗಳನ್ನು ಅವರ ಹತ್ತಿರ ಹೋಗಿ ಓದಿದಾಗ ಎಷ್ಟು ಪ್ರೀತಿಯಿಂದ ಕೇಳಿದರೋ ಅಷ್ಟೇ ಸ್ನೇಹದಿಂದ ನೇರವಾಗಿ ಅವುಗಳ ವಿಮರ್ಶೆ ಮಾಡದೆ ಒಳ್ಳೆಯ ಬರೆವಣಿಗೆಯ ಲಕ್ಷಣಗಳನ್ನು ಕುರಿತು ಕೋಣೆಯ ಒಂದು ತುದಿಯಿಂದ ಇನ್ನೊಂದು ತುದಿಗೆ ಪಂಜರದಲ್ಲಿಯ ಸಿಂಹದಂತೆ ಅಲೆಯುತ್ತ ಅವರು ಬಾಯ್ತುಂಬ ಮಾತಾಡಿದರು. ಅದೇ ನನಗೆ ಸಾಹಿತ್ಯ ಮಂತ್ರೋಪದೇಶವಾಯಿತು. ಅಂದಿನಿಂದ ಹೊಸ ಕಣ್ಣು ತೆರೆಯಿತು. ಆಗ ಕೆಲವು ಕಾಲ ಇನ್ನು ಬರೆಯಬಾರದೆಂದು ನಾನು ಶಪಥವನ್ನೇ ಮಾಡಿದೆ. ಅಂದರೆ ಬೇಂದ್ರೆಯವರ ವಿಮರ್ಶೆಯಿಂದ ಕೆರಳಿ

ಹಾಗೆ ಮಾಡಿದೆನೆಂದಲ್ಲ. ನನ್ನ ಬಾಳನ್ನು ಬೆಳಗಿಸಿಕೊಳ್ಳಬೇಕು, ನನ್ನ ಶಕ್ತಿಗಳನ್ನು ಬಲಪಡಿಸಬೇಕು, ನನ್ನ ತಿಳಿವಳಿಕೆಯನ್ನು ಹೆಚ್ಚಿಸಬೇಕು ಎಂಬ ಹವ್ಯಾಸವು ನನ್ನಲ್ಲಿ ಪ್ರಬಲವಾಯಿತು. ಅದರ ಮುಂದೆ ನಿರ್ಮಾಣದ ಆವೇಶವು ಮಂಜಿನಂತೆ ಮಾಯವಾಯಿತು.

ಎರಡು ಮೂರು ವರ್ಷಗಳ ವರೆಗೆ ನಾನೇನನ್ನೂ ಬರೆಯಲಿಲ್ಲ. ಬಿ. ಎ. ಕ್ಲಾಸಿನ ಮೊದಲ ವರ್ಷದಲ್ಲಿ ಕಾಲಿಟ್ಟ ಮೇಲೆ ಕರ್ಣಾಟಕ ಸಂಘದ ಕಾರ್ಯದರ್ಶಿಯೂ ಕಾಲೇಜ ಪತ್ರಿಕೆಯ ಕನ್ನಡ ವಿಭಾಗದ ಸಂಪಾದಕನೂ ಆಗಿ ಕನ್ನಡದ ಚಟುವಟಿಕೆಗಳಲ್ಲಿ ಮುಂದೆ ಬಿದ್ದ ಮಿತ್ರರಲ್ಲಿ ಒಬ್ಬನಾದೆ. ಪತ್ರಿಕೆಗಾಗಿ ವಿನೋದದ ಚುಟಕಿಗಳನ್ನು ಬರೆಯುವುದು, ಲೇಖನಗಳನ್ನು ಅಣಿಮಾಡುವುದು ಈ ಮುಂತಾದ ಕೆಲಸದಲ್ಲಿ ಮನಸ್ಸು ತೊಡಗಿದಾಗ ಮತ್ತೊಮ್ಮೆ ನಿರ್ಮಾಣದ ಊರ್ಮಿಗಳು ತಲೆದೋರಿದುವು. ಆಗಾಗ ಸ್ಫುರಿಸಿದ ಭಾವಗಳನ್ನು ಬಂದಂಥ ಮಾತಿನಲ್ಲಿ ಮೂಡಿಸಿ ಅಲ್ಲಿಗೇ ಬಿಡುತ್ತಿದ್ದೆ. ಅಂಥವುಗಳಲ್ಲಿ 'ಮನೆಗೆ ಬಂದೊಡನೊಮ್ಮೆ, ಮನೆಯ ಬಿಟ್ಟಾಗೊಮ್ಮೆ, ಕುಂಕುಮವ ಹಚ್ಚಿಸಿಕೊಂಡು ನಿರಂತರ ಮುತ್ತೈದೆಯಾದ ಸಂಧ್ಯಾರಮಣಿಯಿವಳೋ' 'ಅರಸನಾಗಲು ಬೇಡವಯ್ಯ, ಸರಸನಾಗುವೆ ಸಿರಿಯಿಲ್ಲದಲೆ' ಎಂಬುವು ಉದಾಹರಣೆಯಾಗಿ ದಿನಚರಿಯಲ್ಲಿವೆ. ಕೀಟ್ಸಕವಿಯ 'A thing of beauty is a joy ever' ಎಂಬುದಾಗಿ ಮೊದಲಾಗುವ ಕವಿತೆಯ ಅನುವಾದವನ್ನೂ 'ಹುಣ್ಣಿವೆಯ ಚಂದಿರಾ' ಎಂಬ ಸ್ವತಂತ್ರ ಕವನವನ್ನೂ ಬರೆಯಲು ಹವಣಿಸಿದೆ. ಆಗಲೂ ಬರೆವಣಿಗೆಯ ತಿಳಿವು ಹೆಚ್ಚಿದ್ದರೂ ಅದಕ್ಕೆ ಆಕಾರ ಬಂದಿರಲಿಲ್ಲ. ಒಂದು ದಿನ ಮಾತ್ರ ನನ್ನ ಮೆಚ್ಚಿನ ಸಂಪಗೆಯ ಹೂವಿನ ತುದಿಗೆಂಪು ಅಕಲ್ಪಿತವಾಗಿ ಕವಿತಾವೇಶವನ್ನು ಉಂಟುಮಾಡಿತು, ತನ್ನೆಲ್ಲ ಮಾತಿನ ಪರಿವಾರದೊಡನೆ ಚಿತ್ತರಂಗದಲ್ಲಿ ಸಹಜವಾಗಿ ಅವತರಿಸಿತು. ಅದೇ 'ಸಂಪಗೆಯು' (ಪು. ೧೬ ಬಾಸಿಗ) ಎಂಬ ಕವಿತೆ. ಅಂದಿನಿಂದ ನನ್ನ ಕಾವ್ಯರಚನೆಯಲ್ಲಿ ಎರಡನೆಯ ಹಂತವು ಆರಂಭವಾಯಿತು. ಇಷ್ಟಾದರೂ ನಿಗ್ರಹದ ಸಾಧನೆಯನ್ನು ನಾನು ಬಿಡಲಿಲ್ಲ. ಅನಿವಾರ್ಯವಾಗಿ ಬಂದುವನ್ನು ಬರಮಾಡಿದೆ. ಒಂದು ಸ್ಪರ್ಧೆಗಾಗಿ 'ನಿಹಲೆ' ಎಂಬ ಐತಿಹಾಸಿಕ ಏಕಾಂಕವನ್ನು ಇದೇ ಕಾಲಕ್ಕೆ ಬರೆದೆ, ಅದು ಮುಂದೆ ಬೆಳೆದು 'ಸೇವಾಪ್ರದೀಪ' ವೆಂಬ ದೊಡ್ಡ ನಾಟಕವಾಗಿ ಪ್ರಕಟವಾಯಿತು. ತರುವಾಯದ ಎರಡು ಮೂರು

ವರ್ಷಗಳಲ್ಲಿ ಹಲವು ಕವಿತೆ-ಕತೆಗಳನ್ನು ಬರೆದೆ. ಅವುಗಳಲ್ಲಿ 'ಮಂದಾರ ಹೂವಾ' ಒಂದು. ಒಮ್ಮೆ ಕೋಣೆಯ ಕಿಡಿಕಿಯಲ್ಲಿ ಹೊರನೋಟವನ್ನು ನೋಡುತ್ತ ನಿಂತಿರಲು 'ಬಂದಾರ ತಂದಾರ ಮಂದಾರ ಹೂವಾ' ಎಂಬ ಸಾಲು ಬಾಯಿಗೆ ಬಂದಿತು. ಅದರೊಡನೆ ಮಂದಾರ ಹೂವಿನ ಪೂವಾಡ ಗಿತ್ತಿಯರು ನೆಲದ ಮೇಲೆ ಬಂದಿರುವ ಚಿತ್ರವೂ ಮೂಡಿತು. ಮುಂದೆ ಕೆಲವು ದಿನದ ಮೇಲೆ ಕವಿತೆ ತಾನೇ ಆಕಾರವನ್ನು ತಾಳಿತು. ಅದು ತಿದ್ದಿದ ಸ್ವರೂಪ ದಲ್ಲಿ ಈಗ ಪ್ರಕಟವಾಗಿದೆ. ಇಲ್ಲಿ ಕಾವ್ಯಸ್ಫುರಣದ ಒಂದು ಬಗೆಯನ್ನು ಕಾಣಬೇಕು. ಇನ್ನೊಂದು ಬಗೆಯೆಂದರೆ ಬೆಳಗಾವಿಯು ಸಾಹಿತ್ಯ ಸಮ್ಮೇಲನ ದಲ್ಲಿ ಹೊಸದು ಹಳೆಯದರ ತಿಕ್ಕಾಟವಾಗಿ ಹೊಸದರ ಗೆಲವನ್ನು ಕಂಡುಬಂದ ಮೇಲೆ 'ಹೊಸ ಕಾಲದ ನವಿಲು' ಎಂಬ ಕವಿತೆ ಬರೆದದ್ದು. 'ಮಂದಾರ ಹೂವಾ'ದಲ್ಲಿ ಪೂರ್ವ ಯೋಜನೆಯಿರಲಿಲ್ಲ. 'ಹೊಸ ಕಾಲದ ನವಿಲು' ಸಂಪೂರ್ಣವಾಗಿ ಯೋಜನಾಬದ್ಧವಾದುದು. ಇನ್ನೊಂದು ಸಲ ಕಾರಣ ವಿಲ್ಲದೆ ಕಣ್ಣಮುಂದೆ ವೀಣೆಯನ್ನು ಬಾರಿಸುತ್ತ ಶೋಕ ಗೀತೆಯನ್ನು ಹಾಡು ತ್ತಿರುವ ಹೆಂಗಸಿನ ಚಿತ್ರವೊಂದು ಸುಳಿಯಿತು, ನನ್ನಲ್ಲಿ ಕಂಬನಿಯುಕ್ಕಿಸಿತು. ಅದೇ 'ಸಂಗೀತವೇಕೆ ತಂಗಿ' ಎಂಬ ಕವನದ ರೂಪ ತಾಳಿತು.

ಎಂ. ಎ. ಅಭ್ಯಾಸದ ಕೊನೆಯೆರಡು ವರ್ಷಗಳಲ್ಲಿ ನನ್ನ ಜೀವನದಲ್ಲಿ ಆಳವಾದ ಗೆಳೆತನದ ಸಾಧನೆ ಹೆಚ್ಚಿತ್ತು. ಅದರೊಡನೆ ಲೋಕದ ಗೆಳೆಯ, 'ಸುಹೃದಂ ಸರ್ವಭೂತಾನಾಂ' ಆದ ದೇವನ ಹಂಬಲಿಕೆಯೂ ಹೆಚ್ಚಿತು. ಮೊದಲಿನ ನಾಸ್ತಿಕತೆ, ನಡುವಿನ ಉದಾಸೀನತೆ ಇವು ಹಿಂದೆ ಸರಿದು ಹೊಸ ಬಗೆಯ ಆರ್ತಭಕ್ತಿ ಮೊದಲುಗೊಂಡಿತು. ಈ ಸಾಧನೆಗೆ ಪುಟಗೊಟ್ಟು ನನ್ನ ಜೀವದ ಗೆಳೆಯರಾಗಿ ಬಾಳನ್ನು ಬೆಳಸಿದವರೆಂದರೆ ವಿನಾಯಕ ಮತ್ತು ಅಭಯ ಇವರು. ವಿನಾಯಕನ ತೀಕ್ಷ್ಣ ದೃಷ್ಟಿಯೂ, ಅಭಯನ ನಿಶ್ಚಿಂತ ವೃತ್ತಿಯೂ ನನ್ನ ದಾರಿ ದೀಪಗಳಾದುವು. ಗೆಳೆತನದ ಮಹಿಮೆಯಿಂದ ನಾವು ತ್ರಿಮೂರ್ತಿ ಗಳಾಗಿ ಏಕಜೀವವಾಗಿ ಮೆರೆದೆವು. ಬಾಳು ಹೃಷ್ಟ ಪುಷ್ಟವಾಯಿತು. ತೃಪ್ತ ವಾಯಿತು. ಈ ರಸಾನುಭವವು ನನ್ನ ಸಾಹಿತ್ಯ ನಿರ್ಮಾಣದ ನಿತ್ಯ ಪ್ರೇರಕ ಗಳಲ್ಲಿ ಒಂದಾಗಿದೆ. ನನ್ನ ಪರೀಕ್ಷೆಯ ಸೋಲುಗಳಿಗೆ ಕಳಸವಿಟ್ಟಂತೆ ಎಂ.ಎ. ದಲ್ಲಿ ಪ್ರಥಮ ಶ್ರೇಣಿಯ ಮಾನ ಕೈಗೆ ಬಂದಂತಾಗಿ ಕೆಳಜಾರಿತು. ಆಗ ನಿರಾಶೆ ಕವಿಯಿತು, ಕಳವಳ ತಿವಿಯಿತು. ನನ್ನ ಕನಸಿನ ಗೋಪುರ ಕೆಳಗುರು

ಳಿತು. ಎಲ್ಲ ಮುಗಿಯಿತು ಎಂಬಂತೆ ಮನಸ್ಸು ಅತ್ಯಂತ ಅಸ್ವಸ್ಥವಾಯಿತು. ಆಗ ಆತ್ಮಿಕ ಸಾಧನೆಯು ಒಂದು ನಿತ್ಯಕ್ರಮದಿಂದಲೂ ಅಂತರ್ನಿರೀಕ್ಷಣೆಯಿಂದಲೂ ಶಾಂತಿಸಮ್ಮುಖವಾಗಿ ನನ್ನ ಬಾಳನ್ನು ನಡಸಿದೆ. ಅಂದಿನಿಂದ ಹೊಸ ಜೀವನ ದರ್ಶನ, ಅದಕ್ಕನುಗುಣವಾದ ಸಾಹಿತ್ಯ ಇವು ತಲೆಯೆತ್ತಿದುವು. ಎಂಥ ಘೋರ ಸತ್ಯವನ್ನೂ ಇದುರಿಸಿ ದೈವ ಕೊಟ್ಟ ಶಕ್ತಿಗಳನ್ನೂ ಸಂಧಿಗಳನ್ನೂ ಬಳಸಿ ಬಾಳುವೆಯನ್ನು ಕಟ್ಟಬೇಕೆಂಬ ಹಿರಿಯಾಸೆ ಬಲಿಯಿತು. ಕಂಡ ದರ್ಶನದಂತೆ ನಿತ್ಯವೂ ಬಾಳುತ್ತಿರುವಾಗ ಮನಸ್ಸಿನ ಹೆದರಿಕೆಗಳೂ ಅಳಿಯಾಸೆಗಳೂ ಸೋಲಿನ ಮಾಯದ ಗಾಯಗಳೂ ತಿರುತಿರುಗಿ ಗ್ಲಾನಿಯನ್ನೂ ಚ್ಯುತಿಯನ್ನೂ ತಂದಾಗ ತೂಕ ತಪ್ಪದಂತೆ ನೋಡಿಕೊಳ್ಳಲು ಪ್ರಾರ್ಥನೆ, ಧ್ಯಾನ, ಸ್ಮರಣೆಗಳು ದಿಕ್ಕುಕಾಯುವ ದೇವತೆಗಳಂತೆ ನೆರವಾಗಿ ನಿಂತವು. ಹೊಯ್ದಾಡುತ್ತಲೂ ಮುಳುಗುವಂತೆ ತೋರುತ್ತಲೂ ಹಡಗ ಮುಂದೆ ಸಾಗಿದಂತೆ ಜೀವನ ಸಾಗಿತು, ಇನ್ನೂ ಹೀಗೆ ನಾಗುತ್ತಿರುವುದು.

ಶಿಕ್ಷಕನಾಗಬೇಕೆಂಬ ಹುರುಪಿನಿಂದ ಬಿ. ಟಿ. ಪರೀಕ್ಷೆಯಲ್ಲಿ ತೇರಿ, ಹುಬ್ಬಳ್ಳಿಯಲ್ಲಿ ಕಳೆದ ಒಂದು ವರ್ಷದಲ್ಲಿ ಸಂಸಾರವೂ ಕಾವ್ಯಸಂಸಾರವೂ ಹೊಸ ಹುಮ್ಮಸಿನಿಂದ ಮೊದಲಾದುವು. ಕೆಲವು ಭಕ್ತಿಪರಗೀತೆಗಳೂ ಕತೆಗಳೂ ಆಗ ಜನ್ಮ ತಾಳಿದುವು. ತರುವಾಯ ೧೯೩೩ ರಲ್ಲಿ ಸಾಂಗಲಿಗೆ ಬಂದವನು ಇಲ್ಲಿಯೇ ನೆಲಸಿದ್ದೇನೆ. ಕೂಡಿದರೆ ಕನ್ನಡ ನಾಡಿನಲ್ಲಿದ್ದು ಕೈಲಾದ ಕೆಲಸವನ್ನು ಮಾಡಬೇಕೆಂದವನನ್ನು ದೈವ ಗಡಿನಾಡಿನಲ್ಲಿ ತಂದು ನಿಲ್ಲಿಸಿತು. ಇದರಿಂದ ಹೊಸ ಪರಿಸ್ಥಿತಿಯೊಡನೆ, ಭಿನ್ನಪ್ರಕೃತಿಯ ಜನದೊಡನೆ ಹೋರಾಟ ಹೊಂದಿಕೆಗಳಲ್ಲಿ ಎಷ್ಟೋಕಾಲ ಕಳೆಯಬೇಕಾಗುತ್ತದೆ. ಆದರೆ ಇನ್ನೊಂದು ದೃಷ್ಟಿಯಿಂದ ಇದು ಒಳ್ಳೆಯದೇ ಆಯಿತೆನ್ನಬೇಕು. ಕನ್ನಡದ ಕೇಂದ್ರವೊಂದನ್ನು ಇಲ್ಲಿ ಕಟ್ಟಿಕೊಂಡು ಗಡಿನಾಡಿನ ಕನ್ನಡ ಚಟುವಟಿಕೆಗಳಿಗೆ ನೆರವಾಗುವ ಯೋಗ ನನಗೆ ದೊರೆಯಿತು. ಎಲ್ಲಕ್ಕಿಂತ ಹೆಚ್ಚಾಗಿ ನನ್ನ ಆತ್ಮಿಕ ಸಾಧನೆಗೂ ಸಾಹಿತ್ಯರಚನೆಗೂ ತೀರ ಅಗತ್ಯವಾದ ತಪೋವನವು ಈ 'ವಿಶ್ರಾಮಬಾಗ' ದಲ್ಲಿ ದೊರೆತಿದೆ. ಇಲ್ಲಿಗೆ ಬರುವ ಕನ್ನಡ ವಿದ್ಯಾರ್ಥಿಗಳ ಹಿತಚಿಂತನೆಯಲ್ಲಿಯೂ ವ್ಯಕ್ತಿತ್ವಪೋಷಣೆಯಲ್ಲಿಯೂ ಒಂದು ಬಗೆಯ ಸಮಾಧಾನವು ದೊರೆಯುತ್ತದೆ. ಗೆಳೆಯ ಗೋಕಾಕರು ಇಲ್ಲಿಯ ಕಾಲೇಜಿನ ಧುರೀಣರಾಗಿ ವಾಸರಾಗಿದ್ದ ಕಾಲದಲ್ಲಿ ಕರ್ನಾಟಕ ಸಂಘ, ವರುಣಕುಂಜ ಮುಂತಾದ ಎಡೆ

ಗಳಲ್ಲಿ ಕನ್ನಡ ವಿದ್ಯಾರ್ಥಿಗಳ ಜೊತೆಯಲ್ಲಿ ಹಾಗೂ ನಮ್ಮ ನಮ್ಮೊಳಗೆ ನಾವಿಬ್ಬರೂ ಕಳೆದ ಕಾಲವನ್ನೂ ಪಡೆದ ಹಿಗ್ಗನ್ನೂ ಎಂದೂ ಮರೆಯುವಂತಿಲ್ಲ. ವೈಯಕ್ತಿಕವಾಗಿ ನನ್ನ ಸಾಹಿತ್ಯ ರಚನೆಯ ಮುಂಬರಿವಿಗೆ ಗೋಕಾಕರ ಸಹೃದಯತೆಯೂ ಅವರ ವಿಮರ್ಶೆಯ ಮಾರ್ಮಿಕತೆಯೂ ತುಂಬ ಸಹಾಯವಾಗಿವೆ. ಈವರೆಗಿನ ನನ್ನ ಬರೆವಣಿಗೆಯ ಬಹುಭಾಗ ಈ ಸ್ಥಳದಲ್ಲಿ ಆಗಿದೆ. ಕಳೆದ ಹದಿನಾಲ್ಕು ವರುಷಗಳಲ್ಲಿ ಪ್ರಪಂಚದಲ್ಲಿ ಅದ್ಭುತ ಘಟನೆಗಳಾಗಿವೆ. ಅದರಂತೆ ನನ್ನ ಸಣ್ಣ ಪ್ರಪಂಚದಲ್ಲಿಯೂ ಮುನ್ನೆಷ್ಟೂ ಕಲ್ಪಿಸಲಾಗದ ಸುಖದುಃಖದ ಘಟನೆಗಳು ನಡೆದುವು, ನನ್ನ ಶ್ರದ್ಧೆಯನ್ನೂ ದರ್ಶನವನ್ನೂ ಕೆಣಕಿದುವು. ಜೀವನದ ತಳಬುಡವನ್ನೇ ಅಲುಗಿಸುವಂಥ ಘೋರವಾದ ದುಃಖಪರಂಪರೆ ನನ್ನ ಮುತ್ತಿಬಂದು ನಿಂತಿತು. ಆಗ ಪಡೆದ ನೋವು ನನ್ನ ವ್ಯಕ್ತಿತ್ವದ ನಾಶಕ್ಕೆ ಕಾರಣವಾಗುವುದೆಂಬ ಭಯ ಹುಟ್ಟಿತು. ದೈವಕೃಪೆಯಿಂದ ಸಾಧನೆಯ ಬಲದಿಂದ ಆ ಭಯವೀಗ ಇಲ್ಲ. ಯಾತನೆ, ಸಮಸ್ಯೆ ಇನ್ನೂ ದಾರಿ ಕಟ್ಟಿದ್ದರೂ ಕಲ್ಯಾಣಪಥದಲ್ಲಿ ಜೀವನ ಮುಂದರಿದಿದೆ ಎಂದು ನಾನು ನಂಬಿದ್ದೇನೆ. ನನ್ನ ಕೃತಿಗಳು ನನ್ನ ಅನುಭವದ ಹಾಗೂ ಸಾಮರಸ್ಯದ ಎಲ್ಲ ಮುಖಗಳನ್ನು ಎತ್ತಿ ತೋರಿಸುತ್ತವೆ. ವಿಶೇಷವಾಗಿ ನನ್ನ ಕಾವ್ಯವು ಅದಕ್ಕೆ ಕನ್ನಡಿಯಾಗಿದೆ.

ಈ ಬರಹದ ಆರಂಭಕ್ಕೆ ನಾನೀಗ ಒಂದು ನಿಶ್ಚಿತವಾದ ನೆಲೆಗೆ ಬಂದು ನಿಂತಿದ್ದೇನೆ ಎಂದು ಹೇಳಿದೆ. ಅದೇನು ಎಂಬುದನ್ನು ಈಗ ತಿಳಿಸುವುದು ಅವಶ್ಯ. ನನ್ನ ಸ್ವಂತದ ನಿರೀಕ್ಷೆಯಿಂದಲೂ ಗೆಳೆಯರ ವಿಮರ್ಶೆಯಿಂದಲೂ ನನ್ನ ಶಕ್ತಿ-ಅಶಕ್ತಿಗಳನ್ನು ನಾನು ತಿಳಿದಿದ್ದೇನೆ. ಈ ಆಯುಷ್ಯದಲ್ಲಿ ನಾ ಪಡೆಯಬಹುದಾದ ಸಿದ್ಧಿಯಂತೆ ನನ್ನ ಇತಿಮಿತಿಯನ್ನೂ ನಾನು ಅರಿತಿದ್ದೇನೆ. ಜೊತೆಗೆ ಬಾಳಿನ, ಬರಹದ ದಾರಿಯನ್ನೂ ಕೆಲಮಟ್ಟಿಗೆ ಕಂಡಿದ್ದೇನೆ. ನನ್ನದು ಮುಖ್ಯವಾಗಿ ಕವಿಹೃದಯ, ಭಕ್ತಕವಿಯ ಅಂತರಂಗ. ಹೃದಯ ಸಂಪತ್ತಿ, ಸಂಕಲ್ಪಬಲ, ಸೂಕ್ಷ್ಮದೃಷ್ಟಿ ಇವು ನನಗೆ ಹುಟ್ಟಿನಿಂದ ದೊರೆತ ಸೊತ್ತು. ಉಳಿದುವು ಪರಿಶ್ರಮದಿಂದ, ಸಾಧನೆಯಿಂದ ಲಭಿಸುವಷ್ಟು ಲಭಿಸಿವೆ. ರಸಿಕನಾಗಬೇಕು ಎಂಬುದೇ ಈ ಜೀವನದ ಹಂಬಲ. ಜೀವನ, ಸಾಹಿತ್ಯ ಎರಡಕ್ಕೂ ಈ ರಸಿಕತೆ ಕೈಚಾಚಬೇಕು. ಎಲ್ಲಕ್ಕಿಂತ ಹೆಚ್ಚಾಗಿ, ಜೀವನ ರಸಿಕನಾಗಿ ಎಲ್ಲ ಚೆಲುವನ್ನು ನಲಿವನ್ನು ಒಲವನ್ನು ಅನುಭವಿಸಬೇಕೆಂಬ

ಒತ್ತಾಸೆ ನನ್ನ ಧ್ಯೇಯವನ್ನು ರೂಪಿಸುತ್ತ ಬಂದಿದೆ. ನನ್ನ ವಿಷಯವಾಗಿ ಪೃಥಕ್ಕರಣ ಮಾಡುತ್ತ ನಾನು ಬರೆದ ಒಂದು ಕವನದಲ್ಲಿ 'ಬಾಳ ಬನದ ಚಿಟ್ಟೆಯಾದ ರಸಿಕನಹುದು ನಾನು ಹರುಷ ಭೋಗ ನಿರ್ಭರ। ಚೆಲುವ ಕಂಡು ಕುಣಿದು ತಣಿದು ಮೊದಲು ತೊದಲಿ ಮುಂದೆ ಉಲಿದೆ ಹಾಡು ಸವಿಸರ' ಎಂದು ಹೇಳಿದ್ದು ಸರಿಯಾಗಿದೆ. ಅದರ ಮುಂದಿನ ಪದ್ಯದಲ್ಲಿ 'ಬಾಳಿನಲ್ಲಿ ರಸವ ಕಂಡೆ ಅದನು ಸವಿಯೆ ಬಲವು ಸಾಲದೆಂದು ಕಂಡೆ। ಅಂತೆ ಮೈಯ ಮನದ ಬಲಕೆ ಹಂಬಲಿಸುತ ಸಾಧನೆಯಲಿ ಮುಂದುಗಂಡೆನು' ಎಂದು ಹೇಳಿದಂತೆ ನನ್ನ ರಸಿಕತೆ ತನ್ನ ಪೂರ್ಣತೆಗಾಗಿ ಒಂದು ಸಾಧನೆ, ಒಂದು ವ್ರತವಾಯಿತು. ಅದರ ಫಲವಾಗಿ ನನಗೆ ಹಲವಾರು ರಸನಿಮಿಷಗಳು ದೊರಿತವು. ಅವನ್ನು ಅನುಭವಿಸಿ ಕಾರ್ಯನಿರ್ವಾಣದಲ್ಲಿ ತೊಡಗಿದಾಗ ಅಮೃತವನ್ನು ಕುಡಿದು ಆನಂದಮತ್ತನಾದ ದೇವತೆಯಂತೆ ಈ ಜೀವ ನಲಿಯಿತು. 'ಬಾಸಿಗ'ದ ಮುನ್ನುಡಿಯಲ್ಲಿ ಬರೆದ ಮೇರೆಗೆ 'ಪ್ರತ್ಯಕ್ಷವಾದ ಕವನಗಳಿಗಿಂತ ಆ ರಸನಿಮಿಷಗಳನ್ನು ನಾನು ನನ್ನ ಆಯುಷ್ಯದ ಅಕ್ಷಯನಿಧಿ-ಯೆಂದು ಭಾವಿಸಿದ್ದೇನೆ.' ಈ ನಿಮಿಷಗಳಲ್ಲಿ ಸುಖವು ಹೆಚ್ಚಿನ ಸುಖ-ವಾಗುತ್ತದೆ, ದುಃಖವೂ ಸುಖದ ರೂಪತಾಳುತ್ತದೆ. ಇದೇ ರಸದ ಮಾಹಾತ್ಮ್ಯ-ವಲ್ಲವೇ ? ಈ ರಸಾನುಭವವು ಬರಿ ನಿಮಿಷಗಳ ಉಕ್ಕೇರು ಆಗದೆ ಪ್ರತಿನಿತ್ಯದ ಸಂತತ ಧಾರೆಯಾಗಬೇಕೆಂಬ ನನ್ನ ಕನವರಿಕೆ ಫಲಿಸಿಲ್ಲ. ಈ ದಾರಿಯಲ್ಲಿ ಮುಂದಡಿಯಿಟ್ಟಿದ್ದೇನೆ ಎನ್ನಲು ಅಡ್ಡಿಯಿಲ್ಲ. ಹೆಚ್ಚಿನ ನೈರ್ಮಲ್ಯ, ಸತ್ವಶುದ್ಧಿ, ರಸೋಪಾಸನೆ ಇವುಗಳಿಂದ ಇನ್ನೂ ಮುಂದೆ ಸಾಗಬಹುದು. ನನಗೆ ಸಾಹಿತ್ಯ ನಿರ್ಮಾಣಕ್ಕಿಂತ ಜೀವನರಸಿಕತೆ ಹೆಚ್ಚು ಬೆಲೆಯುಳ್ಳದ್ದು. ಜೀವನ-ದಲ್ಲಿ ಕಂಡದ್ದು ಕಂಡಷ್ಟು ಸಾಹಿತ್ಯದಲ್ಲಿ ಮೂಡಬೇಕು. ಕಾಣದ್ದನ್ನು ಇಲ್ಲವೆ ಕಾಣಬೇಕೆಂಬುದನ್ನು ಕಂಡಹಾಗೆ ಬಣ್ಣಿಸುವ ಕಾವ್ಯ ನನಗೆ ಬೇಡ. ಹೊಸ ಕವಿ ಅಥವಾ ನಿಜವಾದ ಕವಿಯಲ್ಲಿ ಈ ದೃಷ್ಟಿ ಇದ್ದೇ ಇರುತ್ತದೆ ಆದರೆ ಕೆಲವು ಸಲ ಕಲ್ಪನೆಯ ಹಾಗೂ ನುಡಿಯ ಬಲ್ಮೆಯಿಂದ ಕಾವ್ಯದ ಎತ್ತರಕ್ಕೆ ಹಾರೈಸಿ ನಮಗೆ ಮೀರಿದ ಅನುಭವದ ಎತ್ತರವನ್ನು ನಾವು ರೂಪಿಸಲು ಹೋಗಬಹುದು. ಇದಾಗದಿರಲಿ ಎಂದು ನಾನು ನನ್ನ ಮಟ್ಟಿಗೆ ಬೇಡು-ತ್ತಿದ್ದೇನೆ. 'ಆತ್ಮಸೂರ್ಯ ಬದುಕು ಮೋಡದ ಹನಿಯ ಸೇರಿ ಕಾಂಬ ಮಳೆಯ ಬಿಲ್ಲ ಸೌಸವ। ಹೊಂದಿಕೆಯಲಿ ಅಂದವಡೆಯೆ ಅದರ ಮಿಶ್ರವೆಳಕು

ಬಾಳಗುರುತು ಗೌರವ' ಎಂಬ ಪದ್ಯದಲ್ಲಿ ನಾ ಒರೆದಂತೆ ಆತ್ಮಸೂರ್ಯನು ಸಾವಿರಕಿರಣಗಳಿಂದ ತೇಜೋಮಯನಾಗಿ ಬದುಕಿನ ಮೋಡದಲ್ಲಿಯ ಹನಿಯನ್ನು ಸೇರಿದಾಗ ಉತ್ತಮ ಕಾವ್ಯದ ಮಳೆಬಿಲ್ಲು ಮೂಡುತ್ತದೆ. ನಮ್ಮ ಆತ್ಮ ಬೆಳೆದು ನಮ್ಮ ಬದುಕು, ಲೋಕದ ಬದುಕು ಎರಡರಲ್ಲಿಯೂ ಒಂದಾಗಿ ಪಡೆದ ರಸಾನುಭವವೇ ಕಾವ್ಯವಾಗುತ್ತದೆ. ಈ ಆದರ್ಶವನ್ನು ಕುರಿತು ಹೊರಟ ನಾನು ಈಗ ನಿಂತ ನೆಲೆಯಾವುದೆಂದರೆ ದೃಷ್ಟಿಯಿದೆ, ಸ್ಥಿರತೆಯಿಲ್ಲ, ಅನುಭವವಿದೆ, ಸಾತತ್ಯವಿಲ್ಲ. ನನ್ನ ರಸಿಕದರ್ಶನದ ಪೂರ್ಣತೆಗೆ ಭಕ್ತದರ್ಶನವು ನೆರವಾಗಿದೆ. ಕಳೆದ ಐದಾರು ವರ್ಷಗಳಲ್ಲಿ ಅದು ಬಲಗೊಂಡು ಕೆಲವು ಕವನಗಳಲ್ಲಿ ವ್ಯಕ್ತವಾಗಿದೆ 'ಅಪಾರ ಕರುಣೆ' ಎಂಬುದು ಅವುಗಳಲ್ಲಿ ಒಂದು. ನನ್ನ ಹಾಗೂ ಲೋಕದ ದಾರುಣ ದುಃಖದಿಂದ ನಾನು ಮನುಷ್ಯಸಹಜವಾಗಿ ಕೊರಗುತ್ತೇನೆ, ಕನಲುತ್ತೇನೆ, ಕಂಗೆಡುತ್ತೇನೆ. ಆದರೆ ಲೋಕನಾಯಕನಾದ ದೇವನು ತಾಯಿಯಂತೆ ಪ್ರೇಮಮಯ ಅಪಾರ ಕರುಣೆ ಎಂಬ ದರ್ಶನವು ನನ್ನ ಜೀವದಾಳದಿಂದ ಚಿಮ್ಮಿಬಂದು ನನಗೆ ಹೆಚ್ಚಿನ ಶಾಂತಿಯನ್ನೂ ತೃಪ್ತಿಯನ್ನೂ ಉಂಟುಮಾಡಿದೆ. ಈ ದರ್ಶನವೂ ನನ್ನಲ್ಲಿ ಸ್ಥಿರಗೊಳ್ಳಬೇಕು, ನಿತ್ಯದುಸಿರಾಗಬೇಕು ಎಂಬುದರ ಅರಿವು ನನಗಿದೆ.

ಕವನ, ಕಥೆ, ನಾಟಕ, ಕಾದಂಬರಿ ಮುಂತಾದ ಹಲವು ರೂಪಗಳಲ್ಲಿ ನನ್ನ ಶಕ್ತಿ ತೋರಿದೆ. ಅವುಗಳಲ್ಲಿಯ ಗುಣದೋಷಗಳನ್ನು ನಾನು ಬಲ್ಲೆ. ಅವುಗಳಲ್ಲಿ ಕೆಲವು ಹಿರಿಮೆಯ ಎತ್ತರಕ್ಕೆ ಏಳ್ಪವೆತ್ತಿರಬಹುದೆಂದು ನಾನು ನಂಬಿದ್ದೇನೆ. ಆದರೆ ಈಗಿದ್ದ ನೆಲೆಯಲ್ಲಿ ನನ್ನ ಬರೆವಣಿಗೆ ಬಯಸಬಹುದಾದ ಪರಿಪಾಕವನ್ನೂ ಹಿರಿಮೆಯನ್ನೂ ಒಟ್ಟಿನಲ್ಲಿ ಪಡೆದಿಲ್ಲವೆಂದು ತಿಳಿದರೆ ತಪ್ಪಿಲ್ಲ. ಅನುಭವದ ಆಳ-ಅಗಲಗಳನ್ನು ಈ ವ್ಯಕ್ತಿತ್ವವಿನ್ನೂ ಪಡೆಯಬೇಕಾಗಿದೆ, ತನ್ನ ಕಾಣ್ಕೆಯ ದಾರಿಯಲ್ಲಿ ನಡೆಯಬೇಕಾಗಿದೆ. ಬಾಳಿನ ಹಿರಿಮೆಗೆ ನಾನು ಹಾತೊರೆಯುತ್ತೇನೆ. ಅದರ ಹಿಂದೆ ನೆಳಲಂತೆ, ಅದರೊಡನೆ ಅರ್ಧನಾರಿ-ಯಂತೆ ಸಾಹಿತ್ಯದ ಹಿರಿಮೆಯೂ ಬಂದೀತು. ಬರದಿದ್ದರೂ ತಪ್ಪೇನು ?

ರಂ. ಶ್ರೀ. ಮುಗಳಿ



## ಸಿ. ಕೆ ವೆಂಕಟರಾಮಯ್ಯ ++ ++ ++

ತನ್ನ ವಿಚಾರವನ್ನು ತಾನೇ ವರ್ಣಿಸಿ ಬರೆದುಕೊಳ್ಳುವುದು ಅಷ್ಟೇನೂ ಹಿತವಾದ ಕೆಲಸವಲ್ಲ. ಆದಾಗ್ಯೂ ಶ್ರೀಮಾನ್ ಬುರ್ಲಿ ಬಿಂದುಮಾಧವರು ತಮ್ಮ ಸ್ನೇಹ ಮಮತೆಗಳ ಪ್ರಭಾವದಿಂದ ನನ್ನ ಮನಸ್ಸನ್ನು ಸೆಳೆದುಕೊಂಡು, ಈ ಕೆಲಸಕ್ಕೆ ನನ್ನನ್ನು ನಿಯೋಜಿಸಿದ್ದಾರೆ. ನನ್ನ ಮನಸ್ಸು ಮಾತ್ರ ಸಂಕೋಚ ದಿಂದ ತಲ್ಲಣಗೊಳ್ಳುತ್ತಿದೆ. ನನ್ನ ಬಾಲ್ಯದಲ್ಲಿ ಗುರುಗಳೊಬ್ಬರು ರಘುವಂಶ ಕಾವ್ಯವನ್ನು ಪಾಠ ಹೇಳುತ್ತಿದ್ದರು. ಒಂದು ದಿನ ಪಾಠ ನಡೆಯುತ್ತಿದ್ದಾಗ (ರಘುಚಕ್ರವರ್ತಿಯು ವಿಶ್ವಜಿತ್ ಎಂಬ ಯಜ್ಞಮಾಡಿ ಪ್ರಜೆಗಳ ಹಿತಕ್ಕಾಗಿ ತನ್ನ ಭಂಡಾರದಲ್ಲಿದ್ದುದನ್ನೆಲ್ಲ ಕೊಟ್ಟು ಬರಿಗೈಯಲ್ಲಿರುವಲ್ಲಿ ಗುರುದಕ್ಷಿಣಾರ್ಥಿ ಯಾದ ಕೌತ್ಸನು ಅವನ ಬಳಿಗೆ ಬಂದ ಸನ್ನಿವೇಶವನ್ನು ವಿವರಿಸುವ ಶ್ಲೋಕಗಳನ್ನು ಹೇಳಿ) ರಸಾನುಭವದಲ್ಲಿ ಮೈಮರೆತು ಆ ಗ್ರಂಥವನು ತಲೆಯ ಮೇಲಿಟ್ಟುಕೊಂಡು, "ಏನು ಕವಿತೆಯಪ್ಪಾ, ಈ ಕಾಳಿದಾಸನದು ! ಅವನು ಕವಿಕುಲ ಗುರು. ಹಾಗಿದ್ದೂ ತಾನು ಮಂದಬುದ್ಧಿಯವನೆಂದೂ, ಕವಿಯೆಂಬ ಖ್ಯಾತಿಯನ್ನು ಪಡೆಯಲು ಆಶಿಪಡುತ್ತಿದ್ದ ತಾನು ಅಪಹಾಸ್ಯ ಕ್ಕೀಡಾಗತಕ್ಕವನೆಂದೂ ಹೇಳಿಬಿಟ್ಟಿದ್ದಾನೆ. ಹೀಗಿರುವಾಗ ಇತರರು ಕವಿ ಗಳೆಂದು ಅಥವಾ ಸಾಹಿತಿಗಳೆಂದು ಹೇಳಿಕೊಳ್ಳುವುದಕ್ಕೆ ಅಧಿಕಾರ ಸಿದ್ಧಿ ಯಾದರೂ ಉಂಟೇನಪ್ಪಾ ! ನಮ್ಮದೆಲ್ಲಾ ಬುಡುಬುಡಿಕೆಯ ಸಡಗರ ! " ಎಂದು ಹೇಳಿದ ಮಾತುಗಳು ನೆನಪಿಗೆ ಬಂದು ನನ್ನ ಮನಸ್ಸಿನ ತಲ್ಲಣವನ್ನೂ ಸಂಕೋಚವನ್ನೂ ಮತ್ತಷ್ಟು ಹೆಚ್ಚಿಸುತ್ತಿವೆ. ಗುರುಗಳು ಆ ದಿನ ಆಡಿದ ಮಾತುಗಳು ನನಗೂ ನನ್ನ ಜೊತೆಯವರಿಗೂ ಪೂರ್ತಿಯಾಗಿ ಅರ್ಥವಾಗಲಿಲ್ಲ.

ಹಿಂದಿನ ದಿನ ಅವರದೊಂದು ಭಾಷಣ ನಡೆದಾಗ್ಗೆ ಅವರನ್ನು ಉತ್ತಮ ಸಾಹಿತಿಗಳೆಂದು ಮುಂತಾಗಿ ಹಲವರು ಕೊಂಡಾಡಿದ್ದನ್ನೂ, ಆಗ ಒಂದೆರಡು ಕ್ಷಣಕಾಲ ತಮ್ಮ ಮನಸ್ಸು ಉಬ್ಬಿಹೋಗಿದ್ದುದಕ್ಕೆ ಮಾರನೆಯ ದಿನದ "ಕಣ್ಣೀರಿನ ಪ್ರಾಯಶ್ಚಿತ್ತ"ವಾದುದನ್ನೂ ಅವರು ಆ ಬಳಿಕ ನಮಗೆ ತಿಳಿಯುವಂತೆ ತಕ್ಕ ಭಾಷೆಯಲ್ಲಿ ವಿವರಿಸಿ ಹೇಳಿದರು. "ನಮ್ಮದೆಲ್ಲಾ ಬುಡುಬುಡಿಕೆಯ ಸಡಗರ" ಎಂಬ ಮಾತುಗಳು ಕಿವಿಯಲ್ಲಿ ಮೊಳಗುತ್ತಿರುವ್ರ-ದರಿಂದ, ಸಾಹಿತ್ಯ ಕ್ಷೇತ್ರದಲ್ಲಿ ನನ್ನಿಂದ ನಡೆದಿರುವ ಅಲ್ಪ ಪ್ರಯತ್ನಗಳ ವಿಚಾರದಲ್ಲಿ ಬುರ್ಲಿಯವರ ಪ್ರಶ್ನಾವಳಿಗೆ ಉತ್ತರವಾಗಿ— ನಮ್ರನಾಗಿ ಕೆಲವು ಸಂಗತಿಗಳನ್ನು ಬಿನ್ನೈಸುತ್ತೇನೆ.

ನಾನು 'ಸಾಹಿತ್ಯ ಕ್ಷೇತ್ರದಲ್ಲಿ ಬಂದುದು ಹೇಗೆ?' ಮತ್ತು ನನಗೆ 'ಪ್ರಚೋದನ ಶಕ್ತಿ ಯಾವುದು ?'—. ನಾನು ಹೈಸ್ಕೂಲು ಮೂರನೆಯ ತರಗತಿಯಲ್ಲಿ ಓದುತ್ತಿದ್ದಾಗ ನನ್ನ ವಿದ್ಯಾಗುರುಗಳಾದ ಪಂಡಿತ ಶ್ರೀಮಾನ್ ಕೆ. ಹನುಮಂತರಾಯರು ಕನ್ನಡದಲ್ಲಿ ನಾನು ಬರೆಯುತ್ತಿದ್ದ ಪ್ರಬಂಧಗಳನ್ನೂ, ಚರ್ಚಾಕೂಟಗಳಲ್ಲಿ ಒಂದೆರಡು ಸಾರಿ ನಾನು ಮಾಡಿದ್ದ ಭಾಷಣಗಳನ್ನೂ ಶ್ಲಾಘಿಸಿ ನಾನು ಕನ್ನಡದಲ್ಲಿ ಗ್ರಂಥಗಳನ್ನು ಬರೆಯಬೇಕೆಂದು ಪ್ರೀತಿ-ವಾತ್ಸಲ್ಯಗಳಿಂದ ತಿಳಿಸಿದರು. ಅವರು ನನ್ನನ್ನು ಹಾಸ್ಯಮಾಡಲು ಹಾಗೆ ಹೇಳಿದರೆಂದು ಖಿನ್ನನಾದೆ. ಆಗ ಅವರು ಆದರದಿಂದ ಬೆನ್ನುತಟ್ಟಿ ಆಡಿದ ಅವರ ಪ್ರೋತ್ಸಾಹದ ಮಾತುಗಳು ನನ್ನ ಹೃದಯದಲ್ಲಿ ಅಚ್ಚಳಿಯದೆ ನೆಲಸಿವೆ. ಆಗ ನಾನು ಕನ್ನಡ ಪಠ್ಯಪುಸ್ತಕಗಳ ಜೊತೆಗೆ ರಘುವಂಶ ಮುಂತಾದ ಗ್ರಂಥಗಳನ್ನು ವ್ಯಾಸಂಗ ಮಾಡಿದ್ದೆ. ಶ್ರೀಮಾನ್ ಬಿ. ವೆಂಕಟಾಚಾರ್ಯರ ಮತ್ತು ಶ್ರೀಮಾನ್ ಗಳಗನಾಥರ ಅನೇಕ ಕಾದಂಬರಿಗಳನ್ನೂ ಇತರ ಅನೇಕ ಕನ್ನಡ ಗದ್ಯಪದ್ಯ ಕಾವ್ಯಗಳನ್ನೂ ಓದಿದ್ದೆ. ನನ್ನಲ್ಲಿ ಪುತ್ರವಾತ್ಸಲ್ಯವನ್ನಿಟ್ಟಿದ್ದ ಶ್ರೀಮಾನ್ ಸಂಜೀವಯ್ಯನವರೆಂಬವರು ಚನ್ನಪಟ್ಟಣಕ್ಕೆ ಎರಡು ಮೈಲಿಗಳ ದೂರದಲ್ಲಿರುವ ಕಳ್ಳಿಹೊಸೂರೆಂಬ ಗ್ರಾಮದಲ್ಲಿ ರಾತ್ರಿಯ ವೇಳೆ ಪುರಾಣ ಹೇಳುತ್ತಿದ್ದರು. ಕುಮಾರವ್ಯಾಸಭಾರತ, ಲಕ್ಷ್ಮೀಶನ ಜೈಮಿನಿಭಾರತ ಮತ್ತು ಷಡಕ್ಷರಿಯ ರಾಜಶೇಖರ ವಿಳಾಸ—ಇವುಗಳನ್ನು ಓದಿ ಅರ್ಥ ಹೇಳುತ್ತಿದ್ದರು. ಅವರೊಡನೆ ಆಗಾಗ ಅಲ್ಲಿಗೆ ಹೋಗಿ ಪದ್ಯಗಳನ್ನೋದಿ ಅವರು ಅರ್ಥಹೇಳುತ್ತಿದ್ದುದನ್ನು ಕೇಳಿ ಕೇಳಿ ತಲೆದೂಗಿದ್ದೆ. ಹೈಸ್ಕೂಲು ಒಂದೆ

ನೆಯ ಮತ್ತು ಎರಡನೆಯ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಪ್ರತಿ ದಿನವೂ ಸಾಯಂಕಾಲ ಒಂದೆರಡು ಘಂಟೆಗಳ ಹೊತ್ತು (ಚನ್ನಪಟ್ಟಣದಲ್ಲಿ) ನಮ್ಮ ಮನೆಯವರನ್ನೂ ಮತ್ತು ನೆರೆಹೊರೆಯ ಮನೆಗಳವರನ್ನೂ ಸೇರಿಸಿ ಪುರಾಣ ಹೇಳಿದ್ದೆ. (ಚಾಮರಾಜೋಕ್ತಿ ವಿಲಾಸ ಗ್ರಂಥಮಾಲೆಯ ರಾಮಾಯಣವನ್ನೂ ಕೃಷ್ಣರಾಜ ವಾಣೀವಿಲಾಸ ಗ್ರಂಥಮಾಲೆಯ ಭಾರತವನ್ನೂ ಮತ್ತು ಕುಮಾರವ್ಯಾಸ ಭಾರತ ಮುಂತಾದ ಗ್ರಂಥಗಳನ್ನೂ ಓದಿ ಹೇಳಿದ್ದೆ.) ಆ ಸನ್ನಿವೇಶದಲ್ಲಿ ಶ್ರೀಮಾನ್ ಹನುಮಂತರಾಯರು ನನ್ನನ್ನು ಹುರಿದುಂಬಿಸಿ ಕನ್ನಡದಲ್ಲಿ ಗ್ರಂಥಗಳನ್ನು ಬರೆಯಬೇಕೆಂದು ಹೇಳಿದರು. ಒಂದೆರಡು ವಿಷಯಗಳನ್ನೂ ಸೂಚಿಸಿ ಅವುಗಳನ್ನು ಕುರಿತು ಬರೆಯಬಹುದೆಂದರು. ಆದರೆ ಗ್ರಂಥರಚನೆಗೆ ಕೈಹಾಕಿದರೆ, ತರಗತಿಯಲ್ಲಿ ಪ್ರಥಮ ಸ್ಥಾನವನ್ನೂ ಕಳೆದುಕೊಂಡು ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ "ಡುಂಕಿ" ಹೊಡೆಯಬೇಕಾದೀತೆಂಬ ಭಯವನ್ನು ಸೂಚಿಸಿದೆ. ಅವರು ನಕ್ಕು "ಹೋಗಲಿ. ಪರೀಕ್ಷೆ ಮುಗಿದ ಮೇಲೆ ಬರಿ" ಎಂದರು. "ಬೀಸುವ ದೊಣ್ಣೆ ತಪ್ಪಿದರೆ ಶತಾಯುಸ್ಸು" ಎಂದು ಬಿಟ್ಟೆ. ಅದಕ್ಕೂ ಅವರೇನೂ ನಕ್ಕರು. ಆದರೂ ಆ ನಗುವಿನ ಮರೆಯಲ್ಲಿ ಕೊಂಚ ನೋವೂ ಇದ್ದು "ನನ್ನ ಮಾತು ಕೇಳು. ನಾನು ಹೇಳುವುದು ನಿನ್ನ ಒಳ್ಳೆಯದಕ್ಕೇ" ಎಂದರು. ಪರೀಕ್ಷೆಯಾದ ಮೇಲೆ ಅವರ ಆಜ್ಞೆಯನ್ನು ಪಾಲಿಸುವುದಾಗಿ ಹೇಳಿಕೊಂಡೆ. ಗುರುಗಳು ಹಿಗ್ಗಿ ಹರಸಿದರು. ಗ್ರಂಥರಚನೆ ಮಾಡಬೇಕೆಂಬ ಅಭಿಲಾಷೆ ಹುಟ್ಟಿದುದು ಅದೇ ಮೊದಲು. ಎಸ್. ಎಸ್. ಎಲ್. ಸಿ. ಪರೀಕ್ಷೆ ಮುಗಿದ ಮೇಲೂ ರಜದಲ್ಲಿ ಪುಸ್ತಕಗಳನ್ನು ಬರೆಯುವ ಪ್ರಯತ್ನವನ್ನೇ ಮಾಡಲಿಲ್ಲ. ರಜವು ಮುಗಿಯುವ ವೇಳೆಗೆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ವಾರ್ತೆ ಬಂದು ಕಾಲೇಜು ಸೇರಬೇಕೆಂಬ ಸಡಗರದಲ್ಲಿ ಆ ಕೆಲಸಕ್ಕೆ ತೊಡಗಲಿಲ್ಲ. ಗುರುಗಳು ಮತ್ತೆ ಅದನ್ನು ನನ್ನ ನೆನಪಿಗೆ ತಂದು "ಹೇಳುವಷ್ಟು ಹೇಳಿದ್ದಾಯಿತು. ಇದರ ಮೇಲೆ ನಿನ್ನ ಇಷ್ಟ. ವಯಸ್ಸಾದ ಹುಡುಗರಿಗೆ—ಅದೂ ಕಾಲೇಜಿಗೆ ಹೋಗುವ ಹುಡುಗರಿಗೆ—ಹೇಳುವುದು ಕಷ್ಟ" ಎಂದರು. ನನ್ನನ್ನು ಮನ್ನಿಸಬೇಕೆಂದೂ ಅವರಲ್ಲಿ ನನ್ನ ಭಕ್ತಿಯು ಸ್ಥಿರವಾಗಿದ್ದಿತೆಂದೂ ಹೇಳಿದೆ. ಮತ್ತೊಬ್ಬರು ಗುರುಗಳ "ನಮ್ಮದೆಲ್ಲಾ ಬುಡುಬುಡಿಕೆಯ ಸಡಗರ" ಎಂಬ ಮಾತುಗಳನ್ನೂ ಆ ಮಾತುಗಳಿಂದ ನನ್ನ ಮನಸ್ಸಿನಲ್ಲುಂಟಾ

ಗಿದ್ದ ಭಾವನೆಯನ್ನೂ ಬಿನ್ನೈಸಿದೆ. ಶ್ರೀಮಾನ್ ಹನುಮಂತರಾಯರು, "ಇದನ್ನು ಮೊದಲೇ ಹೇಳಬಾರದಿತ್ತೇ ? ಒಬ್ಬರೂ ಪುಸ್ತಕವನ್ನು ಬರೆಯ ಬಾರದೆಂಬುದು ಅವರ ಅಭಿಪ್ರಾಯವಲ್ಲ. ಸುಮ್ಮನೆ ನನ್ನ ಮಾತು ಕೇಳಿಬಿಡು. ಅವರ ಮಾತುಗಳ ಆಶಯವನ್ನು ಪೂರ್ತಿಯಾಗಿ ನೀನು ಗ್ರಹಿಸಿಲ್ಲ." ಎಂದರು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ನಾನು ಜ್ಯೂನಿಯರ್ ಇಂಟರ್ಮೀ-ಡಿಯೆಟ್ ತರಗತಿಗೆ ಸೇರಿ ಕೆಲವು ತಿಂಗಳುಗಳಾದ ಮೇಲೆ ಗುರುಗಳಾದ ಶ್ರೀಮಾನ್ ಗರಣಿ ಕೃಷ್ಣಾಚಾರ್ಯರು ಒಂದು ದಿನ ತಮ್ಮ ಕೋಣೆಗೆ ನನ್ನನ್ನು ಬರಮಾಡಿಕೊಂಡು "ನೀನು ಇಲ್ಲಿಗೇಕೆ ಬಂದೆಯಯ್ಯಾ? " ಎಂದರು. ನಾನು ಅಪ್ರತಿಭನಾಗಿ "ತಾವು ಬರಹೇಳಲಿಲ್ಲವೇನು ಹಾಗಾದರೆ? ಜವಾನ ತಿಳಿಸಿದ. ನಾನು ಬಂದೆ" ಎಂದೆ. ಅವರು ನಕ್ಕು "ನಾನೇ ಬರಹೇಳಿದೆ. ನಾನು ಕೇಳಿದ್ದು ಇಲ್ಲಿಗೇಕೆ ಬಂದೆ– ಅಂತಲ್ಲ. ಈ ಕಾಲೇಜಿಗೇಕೆ ಬಂದೆ— ಅಂತ. ನೀನು ಬರೆದಿರುವ ವಿಮರ್ಶೆಯ ಪ್ರಬಂಧವನ್ನೋದಿ ಬಹಳ ಸಂತೋಷ ವಾಯಿತು ನೀನು ಇಲ್ಲಿಗೆ ಬರದೆ ಪಂಡಿತ ಪರೀಕ್ಷೆಗೆ ಓದಿದ್ದರೆ ಚೆನ್ನಾಗಿ ತ್ತಯ್ಯ. ಹೋಗಲಿ, ಹೇಗೂ ಬಂದುಬಿಟ್ಟೆ. ಆದದ್ದೆಲ್ಲ ಒಳಿತೇ ಆಯಿತು. ವಿಮರ್ಶೆ ಬರೆಯೋದಕ್ಕೆ ನಿನ್ನ ಶೈಲಿ ಈ ವಯಸ್ಸಿಗೇ ಪಳಗಿರೋದು ತುಂಬ ಸಂತೋಷ. ನಮ್ಮ ಕಾವ್ಯಗಳನ್ನು ವಿಮರ್ಶೆಮಾಡಿ ಗ್ರಂಥಗಳನ್ನಾದರೂ ಬರಿ. ನಿನಗೆ ಇಷ್ಟ ಬಂದ ಪುಸ್ತಕಗಳನ್ನಾದರೂ ಬರಿ. ಅಂತೂ ಬರೆದರೆ ಸರಿ. ಕನ್ನಡ ವ್ಯಾಸಂಗವನ್ನು ಪರೀಕ್ಷೆಗಳ ನಂಬರುಗಳಷ್ಟಕ್ಕೇ ಕೊನೆಮುಟ್ಟಿಸ ಬೇಡ. ಅದಿರಲಿ. 'ವೇಣೀಸಂಹಾರನಾಟಕದ ಶೈಲಿ ಗಂಡು ಶೈಲಿ, ಪದಗಳು ಕಿಡಿಗಳನ್ನೇ ಎರಚುವಂತೆ ತೋರುವ ಶೈಲಿ' ಎಂದು ಬರೆದಿದ್ದೀಯೆ. ನಿದರ್ಶನ ಗಳನ್ನು ಹೇಳಿಲ್ಲ. ನಿದರ್ಶನ ಹೇಳಬಲ್ಲೆಯೇನು ? " ಎಂದರು. "ಸಂದ ರ್ಭಕ್ಕೆ ನಿದರ್ಶನಗಳು ಅನುಚಿತವೆಂದುಕೊಂಡೆ. ಬರೆಯಲಿಲ್ಲ" ಎಂದು ಉತ್ತರ ಹೇಳಿದೆ. ಅವರು, "ನಿಜವಾಗಿಯೂ ನಿದರ್ಶನಗಳು ಗೊತ್ತೇನು ? ವೇಣೀಸಂಹಾರ ನಾಟಕವನ್ನು ಓದಿದ್ದೀಯೋ, ಇಲ್ಲಾ ಸಂಸ್ಕೃತ ನಾಟಕ ಗಳಲ್ಲಿ ಕೂಡ ಪರಿಶ್ರಮವೆಂತ ತೋರಿಸಿಕೊಂಡು ನನ್ನ ಕಣ್ಣಿಗೆ ಮಣ್ಣೆರಚೋಕೆ ಬುರುಡೆ ಹೊಡೆದಿದ್ದೀಯೋ ಹೇಗೆ?" ಎಂದು ಕೇಳಿದರು. ನಾನು ನನ್ನ ಬುದ್ಧಿಗೆ ತಿಳಿದ ಕೆಲವು ನಿದರ್ಶನಗಳನ್ನು ತಿಳಿಸಬಲ್ಲೆನೆಂದು ಹೇಳಿ ವೇಣೀ ಸಂಹಾರ ನಾಟಕದ ಮೊದಲನೆಯ ಅಂಕದಲ್ಲಿ ಭೀಮನು ಮಾಡುವ ವೀರಾ

ಲಾಪವನ್ನೂ, ಅಶ್ವತ್ಥಾಮಾಂಕದಲ್ಲಿ ಅಶ್ವತ್ಥಾಮನು ಆಡುವ ಸಿಡಿಲಿನ ನುಡಿಗಳನ್ನೂ ಉದಾಹರಿಸಿದೆ. ಅವರು ಬಹಳ ಸಂತೋಷಪಟ್ಟು "ಲೋ, ನೀನು ನಾಟಕದ ಕಂಪೆನಿಯಲ್ಲಿದ್ದೆಯೇನೊ ? " ಎಂದರು. ನಾನು "ಇಲ್ಲ. ಹೈಸ್ಕೂಲಿನಲ್ಲಿದ್ದಾಗ ಸಂಸ್ಕೃತ ಪಂಡಿತರು ಅಶ್ವತ್ಥಾಮ ಪಾತ್ರಾಭಿನಯ ಮಾಡಿಸಿದ್ದರು. ವೇಣೀಸಂಹಾರ ಮತ್ತು ಶಾಕುಂತಲ ನಾಟಕಗಳೆಂದರೆ ನನಗೆ ಪ್ರಾಣ. ಎಷ್ಟೋ ಸಲ ಓದಿದ್ದೇನೆ" ಎಂದೆ. ಅವರು ಬೆನ್ನು ತಟ್ಟಿ "ಇವೊತ್ತು ಹೇಳಿದ ಹಾಗೆ ಇನ್ನೆಲ್ಲೂ ಹೇಳಬೇಡ. ಯಾರಾದರೂ ನಾಟಕದ ಕಂಪೆನಿಯವರು ಎಳೆದುಕೊಂಡು ಹೋಗಿಬಿಟ್ಟಾರು. ನಿನ್ನ ಓದೆಲ್ಲಾ ಮಣ್ಣು ಪಾಲಾದೀತು. ಈಗ್ಗೆ ಕೆಲವು ದಿನಗಳ ಹಿಂದೆ ಇಬ್ಬರು ವಿದ್ಯಾರ್ಥಿಗಳನ್ನ ಎಳೆದುಕೊಂಡು ಹೋದರು. ಈಗ ವಿಮರ್ಶೆಯ ಗ್ರಂಥಗಳನ್ನು ಬರಿ. ಮುಂದೆ ಇನ್ನೂ ಚೆನ್ನಾಗಿ ನಾಟಕಗಳನ್ನು ವ್ಯಾಸಂಗ ಮಾಡಿ ಕನ್ನಡದಲ್ಲಿ ನಾಟಕ ಬರಿ. ಭೀಮನ ಮತ್ತು ಅಶ್ವತ್ಥಾಮನ ಆವೇಶದ ನುಡಿಗಳನ್ನು ಕೇಳಿ ಬಹಳ ಸಂತೋಷವೇ ಆಯಿತು. ಬ್ರಹ್ಮ ಮೂರು ಜನಕ್ಕೋ ನಾಲ್ಕು ಜನಕ್ಕೋ ಕೊಡಬೇಕೆಂದಿದ್ದ ಗಂಟಲನ್ನು, ನಿನಗೊಬ್ಬನಿಗೇ ಕೊಟ್ಟಿದ್ದಾನಲ್ಲೋ ! " ಎಂದು ಹೇಳಿದರು. ಅವರೂ ಪುಸ್ತಕದ ಮಾತನ್ನೇ ಎತ್ತಬೇಕೆ? ಗ್ರಂಥ ರಚನೆಗೇನೊ ಪ್ರಾರಂಭ ಮಾಡಿದೆ. ಆದರೆ, ಉಪಾಧ್ಯಾಯರಿಬ್ಬರು ಹೇಳಿದ ಮಾರ್ಗವನ್ನೂ ಅನುಸರಿಸಲಿಲ್ಲ. ಮಿಸೆಸ್ ಹೆನ್ರಿವುಡ್ ಎಂಬಾಕೆ ಬರೆದಿರುವ ಮೂರು ನಾಲ್ಕು ಕಾದಂಬರಿಗಳನ್ನೋದಿದ್ದೆ. ಅವಕ್ಕಿಂತ ಉತ್ತಮವಾದ ಕಾದಂಬರಿಗಳನ್ನು ಇನ್ನೂ ಓದಿರಲಿಲ್ಲವಾದ ಕಾರಣ, ಅವೇ ನನ್ನ ಮನಸ್ಸನ್ನು ಸೆಳೆದುವು. ಅವುಗಳ ಆಧಾರದ ಮೇಲೆ ಹರಿಣಾಕ್ಷಿ, ವಿನಯಚಂದ್ರ, ಎಂಬಿವೇ ಮುಂತಾದ ಹೆಸರುಗಳಿಂದ ಕೆಲವು ಕಾದಂಬರಿಗಳನ್ನು ಬರೆದೆ. ನನಗೆ ಆಗ ವಿದ್ಯಾರ್ಥಿವೇತನ ( "ಡಿಸ್ಟ್ರಿಕ್ಟ್ ಸ್ಕಾಲರಷಿಪ್" ) ಬರುತ್ತಿದ್ದ ಕಾರಣ, ನನಗಾಗಿ ಹಣದ ಆವಶ್ಯಕತೆಯೇನೂ ಹೆಚ್ಚಾಗಿರಲಿಲ್ಲ ಆದರೆ ನನ್ನಷ್ಟು ಮಟ್ಟಿಗೆ ಹಣದ ಅನುಕೂಲತೆಯಿಲ್ಲದಿದ್ದರೂ ಸಂಗಡಿಗರಿಬ್ಬರಿಗೆ ಅನುಕೂಲ ಮಾಡಿಕೊಡುವ ಉದ್ದೇಶದಿಂದ ಹಣವನ್ನು ಸಂಪಾದಿಸಲೇ ಬೇಕಾಯಿತು ಮೇಲೆ ಹೇಳಿದ ಪುಸ್ತಕಗಳನ್ನು ಬರೆದೆ. ನಾನು ಆಗ ಬರೆದ ನಾಲ್ಕು ಪುಸ್ತಕಗಳ ಹಕ್ಕನ್ನು— ಒಂದೊಂದಕ್ಕೂ ನಲವತ್ತು ರೂಪಾಯಿಗಳಂತೆ—ಒಟ್ಟು ಗಿಂಡಿಗ್ಲೂಪ್ಪಾಯಿಗಳಿಗೆ ಮಾರಿದೆ. ಪುಸ್ತಕಗಳನ್ನು ಬರೆದು

ನಕಲು ಪ್ರತಿಗಳನ್ನು ಸಿದ್ಧಗೊಳಿಸುವ ಹಾರಾಟ ಮತ್ತು ಪುಸ್ತಕ ವ್ಯಾಪಾರಿಗಳ ಬಳಿಗೆ ತಿರುಗಾಟ—ಇವುಗಳಿಂದ ತರಗತಿಯ ವ್ಯಾಸಂಗ ಹಿಂದೆ ಬಿದ್ದು ಹೋಯಿತು. ಇಂಟರ್ಮೀಡಿಯೆಟ್ ಪರೀಕ್ಷೆಗೆ ಪಠ್ಯಪುಸ್ತಕವಾಗಿದ್ದ ಶ್ರೇಷ್ಠ ತರಗತಿಯ ಇಂಗ್ಲಿಷ್ ಭಾಷೆಯ ಕಾದಂಬರಿಯೊಂದನ್ನು ಕುರಿತು ಪಾಠ ಹೇಳಿದಾಗ್ಗೆ ಸುಪ್ರಸಿದ್ಧರಾಗಿದ್ದ ಇಂಗ್ಲಿಷ್ ಪ್ರೊಫೆಸರ್ ಶ್ರೀಮಾನ್ ಜೆ. ಜಿ. ಟೇಟ್ ಸಾಹೇಬರು ಬೋಧಿಸಿದ ಸಂಗತಿಗಳಿಂದ ನನ್ನ ಅಜ್ಞಾನವು ದೂರ ವಾಯಿತು; ನಾನು ಮೆಚ್ಚಿಕೊಂಡಿದ್ದ ಇಂಗ್ಲಿಷ್ ಕಾದಂಬರಿಗಳು ಕೀಳು ವರ್ಗದವುಗಳೆಂಬುದೂ, ಪಾಶ್ಚಾತ್ಯ ಜನಜೀವನದ ಘಟನೆಗಳನ್ನು ಹರಿದು ಮುರಿದು ನಮ್ಮ ದೇಶದ ಜನಜೀವನದ ಪಡಿಯಚ್ಚಿಗೆ ತುಂಬಿ ಗ್ರಂಥರಚನೆ ಮಾಡಿದುದು ಅವಿವೇಕವೆಂಬುದೂ ಬಹು ಚೆನ್ನಾಗಿ ಮನದಟ್ಟಾದವು. ಒಡನೆಯೇ ಗ್ರಂಥರಚನೆಯನ್ನು ನಿಲ್ಲಿಸಿದೆ. ಗ್ರಂಥರಚನೆಯ ಈ ಕೋಲಾಹಲ ದಲ್ಲಿ ವ್ಯಾಸಂಗ ಹಿಂದೆ ಬಿದ್ದು ಹಿಂದೆ ತೋರಿದ್ದ ಅಮಂಗಳದ ಶಂಕೆ ಫಲಿಸಿತು. ಇಂಟರ್ಮೀಡಿಯೆಟ್ ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಹೋದುದರಿಂದ, ನನ್ನ ಮನೋವ್ಯಥೆಯು ಸಹಿಸಲಶಕ್ಯವಾಯಿತು. ಇನ್ನು ಗ್ರಂಥರಚನೆಗೆ ಕೈಹಾಕಬಾರದೆಂದು ನಿರ್ಧರಿಸಿದೆ.

ಈ ಮಧ್ಯದಲ್ಲಿ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳವರು ಕನ್ನಡದ ಅಧ್ಯಾಪಕರಾಗಿ ಬಂದ ಮೇಲೆ ನನ್ನ ಜೀವನದ ಗತಿಯೇ ಮಾರ್ಪಟ್ಟು ಹೋಯಿತು. ಅವರು ತೋರಿಸುತ್ತಿದ್ದ ಶಿಷ್ಯಪ್ರೇಮ, ಅಥವಾ ಬಹುಮುಖ ವಾದ ಪ್ರತಿಭೆಯಿಂದ ಪಾಠ ಪ್ರವಚನಗಳನ್ನು ನಡೆಸುತ್ತಿದ್ದ ಅವರ ವೈಶಿಷ್ಟ್ಯ ಇಲ್ಲವೆ ಸಾಹಿತ್ಯ ಸೇವೆಗಾಗಿ ಸರ್ವ ಪ್ರಯತ್ನಗಳನ್ನೂ ನೆರವೇರಿಸಬೇಕೆಂದು ಬೋಧಿಸಿ ಬೋಧಿಸಿ, ಶಿಷ್ಯರಲ್ಲಿ ಸಾಹಿತ್ಯ ಪ್ರೇಮವನ್ನು ಪ್ರಚೋದನಗೊಳಿಸುವ ಕಲೆ, ವಿದ್ಯಾರ್ಥಿಗಳಲ್ಲಿ ಉತ್ಸಾಹಶಕ್ತಿಯ ಜೀವಕಳೆಯನ್ನುಕೊಡುತ್ತಿದ್ದ ಅವರ ಶಕ್ತಿ, ಈ ಯಾವ ಕೃತಿಯನ್ನು ಹೆಚ್ಚಾಗಿ ಶ್ಲಾಘಿಸಬೇಕೋ ತಿಳಿಯದು. ಎಷ್ಟು ಬೇಸರವಾಗಿರುವಾಗಲೂ ಅವರ ಬಳಿಗೆ ಹೋಗಿ ಐದು ನಿಮಿಷ ಮಾತನಾಡಿ ಬಿಟ್ಟರೆ ಮನಸ್ಸಿನ ಬೇಸರವೆಲ್ಲ ಮಾಯವಾಗಿ ಹೊಸ ಹುರುಪುಂಟಾಗು-ತ್ತಿದ್ದುದು ಅವರ ಶಿಷ್ಯರ ಅನುಭವ. ಆಳವಾದ ವಿದ್ವತ್ತು, ಗಾಢವಾದ ಶಿಷ್ಯ ಪ್ರೇಮ, ಅಪಾರವಾದ ಉತ್ಸಾಹ, ನೂತನವಾದ ಬೋಧನಾಕ್ರಮ-ಇವು ಅವರ ವಿಶೇಷ ಗುಣಗಳು. ಅವರು ವಿದ್ಯಾಗುರುಗಳೆಂದು ಹೇಳಿಕೊಳ್ಳುವುದೇ ಶಿಷ್ಯ-

ರದೊಂದು ಹೆಮ್ಮೆ. ವಿದ್ಯಾರ್ಥಿಗಳಲ್ಲಿ ಅವರಿಗೆಷ್ಟು ಆದರ! ತೀರ ಅಸಮಾ-ಧಾನವಾಗಬಹುದಾದ ಸನ್ನಿವೇಶಗಳಲ್ಲಿ ಕೂಡ ಅವರು ಶಾಂತರಾಗಿಯೇ ಇದ್ದು ಪ್ರೀತ್ಯಾದರಗಳನ್ನು ತೋರಿಸುತ್ತಿದ್ದರು. ಅದಕ್ಕೊಂದು ನಿದರ್ಶನ-ವನ್ನೂ ಇಲ್ಲಿ ಸೂಚಿಸಬಹುದಾಗಿದೆ. ಗ್ರಂಥರಚನೆಗೆ ಅದರ ದೆಸೆಯಿಂದ ನನಗೆ ಪ್ರಚೋದನವುಂಟಾದುದರಿಂದ ಅದು ಅಪ್ರಕೃತವೂ ಅಲ್ಲ. ಒಂದು ದಿನ ಶ್ರೀಮಾನ್ ಕೃಷ್ಣಶಾಸ್ತ್ರಿಗಳವರು ತರಗತಿಗೆ ಬಂದರು. ಮೇಜಿನ ಮೇಲೆ ಒಂದು ಮಣ್ಣಿನ ಹೂಜಿಯನ್ನಿಟ್ಟು ಅದಕ್ಕೊಂದು ಪರಕೆಯನ್ನು ಸೆಕ್ಕಿದ್ದರು (ಮತ್ತೊಂದು ತರಗತಿಯ ವಿದ್ಯಾರ್ಥಿಗಳು ಅಧ್ಯಾಪಕರೊಬ್ಬರಲ್ಲಿ ಅಸಮಾ-ಧಾನವನ್ನು ಸೂಚಿಸುವುದಕ್ಕಾಗಿ ಅವರು ಆ ರೀತಿ ಮಾಡಿದ್ದರು ) ಅದು ನಮ್ಮ ಕೆಲಸವೆಂದು ಶ್ರೀಮಾನ್ ಶಾಸ್ತ್ರಿಗಳವರು ಭಾವಿಸಿದರು; ಆದರೆ ಸ್ವಲ್ಪವೂ ಅಸಮಾಧಾನಪಡದೆ, "ಇವೊತ್ತಿನ ಪ್ರಬಂಧ ರಚನೆಗೆ ವಿಷಯ ವನ್ನು ನೀವೇ ಒದಗಿಸಿಬಿಟ್ಟಿದ್ದೀರಿ ಹೂಜಿಗೆ ಪರಕೆಯನ್ನೂ ಸೆಕ್ಕಿ ಪ್ರದರ್ಶಿಸಿದ್ದೀರಿ. ಪರಕೆಯ ಮೇಲೆ ಪ್ರಬಂಧವನ್ನು ಬರೆಯಿರಿ." ಎಂದು ನಗುತ್ತಲೇ ಹೇಳಿ ಕುರ್ಚಿಯ ಮೇಲೆ ಕುಳಿತುಬಿಟ್ಟರು ಪರಕೆಯ ಕಡೆಗ ನಮ್ಮಲ್ಲಿ ಕೆಲವರ ಗಮನವು ಹೋದುದು ಆಗಲೇ. ಅನ್ಯಾಯವಾಗಿ ಅವರ ಮನಸ್ಸಿಗೆ ನೋವಾಯಿತೆಂದೂ ಮೊದಲೇ ಅದನ್ನು ನೋಡಿದ್ದರೆ ಎಲ್ಲಿಗಾದರೂ ಸಾಗಿಸಬಹುದಾಗಿದ್ದಿತೆಂದೂ, ಆಗ ನಮ್ಮಲ್ಲಿ ಅನೇಕರು ವ್ಯಥೆಪಟ್ಟೆವು. ಪರಕೆಯ ಹೇಳಿಕೆ—ಎಂಬುದೊಂದು ಪ್ರಬಂಧವನ್ನು ನಾನು ಬರೆದೆ. ಗುರು ಗಳು ಅದನ್ನು ಓದಿ ತಮ್ಮ ಮೆಚ್ಚಿಗೆಯನ್ನು ಸೂಚಿಸಿ ನಾನು ಗ್ರಂಥಗಳನ್ನು ಬರೆಯಬೇಕೆಂದು ಪ್ರಚೋದನಗೊಳಿಸಿ ನನ್ನ ನಿರುತ್ಸಾಹವನ್ನೆಲ್ಲ ಹೋಗಲಾ-ಡಿಸಿದರು. ಇತರ ತರಗತಿಗಳಲ್ಲಿಯೂ ಅದನ್ನು ಓದಿ ತಮ್ಮ ಸಂತೋಷವನ್ನು ಸೂಚಿಸಿದರು. ಅವರೇನೋ ಉದಾರಹೃದಯದಿಂದ ಹಾಗೆ ಮಾಡಿದರು. ಆದರೆ ಕೆಳತರಗತಿಯ ವಿದ್ಯಾರ್ಥಿಯ ಲೇಖನವನ್ನು ಮಾದರಿ ಪ್ರಬಂಧವೆಂದು ಮೇಲಿನ ತರಗತಿಗಳಲ್ಲಿ ಓದಿದುದು ಆ ವಿದ್ಯಾರ್ಥಿಗಳಲ್ಲಿ ಕೆಲವುವಿದ್ಯಾರ್ಥಿಗಳಿಗೆ ಸರಿಬೀಳಲಿಲ್ಲ. ಅವರು ನನ್ನನ್ನು ಕಂಡಾಗಲೆಲ್ಲ ಅಪಹಾಸ್ಯದ ಮಾತುಗಳ-ನ್ನಾಡಿ ಗಹಗಹಿಸಿ ನಗುತ್ತಿದ್ದರು. ಆದರೆ, ಶ್ರೀಮಾನ್ ಕೃಷ್ಣಶಾಸ್ತ್ರಿಯವರು ಸೂಚಿಸಿದ್ದ ಸಂತೋಷಾತಿಶಯಗಳು ವಿದ್ಯಾರ್ಥಿಗಳ ಆ ಬಗೆಯ ಅಪ-ಹಾಸ್ಯವೂ ಮನಸ್ಸಿಗೆ ಹಿತವಾಗಿಯೇ ಇದ್ದು, ನಾನೂ ನಗುವಂತೆ ಮಾಡಿದ್ದವು.

ಶ್ರೀ ಕೃಷ್ಣಶಾಸ್ತ್ರಿಯವರ ಪ್ರೇರಣೆಯಿಂದ ನಾನು ಗ್ರಂಥರಚನೆಗೆ ತೊಡಗ ಬೇಕೆಂದಿದ್ದೆ. ಅಷ್ಟರಲ್ಲಿ, ಮೈಸೂರು ವಿಶ್ವವಿದ್ಯಾನಿಲಯದವರು ೧೯೧೭ರಲ್ಲಿ ಗ್ರಂಥರಚನೆಯ ಸ್ಪರ್ಧೆಯೊಂದನ್ನಿಟ್ಟು, ವಿಷಯಗಳನ್ನು ಸೂಚಿಸಿ ಒಂದೊಂದರ ಮೇಲೂ ಅತ್ಯಂತ ಶ್ರೇಷ್ಠವಾದ ಗ್ರಂಥಕ್ಕೆ ಒಂದೊಂದು ಬಹು ಮಾನ ಕೊಡುವುದಾಗಿ ತಿಳಿಸಿ, ಗ್ರಂಥ ರಚನೆ ಮಾಡಲು ಒಂದು ಅವಧಿಯನ್ನು ಗೊತ್ತುಮಾಡಿದರು. ಆಗ್ಗೆ ನಾನು ಜೂನಿಯರ್ ಬಿ. ಎ. ತರಗತಿಯಲ್ಲಿದ್ದೆ. ನನ್ನ ಮಾವನವರು ಶ್ರೀಮಾನ್ ಬಿ. ಕೃಷ್ಣರಾಯರು ಆ ಪ್ರಕಟನೆಯನ್ನು ಕಳುಹಿಸಿಕೊಟ್ಟು, ನಾನು ಯಾವುದೊಂದು ವಿಷಯದ ಮೇಲಾದರೂ ಗ್ರಂಥ ವನ್ನು ಬರೆದು ಸ್ಪರ್ಧಿಸಬೇಕೆಂದೂ, ಪತ್ರ ಬರೆದು ಪ್ರೇರಿಸಿದರು. ನಾನು ಅವರ ಸೂಚನೆಯನ್ನು ಕೃತಜ್ಞತೆಯಿಂದ ಸ್ವೀಕರಿಸಿದೆ; ನನಗೆ ಮೊದಲಿ ನಿಂದಲೂ ಆಸಕ್ತಿಯಿದ್ದ ಚರಿತ್ರೆಯ ಸಂಬಂಧದ ವಿಷಯವನ್ನು ಆರಿಸಿಕೊಂಡು ದಾಗಿ ತಿಳಿಸಿ ಪತ್ರ ಬರೆದೆ; ಅವರು ಅದಕ್ಕಾಗಿ ಹರ್ಷಿಸಿ ಅಮೂಲ್ಯವಾದ ಅನೇಕ ಸಲಹೆಗಳನ್ನು ಕೊಟ್ಟುದಲ್ಲದೆ ಅನೇಕ ಗ್ರಂಥಗಳನ್ನೂ ಒದಗಿಸಿ ಸಹಾಯ ಮಾಡಿದರು. ಸ್ಪರ್ಧೆಯ ನಿಯಮಗಳ ಮೇರೆಗೆ ಬರೆದ ಪುಸ್ತಕದ ಜೊತೆಗೆ, "ಅರ್ಗಳ ಕುಮಾರಿ" ಎಂಬ ಐತಿಹಾಸಿಕ ಕಾದಂಬರಿಯನ್ನೂ ಬರೆದು ಕಳುಹಿಸಿದೆ. ವಿಶ್ವವಿದ್ಯಾನಿಲಯದವರು ಪ್ರಕಟಿಸಿದ್ದ ಪಟ್ಟಿಯ ಮೇರೆಗೆ ಐತಿ-ಹಾಸಿಕ ಕಾದಂಬರಿಯನ್ನು ಕಳುಹಿಸಲು ಅವಕಾಶವಿರಲಿಲ್ಲ ಆದಾಗ್ಯೂ, ಸ್ವತಂತ್ರವಾಗಿ ಬರೆದ ಐತಿಹಾಸಿಕ ಕಾದಂಬರಿಗಳು ಆಗ್ಗೆ ವಿರಳವಾಗಿದ್ದ ಕಾರಣ ದಿಂದಲೂ, "ಈಗ ಬರೆದಿರುವ ಸ್ಪರ್ಧೆಯ ಪುಸ್ತಕಕ್ಕೆ ಬಹುಮಾನ ಬರುವ ಭರವಸೆಯೇನೂ ಹೇಗೂ ಇಲ್ಲ, ಎರಡು ಪುಸ್ತಕಗಳೂ ಒಟ್ಟಿಗೆ ಹೋಗಿ ಹಿಂದಕ್ಕೆ ಬರಲಿ" ಎಂಬ ಭಾವನೆಯಿಂದಲೂ ಎರಡು ಪುಸ್ತಕಗಳನ್ನೂ, ವಿಶ್ವ ವಿದ್ಯಾನಿಲಯಕ್ಕೆ (೧೯೧೮ನೆಯ ಇಸವಿಯಲ್ಲಿ) ಕಳುಹಿಸಿದೆ. ವಿಶ್ವವಿದ್ಯಾ ನಿಲಯದ ವ್ಯಾಸಂಗವನ್ನು ಪೂರೈಸಿ ಅನೇಕ ವರ್ಷಗಳ ಕಾಲ ಅನುಭವವನ್ನು ಪಡೆದಿದ್ದ ಮೇಧಾವಿಗಳನೇಕರು ಸ್ಪರ್ಧೆಗೆ ಪುಸ್ತಕಗಳನ್ನು ಕಳುಹಿಸುವವ ರಾಗಿದ್ದುದೇ ನನ್ನ ಅಳುಕು ಮನಸ್ಸಿಗೆ ಕಾರಣ. ಶ್ರೀಮಾನ್ ಕೃಷ್ಣಶಾಸ್ತ್ರಿ ಯವರು ತಮ್ಮ ಶಿಷ್ಯರ ಅಭಿಪ್ರಾಯಗಳನ್ನೆಲ್ಲ ಕೇಳಿ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘವನ್ನು ಸ್ಥಾಪಿಸಿದರು. ಅದಕ್ಕೆ ಅವರ ಉತ್ಸಾಹವೂ, ಭಾಷಾ ಪ್ರೇಮವೂ ಮತ್ತು ದೂರದೃಷ್ಟಿಯೂ ಕಾರಣ. ಆಗ್ಗೆ ಮತ್ತಾವ

ವಿದ್ಯಾಸಂಸ್ಥೆಯಲ್ಲಿಯೂ ಕನ್ನಡಕ್ಕೆ ಪ್ರಾಧಾನ್ಯ ಕೊಡುವ ಕರ್ಣಾಟಕ ಸಂಘ ವಿರಲಿಲ್ಲ. ಆದುದರಿಂದ ಸೆಂಟ್ರಲ್ ಕಾಲೇಜಿನಲ್ಲಿ ಕರ್ಣಾಟಕ ಸಂಘವು ಏರ್ಪಟ್ಟು ಮೇಲ್ಪಂಕ್ತಿ ಹಾಕುವಂತೆ ಮಾಡಿದುದು, ಅವರು ಸಾಧಿಸಿದ ದೊಡ್ಡ ಕೆಲಸ. ಪ್ರಾಕ್ತನ ವಿಮರ್ಶ ವಿಚಕ್ಷಣ ರಾವಬಹದ್ದೂರ್ ಶ್ರೀಮಾನ್ ಆರ್. ನರಸಿಂಹಾಚಾರ್ಯರಿಂದ ಸಂಘದ ಪ್ರಾರಂಭೋತ್ಸವವು ನೆರವೇರಿದ ಬಳಿಕ ಶ್ರೀಮಾನ್ ಕೃಷ್ಣಶಾಸ್ತ್ರಿಯವರು ನನ್ನಿಂದ ಭಾಷಣ ಮಾಡಿಸಿ, ತಮ್ಮ ಮೆಚ್ಚಿಕೆಯನ್ನು ಸೂಚಿಸಿ, ಗ್ರಂಥ ರಚನೆಯ ಜೊತೆಗೆ ಭಾಷಣಗಳ ಮೂಲಕವೂ ಸಾಹಿತ್ಯ ಸೇವೆ ಮಾಡಬೇಕೆಂದು ಪ್ರೋತ್ಸಾಹಿಸಿದರು. ಅಷ್ಟರಲ್ಲಿ ನಮ್ಮ ಕರ್ಣಾಟಕ ಸಂಘದಿಂದ "ಪ್ರಬುದ್ಧ ಕರ್ಣಾಟಕ" ಪತ್ರಿಕೆಯು ಹೊರಡಲು ಪ್ರಾರಂಭವಾಯಿತು. ನಾನು ಮಾಡಿದ್ದ ಭಾಷಣದ ಸಾರಾಂಶವನ್ನು ನನ್ನಿಂದ ಬರೆಯಿಸಿ ಪ್ರಕಟಿಸಿದುದೂ ಅಲ್ಲದೆ, "ಸಂಯುಕ್ತಾಪಹರಣ" ಎಂಬ ಹೆಸರಿನ ಐತಿಹಾಸಿಕ ಕಾದಂಬರಿಯ ಕೆಲವು ಭಾಗಗಳನ್ನೂ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟಿಸಿದರು. ಆಗ್ಗೆ ನಾನು ಸೀನಿಯರ್ ಬಿ. ಎ. ತರಗತಿಯಲ್ಲಿ ಓದುತ್ತಿದ್ದೆ. ವಿಶ್ವವಿದ್ಯಾನಿಲಯಕ್ಕೆ ಸ್ಪರ್ಧೆಗಾಗಿ ಕಳುಹಿಸಿದ ಪುಸ್ತಕಕ್ಕೆ ಬಹುಮಾನವೂ ಲಭಿಸಿತು; ಅಲ್ಲದೆ ನಾನು ಕಳುಹಿಸಿದ್ದ "ಅರ್ಗಳಕುಮಾರಿ" ಎಂಬ ಐತಿಹಾಸಿಕ ಕಾದಂಬರಿಗೆ ಒಂದು ವಿಶೇಷ ಬಹುಮಾನವೂ ಲಭಿಸಿತು; ಅವೆರಡು ಬಹುಮಾನಗಳ ಮೊತ್ತ ಏಳುನೂರು ರೂಪಾಯಿಗಳು. ನನ್ನ ಗ್ರಂಥಗಳಿಗೆ ಹೀಗೆ ಪುರಸ್ಕಾರ ದೊರೆಯುವುದೆಂಬ ಯೋಚನೆಯು ನನಗೆ ಕನಸಿನಲ್ಲಿಯೂ ಇರಲಿಲ್ಲ; ಬಹುಮಾನಗಳ ವಿಷಯವನ್ನು ವಿಶ್ವವಿದ್ಯಾನಿಲಯದವರು ಪ್ರಕಟಿಸಿದಾಗ, ಶ್ರೀಮಾನ್ ಕೃಷ್ಣಶಾಸ್ತ್ರಿಯವರು ಸೂಚಿಸಿದ ಸಂತೋಷವನ್ನೂ, ಗ್ರಂಥರಚನೆ ಮಾಡಿ ಮುಂದಕ್ಕೆ ಬರಬೇಕೆಂದು ಆಶೀರ್ವದಿಸಿ ಹುರಿದುಂಬಿಸಿದ ರೀತಿಯನ್ನೂ ವರ್ಣಿಸುವುದು ನಿಜವಾಗಿಯೂ ಸಾಧ್ಯವಿಲ್ಲ. ಆ ದಿನದ ದೃಶ್ಯವು ಈಗಲೂ ನನ್ನ ಕಣ್ಣೆದುರಿಗಿದೆ. ಅವರು ವಿದ್ಯಾಗುರುಗಳಾಗಿ ಲಭಿಸಿದುದು ನನ್ನ ಪೂರ್ವಜನ್ಮದ ಪುಣ್ಯವೆಂದು ಭಾವಿಸಿ ಪ್ರೀತಿ ಭಕ್ತಿಗಳಿಂದ ಅಂದಿನಿಂದ ಇಂದಿನವರೆಗೂ ನಲಿಯುತ್ತಿದ್ದೇನೆ. ಅವರು ಹಿಂದೆ ಪ್ರಬುದ್ಧ ಕರ್ಣಾಟಕದ ಒಂದೆರಡು ಸಂಚಿಕೆಗಳಲ್ಲಿಯೂ, ಈಚೆಗೆ ಅದರ ರಜತೋತ್ಸವ ಸಂಚಿಕೆಯಲ್ಲಿಯೂ ನನ್ನ ವಿಷಯವಾಗಿ ಬರೆದಿರುವ ತಮ್ಮ ಮೆಚ್ಚಿಕೆಯ ಮಾತುಗಳಿಗಾಗಿ ಕೃತಜ್ಞತೆಯನ್ನು ಯಾವ ಮಾತುಗಳಲ್ಲಿ ಸೂಚಿಸ

ಬೇಕೊ ತಿಳಿಯದು. ವಿಶ್ವವಿದ್ಯಾನಿಲಯದಿಂದ ಬಹುಮಾನಗಳು ಲಭಿಸಿದುದ ರಿಂದ ನನ್ನ ಮನಸ್ಸಿನಲ್ಲಿ ಸಿಹಿಕಹಿ ನೆನಪುಗಳೆರಡೂ ಇವೆ. ಬಂಧುಮಿತ್ರರ ಸಂತೋಷದ ಮತ್ತು ಗುರುಹಿರಿಯರ ಆಶೀರ್ವಾದದ ಜೊತೆಗೆ, ಅನೇಕ ವಿದ್ವನ್ಮಣಿಗಳ ಪರಿಚಯ ಲಾಭವೂ ಮೆಚ್ಚಿಕೆಯೂ ದೊರೆತುದೂ ಮತ್ತು ನಾನು ಕಳುಹಿಸಿದ್ದ ಎರಡು ಗ್ರಂಥಗಳಲ್ಲೊಂದನ್ನು ವಿಶ್ವವಿದ್ಯಾನಿಲಯದವರು ಪ್ರಕಟಿಸಿದುದೂ ಅದರ ಸವಿ ನೆನಪು. ವಿಶ್ವವಿದ್ಯಾನಿಲಯದ ಬಹುಮಾನ ದೊಡನೆ ನನ್ನ ಕೈಗೆ ಬಂದ "ಅರ್ಗಳ ಕುಮಾರಿ" ಎಂಬ ಐತಿಹಾಸಿಕ ಕಾದಂಬರಿಯ ಪ್ರತಿಯನ್ನು ಪ್ರಮಾದವಶದಿಂದ ನಾನು ಕಳೆದುಕೊಂಡುದು ಅದರ ಕಹಿ ನೆನಪು. ನಾನು ಬರೆದುದು ಕಾದಂಬರಿಯ ಒಂದೇ ಒಂದು ಪ್ರತಿ. ಅದು ಕಳೆದುಹೋದ ಕಾರಣ, ಅದನ್ನು ಪ್ರಕಟಿಸುವ ಅವಕಾಶವೇ ತಪ್ಪಿಹೋಯಿತು. ಕಾದಂಬರಿಗಳನ್ನು ಬರೆಯುವ ಹುಮ್ಮಸ್ಸೇ ಉಡುಗಿ ಹೋಯಿತು. ಅರೆವಾಸಿ ಸಾಗಿದ್ದ "ಸಂಯುಕ್ತಾಪಹರಣ" ಎಂಬ ಐತಿ ಹಾಸಿಕ ಕಾದಂಬರಿಯಲ್ಲಿ ಬರೆದಷ್ಟು ಭಾಗವನ್ನು ಪೂರ್ಣ ಮನಸ್ಸಿನಿಂದ ಬರೆ ಯುವುದಕ್ಕೆ ಉತ್ಸಾಹವಿಲ್ಲದೆ ಹೋಯಿತು. ಆದರೂ ಗ್ರಂಥರಚನೆಯ ಉತ್ಸಾಹ ಮಾತ್ರ ಕುಗ್ಗದಂತೆ ನನಗೆ ನಾನೇ ಬುದ್ಧಿ ಹೇಳಿಕೊಂಡೆ. ಮೇಲೆ ಹೇಳಿದಂತೆ ನನ್ನನ್ನು ಹುರಿದುಂಬಿಸಿದ್ದ ಪ್ರಚೋದನ ಶಕ್ತಿಯೂ ನನ್ನ ಹೃದಯವನ್ನು ಮಿಡಿಯುತ್ತಿದ್ದಿತು. ನಾನು ಮುಂಬಯಿ ವಿಶ್ವವಿದ್ಯಾ ನಿಲಯದಲ್ಲಿ ವ್ಯಾಸಂಗವನ್ನು ಮುಂದುವರಿಸಿದುದರಿಂದಲೂ ಮತ್ತು ವಕೀಲಿ ಕೆಲಸ ನಡೆಯಿಸಿದುದರಿಂದಲೂ ಮುಂದೆ ಐದು ವರ್ಷಗಳ ಕಾಲ ಗ್ರಂಥ ರಚನೆಯ ವಿಷಯವನ್ನು ಯೋಚಿಸುವುದಕ್ಕೂ ಬಿಡುವಿರಲಿಲ್ಲ.

ಅಷ್ಟರಲ್ಲಿ, ಮೈಸೂರು ಸರ್ಕಾರದವರು ಭಾಷಾಂತರದಲ್ಲಿ ಸ್ಪರ್ಧಾ ಪರೀಕ್ಷೆಯನ್ನಿಟ್ಟರು. ಅದರಲ್ಲಿ ನನಗೆ ಪ್ರಥಮಸ್ಥಾನವು ದೊರೆತುದರಿಂದ ೧೯೩೦ನೆಯ ಇಸವಿಯಲ್ಲಿ ಅವರು ನನ್ನನ್ನು ಸರ್ಕಾರದ ಭಾಷಾಂತರಕಾರ- ನನ್ನಾಗಿ ನಿಯಮಿಸಿದರು. ಆ ಬಳಿಕ ಒಂದು ವರ್ಷದ ತರುವಾಯ ನಾನು "ನೀನೇ ಮುದ್ದು ಕೃಷ್ಣ" ಎಂಬ ಕಥೆಯನ್ನು ಬರೆದೆ. ನನ್ನ ಮಿತ್ರರಾದ ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿಯವರು ಆ ಕಥೆಯನ್ನು ಬಹಳವಾಗಿ ಮೆಚ್ಚಿಕೊಂಡರು; ಅದನ್ನು ಅಚ್ಚುಹಾಕಿಸಿ ತಾವು ತಮ್ಮ ಪಾಠಶಾಲೆಯ ಪ್ರಯೋ ಜನಾರ್ಥವಾಗಿ ಮಾರಾಟಮಾಡಿಸಿ ಉಪಯೋಗಿಕೊಳ್ಳುವುದಾಗಿ ಹೇಳಿದರು.

ಧರ್ಮಕಾರ್ಯಕ್ಕೆ ನೆರವಾಗುವ ಸುಯೋಗ ದೊರೆತುದಕ್ಕಾಗಿ ಅತ್ಯಂತ ಸಂತೋಷಿಸಿ ಅದಕ್ಕೊಪ್ಪಿದೆ. (ವಿದ್ಯಾರ್ಥಿಯಾಗಿದ್ದಾಗ ವಿಶ್ವವಿದ್ಯಾನಿಲಯ ದಿಂದ ಪಡೆದ ಬಹುಮಾನದ ಮೊಬಲಗಿನಲ್ಲಿ ಕೂಡ ಶೇಕಡ ಹತ್ತರಂತೆ ಒಟ್ಟು ಎಪ್ಪತ್ತು ರೂಪಾಯಿಗಳನ್ನು ಧರ್ಮಾರ್ಥವಾಗಿ ವಿನಿಯೋಗಿಸಿದ್ದೆನಾದ ಕಾರಣ, ಈ ಸಲಹೆ ಬಂದುದಕ್ಕಾಗಿ ಬಹಳ ಸಂತೋಷವಾಯಿತು.) ಆ ಕಥೆಯು ಪ್ರಕಟವಾದ ಮೇಲೆ ಅದನ್ನು ಮೆಚ್ಚಿ ಕನ್ನಡ ಬಾಂಧವರು ತೋರಿ ಸಿದ ಆದರವು ಅಷ್ಟಿಷ್ಟಲ್ಲ.

ನಾನು ಸಾಹಿತ್ಯದಲ್ಲಿ ಏನನ್ನು ಸಾಧಿಸಬೇಕೆಂದಿರುವೆನೆಂಬುದನ್ನೂ ಮತ್ತು ನನ್ನ ಮಾರ್ಗದಲ್ಲುಂಟಾದ ಅನುಕೂಲ ಪ್ರತಿಕೂಲ ಸಂಗತಿಗಳನ್ನೂ ಕುರಿತು ಕೆಲವು ವಿಷಯಗಳನ್ನು ತೀರ ಸಂಕ್ಷೇಪವಾಗಿ ಸೂಚಿಸಲಿಚ್ಛಿಸುವೆನು. ನನ್ನ ಅಭಿಲಾಷೆಗಳು ಎರಡು; ಮೊದಲನೆಯದು, ಭಾಷಣಗಳ ಮೂಲಕ ನಮ್ಮ ಕನ್ನಡಬಾಂಧವರಲ್ಲಿ ನಮ್ಮ ನಾಡಿನ ಮೇಲಿನ ಅಭಿಮಾನವನ್ನೂ, ನಮ್ಮ ಭಾಷೆಯ ಮೇಲಿನ ಅಭಿಮಾನವನ್ನೂ, ನಮ್ಮ ಸಂಸ್ಕೃತಿಯ ಮೇಲಿನ ಅಭಿಮಾನವನ್ನೂ ಉಕ್ಕಿಸಬೇಕೆಂಬ ಆಕಾಂಕ್ಷೆ. ಈ ಗುರಿಯ ವಿಚಾರದಲ್ಲಿ ಸಮುದ್ರ ಕರೆಯ ಮರಳಿನ ರಾಶಿಯಲ್ಲಿ ಒಂದು ಸಣ್ಣ ಕಣದಷ್ಟು ಕೂಡ ನನ್ನ ಸೇವೆ ಆಗಲೊಲ್ಲದೆಂಬುದನ್ನು ನಾನು ಮರೆತಿಲ್ಲ. ಈ ಪ್ರಯತ್ನದಲ್ಲಿ ನನ್ನಿಂದ ಸಾಧ್ಯವಿದ್ದ ಮಟ್ಟಿಗೂ ಕನ್ನಡ ಬಂಧುಗಳಿಗೆ ಭಕ್ತಿ ವಿಶ್ವಾಸಗಳಿಂದ ಸೇವೆ ಸಲ್ಲಿಸಿದ್ದೇನೆ. ನನ್ನ ಎರಡನೆಯ ಅಭಿಲಾಷೆ, ಗ್ರಂಥರಚನೆಯ ಮೂಲಕ ನಮ್ಮ ನಾಡಿಗೂ, ನಮ್ಮ ನುಡಿಗೂ ಮತ್ತು ನಮ್ಮ ಸಂಸ್ಕೃತಿಗೂ ಯಥಾ ಶಕ್ತಿಯಾಗಿ ಸೇವೆಯನ್ನು ಸಲ್ಲಿಸಬೇಕೆಂಬುದು. ನನ್ನ ಆಶೆಯೇನೊ ಬೆಟ್ಟ ದಷ್ಟಿದೆ. ಆದರೆ ವಾಸ್ತವವಾಗಿ ಸಾಗಿರುವುದು ಮಾತ್ರ ಸಾಸಿವೆ ಕಾಳಿಗೂ ಕಡಮೆ. ನಾನು ಮೊಟ್ಟ ಮೊದಲು ಗಮನ ಕೊಡಬೇಕಾಗಿರುವುದು ಜೀವನದ ವೃತ್ತಿಯಾದ ಸರ್ಕಾರಿ ಹುದ್ದೆಯ ಕರ್ತವ್ಯಗಳಿಗೆ. ನನಗೆ ಉಳಿಯುವ ಅವಕಾಶವು ಕಡಮೆ. ಆದಕಾರಣ, ನನ್ನಿಂದ ಗ್ರಂಥರಚನೆಯ ಕಾರ್ಯವು ನಾನು ಬಯಸುವಷ್ಟು ಹೆಚ್ಚಾಗಿ ನಡೆಯುವುದು ಸಾಧ್ಯವಾಗಿಲ್ಲ. ಗ್ರಂಥ ರಚನೆಯ ಸಂಬಂಧವಾಗಿ ನಾನು ಸಾಧಿಸಬೇಕೆಂದು ಬಯಸುತ್ತಿರುವುದು, ಮೊದಲನೆಯದಾಗಿ ಸಂಸ್ಕೃತ ಭಾಷೆಯಲ್ಲಿಯೂ ಕನ್ನಡ ಭಾಷೆಯಲ್ಲಿಯೂ ಕಾವ್ಯ ರಚನೆ ಮಾಡಿರುವ ಉದ್ದಾಮ ಕವಿಗಳ ಕಲಾಮಯ ಕೃತಿಗಳ

ವಿಮರ್ಶಾತ್ಮಕ ಗ್ರಂಥಗಳನ್ನು ಬರೆಯುವುದು, ಎರಡನೆಯದಾಗಿ, ಉಪ ನಿಷತ್ತುಗಳಲ್ಲಿಯೂ, ಪುರಾಣಗಳಲ್ಲಿಯೂ, ಮತ್ತು ಚರಿತ್ರೆಯಲ್ಲಿಯೂ ಬೆಳಗು ತ್ತಿರುವ ಸಂಗತಿಗಳ ಆಧಾರದ ಮೇಲೆ ನೂತನ ರೀತಿಯಲ್ಲಿ ನಾಟಕಗಳನ್ನು ರಚಿಸುವುದು; ಮೂರನೆಯದಾಗಿ, ಸಾಮಾಜಿಕ ವಿಚಾರಗಳನ್ನು ಆಧಾರ ವಾಗಿಟ್ಟುಕೊಂಡು ನಾಟಕಗಳನ್ನೂ, ಕಥೆಗಳನ್ನೂ ಮತ್ತು ಕಾದಂಬರಿಗಳನ್ನೂ ಬರೆಯುವುದು; ನಾಲ್ಕನೆಯದಾಗಿ, ಜಗತ್ತಿನ ಮಹಾಪುರುಷರ ಜೀವನ ಚರಿತ್ರೆಯೇ ಜಗತ್ತಿನ ಇತಿಹಾಸವಾದ ಕಾರಣ, ವಿಶ್ವವಿಭೂತಿಗಳೆಂದು ಪರಿ ಗಣಿಸಬಹುದಾದವರ ಜೀವನ ಚರಿತ್ರೆಗಳನ್ನು ಬರೆಯುವುದು; ಮತ್ತೂ ಕೊನೆಯದಾಗಿ, ವೈಜ್ಞಾನಿಕ ವಿಚಾರಗಳಲ್ಲಿ ಕೆಲವನ್ನಾದರೂ ಕುರಿತು ಜನ ಸಾಮಾನ್ಯಕ್ಕೆ ಬೋಧಪ್ರದವಾಗುವಂತೆ ಸುಲಭವಾದ ಶೈಲಿಯಲ್ಲಿ ಚಿಕ್ಕ ಚಿಕ್ಕ ಪುಸ್ತಕಗಳನ್ನು ಬರೆಯುವುದು. ನಾನು ಸಾಧಿಸಬೇಕೆನ್ನುವುದು ಮುಖ್ಯವಾಗಿ ಈ ಐದನ್ನು. ಇವುಗಳಲ್ಲಿ ಐದನೆಯದರ ಸಂಬಂಧವಾಗಿ ನಾನು ಇನ್ನೂ ಒಂದು ಗ್ರಂಥವನ್ನೂ ರಚಿಸಿಲ್ಲ; ನಾನು ರಚಿಸಿದ ಐತಿಹಾಸಿಕ ಕಾದಂಬರಿಯ ಮೂಲ ಪ್ರತಿಯ ಕತೆಯನ್ನು ಹಿಂದೆ ಹೇಳಿದೆ. ಸಾಧ್ಯವಾದಲ್ಲಿ ಐತಿಹಾಸಿಕ-ಸಾಮಾಜಿಕ-ಕಾದಂಬರಿಗಳನ್ನು ಬರೆಯುವ ಕಡೆಗೂ ಲಕ್ಷ್ಯ ಕೊಡಬೇಕೆಂದಿರುವೆನು. ಒಟ್ಟಿನ ಮೇಲೆ ಕನ್ನಡದಲ್ಲಿ ಗ್ರಂಥ ರಚನೆ ಮಾಡುವ ವಿಚಾರವಾಗಿ ಈಗಿನ ಪರಿಸ್ಥಿತಿಯು "ಹಲ್ಲಿದ್ದವರಿಗೆ ಕಡಲೆಯಿಲ್ಲ, ಕಡಲೆಯಿದ್ದವರಿಗೆ ಹಲ್ಲಿಲ್ಲ" ಎಂಬುದನ್ನು ನೆನಪಿಗೆ ತರುವಂತಿದೆ; ಗ್ರಂಥ ರಚನೆ ಮಾಡುವ ಸಾಮರ್ಥ್ಯ ವಿರುವವರಿಗೆ ಅದರಿಂದಲೇ ಜೀವನ ಸಾಗುವುದೆಂಬ ಭರವಸೆಯಿಲ್ಲ. ಸುಖ ಜೀವನಕ್ಕೆ ನೆಮ್ಮದಿಯಾಗಿ ಯಥೇಷ್ಟವಾಗಿ ಹಣದ ಅನುಕೂಲವಿರುವವರಿಗೆ ಗ್ರಂಥರಚನೆಯ ಗೊಡವೆಯೇ ಬೇಕಿಲ್ಲ; ಅದಕ್ಕೆ ಬೇಕಾದ ಸಾಮರ್ಥ್ಯವಂತೂ ಮೊದಲೇ ಇಲ್ಲ. ಆದಕಾರಣ, ಜೀವನ ಸಾಗುವುದಕ್ಕೆ ಬೇರೆ ವೃತ್ತಿಯನ್ನು ಅನುಸರಿಸುವವರೇ ಗ್ರಂಥರಚನೆ ಮಾಡಬೇಕಾಗಿದೆ; ಅವರು ಬಯಸುವ ಮಟ್ಟಿಗೆ ಅವರಿಂದ ಗ್ರಂಥರಚನೆಯು ಸಾಗುವುದೂ ಇಲ್ಲ. ಅವರಿಂದ ರಚಿತ ವಾದ ಗ್ರಂಥಗಳ ಪಟ್ಟಿ ಬೇಗ ಬೇಗ ಬೆಳೆಯುವುದೂ ಇಲ್ಲ. ಗ್ರಂಥ ರಚನೆ ಗಾಗಿ ನಾನು ಬಯಸುವಷ್ಟು ಅವಕಾಶ ದೊರೆಯದಿದ್ದರೂ, ದೊರೆತಷ್ಟು ಅವಕಾಶದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಮಾತ್ರ ಗ್ರಂಥ ರಚನೆ ಮಾಡುತ್ತಿ ದ್ದೇನೆ. ಇದೊಂದು ಪ್ರತಿಕೂಲವಿದ್ದರೂ, ಇತರ ಅನೇಕ ಅನುಕೂಲಗಳೂ

ಇದ್ದೇ ಇವೆ. ಜೀವನ ಸಂಪಾದನೆಗಾಗಿ ಪುಸ್ತಕ ಬರೆಯಬೇಕಾಗಿಲ್ಲವಾದ ಕಾರಣ, ನನ್ನ ಸಂತೋಷಕ್ಕಾಗಿ ನಾನು ಇಷ್ಟಪಡುವ ವಿಚಾರಗಳನ್ನು ಮಾತ್ರವೇ ಕುರಿತು ಬರೆಯಬಹುದಾಗಿದೆ; ಇದೊಂದು ದೊಡ್ಡ ಅನುಕೂಲ. ನನಗಿರುವ ಮತ್ತೊಂದು ದೊಡ್ಡ ಅನುಕೂಲವನ್ನೂ ಇಲ್ಲಿ ಸೂಚಿಸ ಬಹುದಾಗಿದೆ. ಶ್ರೀಮಂತರಲ್ಲಿ ಅನೇಕರು ಬಡವರನ್ನು ಕಡೆಗಾಣುತ್ತಾರೆ. ಮತ್ತು ಬಡವರಲ್ಲಿ ಅನೇಕರು ಶ್ರೀಮಂತರನ್ನು ದೂರುತ್ತಾರೆ. ನಾನು ಮಧ್ಯಮ ತರಗತಿಗೆ ಸೇರಿದವನಾದ ಕಾರಣ, ಉಭಯತ್ರರ ಸ್ವಭಾವವನ್ನೂ ತಕ್ಕಮಟ್ಟಿಗೆ ಬಲ್ಲವನಾಗಿದ್ದೇನೆ. ಆದುದರಿಂದ ಇವೆರಡು ಬಗೆಗಳ ಅತಿ-ವರ್ತನೆಗೂ ನನ್ನ ಮನಸ್ಸಿನಲ್ಲಿ ಅವಕಾಶವಿಲ್ಲ. ಗುಣಾವಗುಣಗಳು ಬಡತನ ಸಿರಿತನಗಳ ಆಧಾರದ ಮೇಲೆ ನಿಂತಿಲ್ಲ. ಪ್ರಪಂಚದಲ್ಲಿ ಸಂಪೂರ್ಣವಾಗಿ ನಿರ್ದೋಷವಾದ ವಸ್ತುವೂ ಇಲ್ಲ; ಅದೇ ರೀತಿಯಲ್ಲಿ ಸಂಪೂರ್ಣವಾಗಿ ನಿರ್ಗುಣವಾದ ವಸ್ತುವೂ ಇಲ್ಲ. ಇದೆಷ್ಟು ನಿಜವೆಂಬುದು ಜೀವನದ ಅನು ಭವವು ಹೆಚ್ಚಿದಷ್ಟೂ ಹೃದಯಂಗಮವಾಗಿ ಗೋಚರವಾಗುತ್ತ ಹೋಗುತ್ತದೆ; ಎಲ್ಲರಲ್ಲಿಯೂ ಗುಣವನ್ನೇ ಗ್ರಹಿಸಿ ಹರ್ಷಿಸಬೇಕೆಂಬ ಅಭಿಲಾಷೆಯೇ ವೃದ್ಧಿ ಹೊಂದುತ್ತದೆ.

ನನ್ನ ಗುರಿಯೇನೆಂಬುದನ್ನು ಮೇಲೆ ತಿಳಿಸಿದ್ದೇನೆ. ನಾನು ಬರೆದಿರುವ ಪುಸ್ತಕಗಳು ಕೂಡಿದ ಮಟ್ಟಿಗೂ ನನ್ನ ಗುರಿಯನ್ನು ಸಾಧಿಸಿವೆ. ಕನ್ನಡ ಭಾಷೆಯಲ್ಲಿ ಉದ್ದಾಮ ಕಾವ್ಯಗಳನ್ನು ರಚಿಸಿರುವ ಕವಿಗಳಲ್ಲಿ, ರನ್ನ, ಕುಮಾರ ವ್ಯಾಸ, ಹರಿಹರ, ಲಕ್ಷ್ಮೀಶ, ರತ್ನಾಕರವರ್ಣಿ ಮುಂತಾದ ಶ್ರೇಷ್ಠ ಕವಿಗಳ ಕೃತಿಗಳ ಸಂಬಂಧವಾಗಿ ವಿಮರ್ಶೆಯ ಲೇಖನಗಳನ್ನು ಬರೆದಿದ್ದೇನೆ. ಅವು ಗಳೆಲ್ಲ ಪ್ರಶಸ್ತಿ ಗ್ರಂಥಗಳಲ್ಲಿಯೂ, ಪತ್ರಿಕೆಗಳಲ್ಲಿಯೂ ಕೆಲವು ಪ್ರಕಟವಾಗಿವೆ; ಮತ್ತು ಕೆಲವು ಪ್ರಕಟವಾಗುವುದರಲ್ಲಿವೆ. ಕೆಲವು ಮಂದಿ ಕವಿಗಳ ಕಾವ್ಯ ಗಳನ್ನು ಕುರಿತ ವಿಮರ್ಶೆಯನ್ನು ಪುಸ್ತಕರೂಪದಲ್ಲಿ ಪ್ರಕಟಿಸಬೇಕೆಂದೂ ಇದ್ದೇನೆ ಕಾಳಿದಾಸನು ಶೃಂಗಾರ ರಸವನ್ನು ಚಿತ್ರಿಸಿರುವ ರೀತಿಯನ್ನು ಕುರಿತು ಒಂದು ಪುಸ್ತಕವನ್ನು ಬರೆದಿದ್ದೇನೆ. ಭಾಸ ಮಹಾಕವಿಯ ಕೃತಿಗಳೆಂದು ಪ್ರಕಟವಾಗಿರುವ ರೂಪಕಗಳ ಮೇಲೆ ವಿಮರ್ಶೆಯ ಗ್ರಂಥವೊಂದನ್ನು ಬರೆದಿದ್ದೇನೆ. ಕಠೋಪನಿಷತ್ತಿನ ಆಧಾರದ ಮೇಲೆ "ನಚಿಕೇತ" ಎಂಬ ನಾಟಕವನ್ನೂ, ರಾಮಾಯಣದಲ್ಲಿ ಬರುವ ಮಂಡೋದರೀದೇವಿಯು ನಾಯಕಿ

ಆಗಿರುವಂತೆ "ಮಂಡೋದರಿ" ಎಂಬ ನಾಟಕವನ್ನೂ, ಭಾರತದಲ್ಲಿರುವ ಒಂದು ಸಣ್ಣ ಉಪಾಖ್ಯಾನದ ಆಧಾರದ ಮೇಲೆ "ಬ್ರಹ್ಮವಾದಿನಿ" ಎಂಬ ನಾಟಕವನ್ನೂ, ಐತಿಹಾಸಿಕ ಸಂಗತಿಗಳ ಆಧಾರದ ಮೇಲೆ "ರಣಧೀರ" ಎಂಬ ನಾಟಕವನ್ನು "ತೆನಾಲಿ ರಾಮಕೃಷ್ಣ" ಎಂಬ ನಾಟಕವನ್ನೂ ಬರೆದಿದ್ದೇನೆ. ಸಾಮಾಜಿಕ ವಿಚಾರಗಳನ್ನು ಆಧಾರವಾಗಿಟ್ಟುಕೊಂಡು "ನಮ್ಮ ಸಮಾಜ" ಮತ್ತು "ಸುಂದರಿ" ಎಂಬ ಎರಡು ಸಾಮಾಜಿಕ ನಾಟಕಗಳನ್ನೂ, "ಹಳ್ಳಿಯ ಕಥೆಗಳು" ಮತ್ತು "ತುರಾಯಿ" ಎಂಬೆರಡು ಕಥಾಸಂಗ್ರಹಗಳನ್ನೂ ಬರೆದಿದ್ದೇನೆ. ಮಹಾಪುರುಷರ ಜೀವನ ಚರಿತ್ರೆಗಳನ್ನು ಬರೆಯುವ ಪ್ರಯತ್ನದಲ್ಲಿ ಇದುವರೆಗೆ "ಪೈಗಂಬರ್ ಮಹಮ್ಮದ" ಎಂಬುದನ್ನೂ "ಬುದ್ಧ" ಎಂಬುದನ್ನೂ ಬರೆದಿದ್ದೇನೆ; ವಿಶ್ವವಿಭೂತಿಗಳೆಂದು ಪರಿಗಣಿಸಬಹುದಾದ ಇತರ ಮಹಾಪುರುಷರಲ್ಲಿ ಕೆಲವರ ಜೀವನ ಚರಿತ್ರೆಗಳನ್ನೂ ಬರೆಯಬೇಕೆಂದಿದ್ದೇನೆ. ಮಹನೀಯರಾದ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಬರೆಯುವ ಪ್ರಯತ್ನವನ್ನು ಕೈಕೊಂಡು ಇದುವರೆಗೆ "ಹರ್ಷವರ್ಧನ" "ಏಬ್ರಹಾಂ ಲಿಂಕನ್" ಮತ್ತು (ವಿಶ್ವಕವಿ ರವೀಂದ್ರನಾಥ ಠಾಕೂರರ ಜೀವನ ಚರಿತ್ರೆಯ ಒಂದನೆಯ ಭಾಗವಾದ) "ಗುರುದೇವ" ಎಂಬ ಮೂರು ಪುಸ್ತಕಗಳನ್ನು ಬರೆದಿದ್ದೇನೆ. ಸ್ವದೇಶ ವಿದೇಶಗಳಲ್ಲಿ ಪ್ರಖ್ಯಾತರಾಗಿ ರಾಜರ್ಷಿಯೆನಿಸಿಕೊಂಡ, ಕೀರ್ತಿಶೇಷರಾದ ಶ್ರೀಮನ್ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರವರ ಜೀವನಚರಿತ್ರೆಯನ್ನೂ ಬರೆದಿದ್ದೇನೆ. "ನಚಿಕೇತ" ನಾಟಕವನ್ನು ಬರೆದಾಗ ಅದರಲ್ಲಿಯ ಘಟನೆಗಳಲ್ಲಿ ಯಾವುದೊಂದೂ ಪ್ರಾಚೀನ ಕಾಲದ ಜೀವನ ವಿಧಾನಕ್ಕೂ ಮತ್ತು ಪ್ರಾಚೀನ ಕಾಲದ ಸಂಸ್ಕೃತಿಗೂ ವಿರುದ್ಧವಾಗಿಲ್ಲದಂತಿರಬೇಕೆಂಬ ಉದ್ದೇಶದಿಂದ ಋಗ್ವೇದ ಭಾಷ್ಯವನ್ನೂ ಕಠೋಪನಿಷತ್ತಿನ ಮೇಲಿನ ನಾನಾ ಭಾಷ್ಯಗಳನ್ನೂ ಮತ್ತು ಇತರ ಅನೇಕ ಗ್ರಂಥಗಳನ್ನೂ ವ್ಯಾಸಂಗ ಮಾಡಬೇಕಾಯಿತು; "ಮಂಡೋದರಿ" ಮತ್ತು "ಬ್ರಹ್ಮವಾದಿನಿ" ನಾಟಕಗಳನ್ನು ಬರೆದಾಗಲೂ ಅದೇ ಉದ್ದೇಶದಿಂದ ರಾಮಾಯಣ ಮತ್ತು ಮಹಾಭಾರತ ಮುಂತಾದುವನ್ನು ವ್ಯಾಸಂಗ ಮಾಡಬೇಕಾಯಿತು. ಭಾಸನ ಮೇಲೂ ನಾನು ಬರೆದಿರುವ ಪುಸ್ತಕಗಳು ಹದಿನೆಂಟು ವರ್ಷ ಕಾಲ ವ್ಯಾಸಂಗದಿಂದಲೂ ವಿಚಾರದಿಂದಲೂ ನಾನು ಸಂಗತಿಗಳನ್ನೂ ಅಳೆದು ಸುರಿದು ವಿಮರ್ಶೆ ಮಾಡಿದ

ಫಲಿತಾಂಶವಾಗಿ ಬರೆದ ಪುಸ್ತಕಗಳು. ನಾನು ಗೌತಮ ಬುದ್ಧನ ಜೀವನ ಚರಿತ್ರೆಯಾದ "ಬುದ್ಧ" ಎಂಬ ಪುಸ್ತಕವನ್ನೂ ಶ್ರೀಹರ್ಷನ ಜೀವನಚರಿತ್ರೆಯಾದ "ಹರ್ಷವರ್ಧನ" ಎಂಬ ಪುಸ್ತಕವನ್ನೂ ಬರೆದಾಗ ಕೂಡ, ಗೌತಮ ಬುದ್ಧನ ಮತ್ತು ಶ್ರೀಹರ್ಷನ ವಿಚಾರವಾಗಿ ಇಂಗ್ಲಿಷಿನಲ್ಲಿ ಮತ್ತು ಸಂಸ್ಕೃತದಲ್ಲಿರುವ ಮುಖ್ಯ ಗ್ರಂಥಗಳನ್ನೆಲ್ಲ ವ್ಯಾಸಂಗ ಮಾಡಿ ಆ ಕೆಲಸ ಮಾಡಿದ್ದೇನೆ. ಭಾಷಣಗಳ ಮೂಲಕ ಸೇವೆಯನ್ನು ಸಮರ್ಪಿಸುವುದರಲ್ಲಿ ಕೂಡ ಯಥಾಶಕ್ತಿಯಾಗಿ ಕಲಸ ಮಾಡಿದ್ದೇನೆ.

ನನ್ನ ಕೃತಿಯ "ಕ್ರಿಯೆ ಪ್ರತಿಕ್ರಿಯೆ ಏನಾಗಿದೆ?" ಎಂಬ ಪ್ರಶ್ನೆಗೆ ಈಗ ಉತ್ತರ ಹೇಳಲು ಪ್ರಯತ್ನಿಸುತ್ತೇನೆ ಈ ಪ್ರಶ್ನೆಗೆ ಉತ್ತರ ಹೇಳುವುದರಲ್ಲಿ ಎರಡು ಕಷ್ಟಗಳಿವೆ. ಮೊದಲನೆಯದಾಗಿ, ಸುಮಾರು ಇಪ್ಪತ್ತು ವರ್ಷಗಳಷ್ಟು ದೀರ್ಘಕಾಲ ನಡೆದಿರುವ ಕ್ರಿಯೆ ಪ್ರತಿಕ್ರಿಯೆಗಳನ್ನು ಕುರಿತು ಒಂದೆರಡು ಪುಟಗಳಲ್ಲಿ ತಿಳಿಸುವುದು ಸಾಧ್ಯವಿಲ್ಲ. ಎರಡನೆಯದಾಗಿ, ಅವುಗಳನ್ನು ಹೆಚ್ಚು ಹೆಚ್ಚಾಗಿ ಬರೆದಷ್ಟೂ, ಲೇಖನವು ಆತ್ಮಶ್ಲಾಘನೆಯ ಕಡೆಗೆ ತಿರುಗುತ್ತ ಹೋಗಿ ಮನಸ್ಸಿಗೆ ಸಂಕೋಚವಾಗುತ್ತದೆ ನಿರ್ವಾಹವಿಲ್ಲದೆ ಕೆಲವು ಸಂಗತಿಗಳನ್ನು ತಿಳಿಸಬೇಕಾಗಿದೆ. ನಾನು ಬರೆದಿರುವ ಪುಸ್ತಕಗಳನ್ನು ನಮ್ಮ ನಾಡಿನ ಪ್ರಖ್ಯಾತ ವಿದ್ವಾಂಸರುಗಳೂ ಮತ್ತು ನಮ್ಮ ಪ್ರಸಿದ್ಧವಾದ ಪತ್ರಿಕೆಗಳೂ ಮೆಚ್ಚಿ ಶ್ಲಾಘಿಸಿರುವುದು ನನ್ನ ಪುಣ್ಯವೆಂದು ಭಾವಿಸಿ ಕೃತಜ್ಞನಾಗಿದ್ದೇನೆ. ವಿಶ್ವವಿದ್ಯಾನಿಲಯದ ಪ್ರಚಾರೋಪನ್ಯಾಸಗಳಿಗೆ ಆಹ್ವಾನಿತನಾಗಿ ನಾನು ಮಾಡಿದ ಭಾಷಣಗಳಿಗೂ, ನಮ್ಮ ನಾಡಿನ ಅನೇಕ ಭಾಗಗಳಲ್ಲಿ ನಾನು ಮಾಡಿರುವ ಇತರ ಭಾಷಣಗಳಿಗೂ ಕನ್ನಡಬಂಧುಗಳಿಂದ ದೊರಕಿರುವ ಪ್ರೋತ್ಸಾಹ ಮೆಚ್ಚಿಕೆಗಳಿಗಾಗಿ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು. ೧೯೩೬ರಲ್ಲಿ ಹಂಪೆಯಲ್ಲಿ ನಡೆದ ೬೦೦ ವರ್ಷದ ಉತ್ಸವ ಕಾಲದಲ್ಲಿ ನನ್ನ ಭಾಷಣಕ್ಕೆ ಸೇರಿದ್ದ ಜನ, ಅಧ್ಯಕ್ಷರಾಗಿದ್ದ ಪೂಜ್ಯ ಶಂಕರಾಚಾರ್ಯ ಸ್ವಾಮಿಗಳವರು ಅಪ್ಪಣೆಕೊಡಿಸಿದ ಮೆಚ್ಚಿಗೆಯ ಆಶೀರ್ವಾದ ವಚನಗಳೂ ನಿರಂತರವೂ ನನಗೆ ಉತ್ಸಾಹವನ್ನುಂಟು ಮಾಡುತ್ತಿವೆ. ನಾನು ಬರೆದ ನಾಟಕಗಳು ಬೆಂಗಳೂರು, ಮಂಗಳೂರು, ಬಾಗಿಲುಕೋಟೆ, ರಾಣೆಬೆನ್ನೂರು ಮುಂತಾದ ಅನೇಕ ಸ್ಥಳಗಳ ನಾಟ್ಯವಿಲಾಸಿಗಳಿಂದಲೂ, ಶ್ರೀ ವರದಾಚಾರ್ಯ ಸ್ಮಾರಕ ಮಂಡಲಿ ಮುಂತಾದವುಗಳಿಂದಲೂ ಅಭಿನಯಿಸಲ್ಪಟ್ಟು ಪ್ರೇಕ್ಷಕ

ರನ್ನು ಸಂತೋಷಗೊಳಿಸಿವೆ. "ಮಂಡೋದರಿ", "ನಚಿಕೇತ", "ಬ್ರಹ್ಮ-ವಾದಿನಿ", "ತೆನಾಲಿ ರಾಮಕೃಷ್ಣ"—ಎಂಬ ನಾಲ್ಕು ನಾಟಕಗಳೂ ಮೈಸೂರಿನಲ್ಲಿ ಹಿಂದಿನ ಶ್ರೀಮನ್ಮಹಾರಾಜರವರ ಸಮ್ಮುಖದಲ್ಲಿ ಪ್ರದರ್ಶಿಸಲ್ಪಟ್ಟಿವೆ. ದಿವಂಗತರಾದ ರಾವಬಹದ್ದೂರ್ ಶ್ರೀಮಾನ್ ತಾಡಪತ್ರಿ ರಾಘವಾಚಾರ್ಯರೂ, ಶ್ರೀಮತಿ ಸರೋಜಿನಿಯವರೂ ತಮ್ಮ ಮಾತೃಭಾಷೆಯು ಕನ್ನಡವಲ್ಲದಿದ್ದರೂ "ಮಂಡೋದರಿ" ನಾಟಕವನ್ನು ಅಭಿನಯಿಸುವುದಕ್ಕಾಗಿ ಕನ್ನಡ ಭಾಷೆಯನ್ನು ಅಭ್ಯಾಸಮಾಡಿ ಆ ನಾಟಕವನ್ನು ಆಡಿದುದು ನನಗೊಂದು ಸಂತೋಷ. ಆಂಧ್ರಸೀಮೆಯ ಸುಪ್ರಸಿದ್ಧ ನಟರಲ್ಲೊಬ್ಬರಾದ ಶ್ರೀಮಾನ್ ಸ್ಥಾನಂ ನರಸಿಂಹರಾಯರವರು ಬೆಂಗಳೂರಿಗೆ ಬಂದಿದ್ದಾಗ್ಗೆ ತಮ್ಮ ನಾಟಕ ಸಂಘದಲ್ಲಿ "ಮಂಡೋದರಿ" ನಾಟಕವನ್ನು ಅಭಿನಯಿಸಬೇಕೆಂದು ಉದ್ದೇಶಿಸಿದ್ದರು. ಆದರೆ, ಶ್ರೀಮಾನ್ ತಾಡಪತ್ರಿ ರಾಘವಾಚಾರ್ಯರವರು ರಾವಣನ ಪಾತ್ರವನ್ನು ಧರಿಸಿ ಪ್ರದರ್ಶಿಸಿದ ಅಭಿನಯ ಕೌಶಲ್ಯವನ್ನು ಕಂಡು ಬೆರಗಾಗಿ, "ನಾನು ಮಂಡೋದರೀ ಪಾತ್ರವನ್ನೇನೊ ಹೇಗೋ ಅಭಿನಯಿಸಿಯೇನು. ಆದರೆ ಇಂಥ ರಾವಣನನ್ನೆಲ್ಲಿ ತರಲಿ?" ಎಂದು ತಾತ್ಪರ್ಯವಾಗುವಂತೆ ತೆಲುಗಿನಲ್ಲಿ ಹೇಳಿ ತಮ್ಮ ಉದ್ದೇಶವನ್ನು ಕೈಬಿಟ್ಟರು. ದಿವಂಗತರಾದ ರೈಟ್ ಆನರೇಬಲ್ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳವರು "ಮಂಡೋದರಿ" ನಾಟಕದ ಸಾರಾಂಶವನ್ನು ನನ್ನಿಂದ ಕೇಳಿ ಹರ್ಷಿಸಿದರು. ಕಥಾಸಂವಿ-ಧಾನವನ್ನೂ ಪಾತ್ರಪೋಷಣವನ್ನೂ ಕುರಿತು ತಮ್ಮ ಮೆಚ್ಚಿಗೆಯನ್ನು ಸೂಚಿಸಿ, ಮಹಾಭಾರತದಲ್ಲಿ ಬರುವ ಸುಭ್ರೂ ಕಥೆಯನ್ನು ಆಧಾರವಾಗಿಟ್ಟುಕೊಂಡು ನಾಟಕ ರಚನೆ ಮಾಡುವಂತೆ ಹೇಳಿದರು. ಆ ಬಳಿಕ ನಾನು "ಬ್ರಹ್ಮವಾದಿನಿ" ಎಂಬ ಹೆಸರಿನಿಂದ ಬರೆದ ಆ ನಾಟಕವನ್ನು ಆಮೂಲಾಗ್ರವಾಗಿ ಓದಿಸಿ ಕೇಳಿ ತಮ್ಮ ಸಂತೋಷಾತಿಶಯವನ್ನು ವ್ಯಕ್ತಪಡಿಸಿದರು; ಅದೊಂದು ನನ್ನ ಜೀವನದ ಸುಯೋಗವೇ ಸರಿ. ಅವರೆಲ್ಲರ ಕಲಾನೈ-ಪುಣ್ಯದಿಂದ ಆ ನಾಟಕಪ್ರದರ್ಶನಗಳು ಯಶಸ್ವಿಯಾಗಿ ಸುಸಂಸ್ಕೃತರಾದ ಬಹುಮಂದಿಗಳ ಮೆಚ್ಚಿಕೆಯನ್ನು ಪಡೆದವು. ಆಂಧ್ರನಾಡಿನಲ್ಲಿ ನನ್ನ "ಮಂಡೋದರಿ" ನಾಟಕವು ತೆಲುಗಿಗೆ ಭಾಷಾಂತರವಾಗಿ ಅಭಿನಯಿಸಲ್ಪಡು-ತ್ತಿರುವುದಾಗಿ ನನಗೆ ಈಚೆಗೆ ತಿಳಿಯಿತು. ಮದರಾಸು ಸೆಕ್ರೆಟರಿಯೇಟ್ ಅಧಿಕಾರಿಗಳು ನಾಟಕ ಮಂಡಲಿಯೊಂದನ್ನೇರ್ಪಡಿಸಿಕೊಂಡಿದ್ದಾರೆ. ಅವರು

"ಮಂಡೋದರಿ" ನಾಟಕವನ್ನು ತಮಿಳಿಗೆ ಭಾಷಾಂತರ ಮಾಡಿಕೊಂಡು ಇದೇ ಆಗಸ್ಟು ತಿಂಗಳಿನಲ್ಲಿ ಪ್ರದರ್ಶಿಸಿದರು. ನಾನು ಆ ನಾಟಕವನ್ನು ಬರೆದು ಪ್ರಕಟಿಸಿದ ಹೊಸದರಲ್ಲಿ ಒಂದು ಸಲ ಪ್ರಯಾಣ ಹೊರಟೆ; ರೈಲಿನ ಎರಡನೆಯ ತರಗತಿಯ ಬಂಡಿಗಳೆಲ್ಲ ಕಿಕ್ಕಿರಿದು ತುಂಬಿದ್ದುವು; ರೈಲು ತಪ್ಪಿ ಹೋಗುವುದೆಂದು ಭಾವಿಸಿ ಪೇಚಾಡುತ್ತಿದ್ದೆ. ಎರಡನೆಯ ತರಗತಿಯ ಬಂಡಿ ಯೊಂದರಿಂದ ಒಬ್ಬರು ಮಹಾಶಯರು "ನಾನು ಸ್ಥಳ ಮಾಡಿಕೊಡುತ್ತೇನೆ. ಒಳಗೆ ಬನ್ನಿ" ಎಂದರು. ಹೇಗೋ ನುಗ್ಗಿಹೋಗಿ ಅವರ ಬಳಿಯಲ್ಲಿ ಕುಳಿತು, ನಾನು ಅಪರಿಚಿತನಾಗಿದ್ದೂ ನನ್ನಲ್ಲಿ ದಯೆ ತೋರಿಸಿದುದಕ್ಕಾಗಿ ಅವರನ್ನು ವಂದಿಸಿದೆ. ಅವರು "ನಿಮ್ಮ ಸಾಲವನ್ನು ಸ್ವಲ್ಪಮಟ್ಟಿಗಾದರೂ ತೀರಿಸೋಣ ವೆಂದು ಹಾಗೆ ಮಾಡಿದೆ" ಎಂದರು. ನನಗೆ ಇನ್ನೂ ಆಶ್ಚರ್ಯವಾಯಿತು. ನಾನು ಅದನ್ನು ಸೂಚಿಸಿದಾಗ ಅವರು "ಸಾಲವೆಂದರೆ ಹಣದ ಸಾಲವಲ್ಲ. ನಿಮ್ಮ ಮಂಡೋದರಿ ನಾಟಕವನ್ನು ನನ್ನ ಹೆಣ್ಣುಮಕ್ಕಳೂ ಸೊಸೆಯರೂ ಈ ಕೊನೆಯಿಂದ ಆ ಕೊನೆಯ ವರೆಗೂ ಬಾಯಿಗೆ ಗಟ್ಟಿಮಾಡಿದ್ದಾರೆ. ಗಂಡಸರು ಮನೆಯಿಂದ ಹೋದರೆ ಸಾಕು. ಮನೆಯ ಬಾಗಿಲು ಹಾಕಿ ತಾವು ತಾವೇ ಸೇರಿ ನಾಟಕವಾಡುತ್ತಾರೆ. ನಾನೂ ನೋಡಿ ನಲಿದಾಡಿದ್ದೇನೆ. ಅತ್ತಿದ್ದೇನೆ, ನಕ್ಕಿದ್ದೇನೆ. ಅದಕ್ಕೇ ಹೇಳಿದ್ದು ನಿಮ್ಮ ಸಾಲ ನನ್ನ ಮೈಮೇಲಿದೆ—ಅಂತ" ಎಂದರು. ಈ ಸನ್ನಿವೇಶವನ್ನೂ ಮತ್ತು (ಈಗ ಮದರಾಸು ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಪ್ರೊಫೆಸರಾಗಿರುವ) ಶ್ರೀಮಾನ್ ಪಡಕೋಣೆ ರಮಾನಂದರಾಯರು ಮಂಗಳೂರಿನಲ್ಲಿದ್ದಾಗ್ಗೆ ತಮ್ಮ ಕುಟುಂಬ-ದವರೊಡನೆ ಆ ನಾಟಕವನ್ನು ಅಭ್ಯಾಸಮಾಡಿ ರಂಗಸ್ಥಳದ ಮೇಲೆ ಯಶಸ್ವಿ-ಯಾಗಿ ಪ್ರದರ್ಶಿಸಿ ವಿಶ್ವಾಸ ತೋರಿದುದನ್ನೂ ನಾನು ಎಂದಿಗೂ ಮರೆಯು ವಂತಿಲ್ಲ. ನಾನು ಬರೆದಿರುವ ಇತರ ಪುಸ್ತಕಗಳ ವಿಷಯದಲ್ಲಿ ಸಹ, ಮೊದಲೇ ಹೇಳಿರುವಂತೆ ಬಗೆಬಗೆಯಾದ ಶ್ಲಾಘನೆಗಳು ಲಭಿಸಿವೆ. ಇನ್ನು "ಪ್ರತಿಕ್ರಿಯೆ"ಯ ವಿಷಯವಾಗಿ ಒಂದೆರಡು ಮಾತು. ಜೀವನದ ಇತರ ಕ್ಷೇತ್ರಗಳಂತೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಬೇವುಬೆಲ್ಲಗಳು ಎರಡೂ ಇದ್ದೇ ಇರುತ್ತವೆ; ಶ್ಲಾಘನೆಯ ಜೊತೆಗೆ ಟೀಕೆಗಳೂ ಬಂದೇ ಬರುತ್ತವೆ. ಟೀಕೆಗಳಲ್ಲಿ ಎರಡು ವಿಧಗಳ ಟೀಕೆಗಳು ಬಂದಿವೆ. ಸರಿಯಾದ ವಿಮರ್ಶೆಯ ಉದ್ದೇಶದಿಂದ ಮಾಡಿದ ಸಹೃದಯದ ಟೀಕೆಗಳು ಮೊದಲನೆಯ ವಿಧದವು.

ಅವುಗಳನ್ನು ನಾನು ಕೃತಜ್ಞತೆಯಿಂದ ಸ್ವೀಕರಿಸಿದ್ದೇನೆ. ಎರಡನೆಯ ವಿಧದ ಟೀಕೆಗಳೆಂದರೆ, ನನ್ನ ಉದ್ದೇಶವನ್ನೇ ಸರಿಯಾಗಿ ಗ್ರಹಿಸದೆಯೂ, ತಕ್ಕಷ್ಟು ಅನುಭವವೂ ಇಲ್ಲದೆಯೂ ಮಾಡಿದ ಟೀಕೆಗಳು. ಕೆಲವು ಟೀಕೆಗಳನ್ನು ಕಂಡು ನಕ್ಕಿದ್ದೇನೆ. ಇದಕ್ಕೊಂದು ನಿದರ್ಶನವನ್ನೂ ಸೂಚಿಸಬಹುದಾಗಿದೆ. ದೊಡ್ಡ ಹುದ್ದೆಯಲ್ಲಿದ್ದವರೊಬ್ಬರು ಮೈಸೂರು ನಗರದಲ್ಲಿ "ನಚಿಕೇತ" ನಾಟಕವನ್ನು ನೋಡಲು ಬಂದಿದ್ದರು. ಅವರು ಅದುವರೆಗೆ ಅದನ್ನು ಓದಿರಲಿಲ್ಲ. ಆದರೂ, "ಏನ್ರಿ, ಈ ಓಕಿಕೇತ ನಾಟಕ ಬರೆದಿದ್ದೀರಿ ? ಇನ್ನಾವ ವಿಷಯವೂ ಸಿಕ್ಕಲಿಲ್ಲವೆ ? " ಎಂದು ಮುಂತಾಗಿ ಎಲ್ಲರೆದುರಿಗೂ ಕೇಳಿ ಅಪಹಾಸ್ಯ ಮಾಡಿದರು. ಅವರ ಮಾತುಗಳನ್ನು ಕೇಳಿ ನಾನು ನಕ್ಕು "ಅಂತೂ ಇವೊತ್ತು ನಚಿಕೇತ ಓಕಿಕೇತನಾದ. ಏನೋ ನಾಟಕ ಬರೆದಿ-ದ್ದೇನೆ. ಹೇಗೂ ಬಂದಿದ್ದೀರಿ. ನಾಟಕ ಆಪ್ತಾರೆ. ನೋಡಿಯೇ ಬಿಡಿ." ಎಂದೆ. ಅಂದು ನಾಟಕಕ್ಕೆ ದಯಮಾಡಿಸಿ ಅಧ್ಯಕ್ಷತೆ ವಹಿಸಿದ್ದ ಶ್ರೀಮದ್ಯುವ-ರಾಜರವರು ನಾಟಕವನ್ನು ಕುರಿತು ಮೆಚ್ಚಿಕೆಯ ಮಾತುಗಳನ್ನು ಹೇಳಿದು-ದನ್ನೂ, ಪ್ರೊಫೆಸರ್ ಎಂ. ಹಿರಿಯಣ್ಣನವರೇ ಮುಂತಾದ ವಿದ್ವನ್ಮಣಿಗಳು ನನ್ನೊಡನೆ ಆಡಿದ ಮೆಚ್ಚಿಕೆಯ ಮಾತುಗಳನ್ನೂ ಕೇಳಿದ ಮೇಲೆ (ಮೇಲೆ ಸೂಚಿಸಿದ) ಆ ದೊಡ್ಡ ಹುದ್ದೆಯವರ ಅಭಿಪ್ರಾಯದಲ್ಲಿ ಮೊದಲು ವಾಮನನಾಗಿದ್ದ ನಾನು ತ್ರಿವಿಕ್ರಮನೇ ಆಗಿಬಿಟ್ಟೆ. ಅವರು "ಪರವಾ ಇಲ್ರಿ. ದೊಡ್ಡ ಸರ್ವೀಸ್ ಮಾಡಿದ್ದೀರಿ" ಎಂದರು. ಅವರ ಆ ಹೊಗಳಿಕೆಯಿಂದಲೂ ನನಗೆ ನಗುಬಂತು. ಇಷ್ಟೇ ನಮ್ಮ ಪ್ರಪಂಚ.

ಈಗ ಉಳಿದಿರತಕ್ಕವು, ಪ್ರಶ್ನಾವಳಿಯ ಕಡೆಯ ಎರಡು ಪ್ರಶ್ನೆಗಳು. ಎಂದರೆ, "ನಿಮ್ಮ ತಪಸ್ಸಿನ ಫಲಶ್ರುತಿಯೇನು ? ಸಾಹಿತ್ಯವು ಯಾವ ದೃಷ್ಟಿ ಹಾಗು ನಡುಗೆಯಿಂದ ಮುಂದೆ ಸಾಗ ಬಯಸುವಿರಿ? " ಎಂಬ ಎರಡು ಪ್ರಶ್ನೆಗಳು. ಇಲ್ಲಿ "ತಪಸ್ಸು" ಎಂಬ ಮಾತು. "ತಪಸ್ಸಿನ" ಎಂಬ ಪದಕ್ಕೆ ಬದಲಾಗಿ "ಅನುಭವದ" ಎಂಬ ಮಾತನ್ನು ಸೇರಿಸಿಕೊಂಡು ಕೇವಲ ಪ್ರಾಸಂಗಿಕವಾಗಿ ಒಂದೆರಡು ಸಂಗತಿಗಳನ್ನು ಮಾತ್ರ ಸೂಚಿಸಿ ಸುಮ್ಮನಾಗು-ತ್ತೇನೆ. ನಮ್ಮ ಕನ್ನಡ ಸಾಹಿತ್ಯವು ಅನೇಕ ಶತಮಾನಗಳಿಂದ ಬೆಳೆದು ಮಹಾ ವೃಕ್ಷವಾಗಿ ಶೋಭಿಸುತ್ತದೆ. ಅದು ಇನ್ನೂ ಅನೇಕ ಹೊಸ ಹೊಸ ಕೊಂಬೆ ಗಳೊಡೆದು ಗಗನಚುಂಬಿಯಾಗಿ ಬೆಳೆಯಬೇಕು. ಹೊಸ ಕೊಂಬೆಗಳು

ಬೇಡವೆನ್ನುವುದೆಷ್ಟು ಅನುಚಿತವೋ, ಹಳೆಯ ಬೇರುಗಳೂ ಹಳೆಯ ಬುಡವೂ ಬೇಡವೆನ್ನುವುದೂ ಅಷ್ಟೇ ಅನುಚಿತ. ಸರಸ್ವತೀದೇವಿಗೆ ಮುಪ್ಪೆಂಬುದೇ ಇಲ್ಲ. ಆದಕಾರಣ, ಹಳೆಯದು ಹೊಸದೆಂಬ ಭೇದಕ್ಕೇ ಸಾಹಿತ್ಯದಲ್ಲಿ ಅವಕಾಶವಿಲ್ಲ; ಸಾಹಿತ್ಯದ ಬೆಳವಣಿಗೆ ಈಗಿನ ಇಪ್ಪತ್ತನೆಯ ಶತಮಾನದ ಕೊನೆಯ ಹೊತ್ತಿಗೇ ಒಂದು ವೇಳೆ ನಿಂತುಹೋಗುವುದಾಗಿದ್ದ ಪಕ್ಷಕ್ಕೆ, "ಇದು ಹಳೆಯ ಸಾಹಿತ್ಯ, ಇದು ಹೊಸ ಸಾಹಿತ್ಯ" ಎಂದುಕೊಳ್ಳಲು ಅವಕಾಶವಿರುತ್ತಿದ್ದಿತೋ ಏನೋ! ಸಾಹಿತ್ಯದ ಬೆಳೆವಣಿಗೆಯು ನಿರವಧಿಯಾಗಿ ಮುಂದುವರಿಯುವಾಗ,ಯಾವುದು ಹಳೆಯ ಸಾಹಿತ್ಯ, ಯಾವುದು ಹೊಸ ಸಾಹಿತ್ಯ? ಶ್ರೇಷ್ಠ ಸಾಹಿತ್ಯವು ಎಂದಿಗೂ ಸೊಗಸೇ. ಕನ್ನಡ ಸಾಹಿತ್ಯದಲ್ಲಿ ಈಚೆಗೆ ಕಥೆಗಳು, ಕವಿತೆಗಳು ನಾಟಕಗಳು ಮತ್ತು ಹರಟೆಗಳು ಯಥೇಷ್ಟವಾಗಿ ಪ್ರಕಟವಾಗಿಯೂ ಪ್ರಕಟ ವಾಗುತ್ತಲೂ ಇವೆ; ಕಾದಂಬರಿಗಳ ಸಂಖ್ಯೆಯೂ ಹೆಚ್ಚುತ್ತಿದೆ. ಇದೇನೋ ಸಂತೋಷದ ಸುದ್ದಿಯೇ ಸರಿ. ಆದಾಗ್ಯೂ ಅನೇಕ ವಿಚಾರಗಳಲ್ಲಿ ಇನ್ನೂ ಬೆಳೆವಣಿಗೆಯು ಮಟ್ಟಬಿದ್ದೇ ಇದೆ. ಉದಾಹರಣೆಗಾಗಿ ವಿಮರ್ಶೆಯ ಗ್ರಂಥ ಗಳು, ಶಾಸ್ತ್ರ ಗ್ರಂಥಗಳು, ಧಾರ್ಮಿಕ ಗ್ರಂಥಗಳು, ಸ್ವಾರಸ್ಯವಾದ ಜೀವನ ಚರಿತ್ರೆಗಳು, ವಿಜ್ಞಾನದ ಗ್ರಂಥಗಳು ಮುಂತಾದವುಗಳ ಪಟ್ಟಿಯು ಇನ್ನೂ ಮೊಟಕಾಗಿಯೇ ಇದೆ. ಸಾಹಿತ್ಯವು ಸರಳತೆಯ ನೆಲೆಯಾಗಿರುವಂತೆ.ಮಾಡ ಬೇಕೆಂಬ ಉತ್ಸಾಹಭರದಲ್ಲಿ ಪಾಂಡಿತ್ಯವನ್ನು ಸಂಪಾದಿಸಿ ಪ್ರೌಢ ಗ್ರಂಥ ಗಳನ್ನು ಬರೆಯಬೇಕೆಂಬ ಅಭಿಲಾಷೆಯೇ ಕಡಿಮೆಯಾಗುತ್ತಿದೆ. ಪ್ರೌಢಿಮೆ ಯನ್ನು ಕೇಳುವವರ ಸಂಖ್ಯೆಯೂ ಇಳಿಮುಖವಾಗುತ್ತಿದೆ. ಜೀವನದ ಗಹನ ವಿಚಾರಗಳನ್ನು ಕುರಿತು ಆಲೋಚಿಸಬೇಕೆಂಬ ಪ್ರವೃತ್ತಿಯೂ ಹೆಚ್ಚಾಗಿಲ್ಲ, ಈ ನ್ಯೂನತೆಗಳೆಲ್ಲ ನಿವಾರಣೆಯಾಗಬೇಕು. ನಮ್ಮ ಸಾಹಿತ್ಯವು ಸರ್ವಾಂಗ ಸುಂದರವಾಗಿ ಶೋಭಿಸುವಂತಾಗಬೇಕು. ಕಿವಿ, ಕಣ್ಣು, ಮೂಗು ಮುಂತಾದು ವೆಲ್ಲ ಸಾಮರಸ್ಯದಿಂದ ಸರಿಯಾದ ಪ್ರಮಾಣದಲ್ಲಿ ಬೆಳೆವಣಿಗೆ ಹೊಂದಿದ್ದರೆ ಮುಖವು ಸೌಂದರ್ಯದ ನೆಲೆಯೆನಿಸೀತು; ಹಾಗಿಲ್ಲದೆ ಮೂಗೋ ಅಥವಾ ಕಿವಿಯೋ ಅಥವಾ ಕಣ್ಣೋ ಮಿತಿಮೀರಿ ದೊಡ್ಡದಾಗಿದ್ದರೆ ಒಟ್ಟು ಮುಖವೇ ಅಂದಗೆಡುತ್ತದೆ. ಅಷ್ಟೇ ಅಲ್ಲ. ಜೀವನದ ಘಟನೆಗಳನ್ನು ಅವು ನಡೆದಂತೆಯೇ ಹೇಳಿದ ಮಾತ್ರಕ್ಕೇ ಅದು ಸಾಹಿತ್ಯವೆನಿಸಲಾರದು. ಅದು ಸಾಹಿತ್ಯವೆನಿಸ ಬೇಕಾದರೆ, ರಮಣೀಯವಾಗಿರಬೇಕು, ರಸಾತ್ಮಕವಾಗಿರಬೇಕು, ಸುಂದರ

ವಾಗಿರಬೇಕು. ಅದು ಸಾಧ್ಯವಾಗಬೇಕಾದರೆ, ಒಪ್ಪು ತಪ್ಪುಗಳನ್ನು ತೋರಿಸಿ ಕೊಡುವ ನಿಷ್ಪಕ್ಷಪಾತವಾದ ವಿಮರ್ಶೆಯು ಬೆಳೆಯಬೇಕು. ಅನೇಕ ಸಂದರ್ಭ ಗಳಲ್ಲಿ "ಯಾರು ಬರೆದಿದ್ದಾರೆ? ಯಾವ ಗುಂಪಿನವರು ಬರೆದಿದ್ದಾರೆ?" ಎಂಬ ಪ್ರಶ್ನೆಗಳ ಆಧಾರದ ಮೇಲೆ ಗ್ರಂಥಗಳ ಮೇಲಿನ ವಿಮರ್ಶೆಯು ಸಿದ್ಧ ವಾಗುತ್ತಿರುವುದು ತಪ್ಪಿ, "ಏನು ಬರೆದಿದ್ದಾರೆ?" ಎಂಬ ಪ್ರಶ್ನೆಯ ಆಧಾರದ ಮೇಲೆ ಗ್ರಂಥ ವಿಮರ್ಶೆ ಮಾಡುವ ಕಾಲವು ಬರಬೇಕು. ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡುವವರ ಕರ್ತವ್ಯಗಳು ಗುರುತರಗಳಾದವುಗಳು ಮತ್ತು ವಿಶೇಷ ಹೊಣೆಗಾರಿಕೆಯುಳ್ಳವುಗಳು. ಅವರು ಗುಣಪಕ್ಷಪಾತವುಳ್ಳ ಸಹೃದಯರಾಗಿದ್ದಲ್ಲದೆ ಹೆಚ್ಚೇನೂ ಸಾಗದು. ಗುಣಭಾಗಕ್ಕೆ ಮಾತ್ರವೇ ಗಮನಕೊಟ್ಟು ಮಧುರ ಬಾಂಧವ್ಯವನ್ನು ವೃದ್ಧಿಮಾಡಿಕೊಳ್ಳಬೇಕೆಂಬ ಅಭಿ ಲಾಷೆಯು ಸಹೃದಯತೆಯ ಮುಖ್ಯ ಲಕ್ಷಣ. ಒಂದೊಂದು ಸಾಹಿತ್ಯವೂ ದೇವಿ ಸರಸ್ವತಿಯ ಕೈಯಲ್ಲಿರುವ ವೀಣೆಯ ಒಂದೊಂದು ಮೆಟ್ಟಲು. ಆದ ಕಾರಣ, ಒಂದು ಮೆಟ್ಟಲಿನಲ್ಲಿ ನುಡಿಯುವ ಸ್ವರವು ಮತ್ತೊಂದು ಮೆಟ್ಟಲಿನಲ್ಲಿ ನುಡಿಯುವುದಿಲ್ಲ. ಹಲವು ಸ್ವರಗಳೆಲ್ಲಾ ಸೇರಿ ಸೃಷ್ಟಿಗೀತೆಯನ್ನು ನುಡಿಯು ತ್ತವೆ. ಈ ತತ್ತ್ವವನ್ನು ನಿಜವಾಗಿಯೂ ಮನದಟ್ಟು ಮಾಡಿಕೊಂಡರೆ, "ಈ ಭಾಷೆ ಶ್ರೇಷ್ಠ, ಆ ಭಾಷೆ ನಿಕೃಷ್ಟ; ಈ ಸಾಹಿತ್ಯ ಮೇಲು, ಆ ಸಾಹಿತ್ಯ ಕೀಳು" ಎಂಬ ವಿವಾದಕ್ಕೇ ಅವಕಾಶವಿರುವುದಿಲ್ಲ; ಯಾವ ಪ್ರಾಂತದಲ್ಲಿ ಯಾವುದು ಬಹುಮಂದಿಗಳ ಮಾತೃಭಾಷೆಯೋ ಆ ಪ್ರಾಂತದಲ್ಲಿ ಆ ಭಾಷೆಗೇ ಪ್ರಾಧಾನ್ಯವಿರಬೇಕೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವೇ ಇರುವುದಿಲ್ಲ. ಸಾಹಿತ್ಯವನ್ನು ನಿರ್ಮಾಣ ಮಾಡುವವರ ಮಾತೂ ಅಷ್ಟೆ. ಅವರೆಲ್ಲರೂ ಉದಾರ ಹೃದಯರಾಗಿ, ತಾವೆಲ್ಲರೂ ಒಂದೇ ತುರಾಯಿಗೆ ಸೇರಿದ ಹಲವು ಪುಷ್ಪಗಳೆಂದೂ, ತಮ್ಮ ತಮ್ಮ ವೈವಿಧ್ಯವೇ ಒಂದು ಸೊಬಗೆಂದೂ ಭಾವಿಸಿ, ಪರಸ್ಪರವಾಗಿ ಗುಣಭಾಗವನ್ನು ನೋಡಿ ನಲಿಯುವ ಮನೋಧರ್ಮವನ್ನು ವೃದ್ಧಿಪಡಿಕೊಂಡರೆ, ಈಗ ನಡೆಯುತ್ತಿರುವ ಸಾಹಿತ್ಯಸೇವೆಗಿಂತ ನೂರರಷ್ಟು ಹೆಚ್ಚಾಗಿ ಸಾಹಿತ್ಯಸೇವೆಯು ನಡೆಯುವುದು ಸಾಧ್ಯ. ಸಾಹಿತ್ಯವನ್ನು ನಿರ್ಮಾಣ ಮಾಡುವವರು ತಾವು ಸಮಾಜವನ್ನೇ ಉದ್ಧರಿಸುವವರೆಂದು ಭಾವಿಸುವುದನ್ನು ಎಷ್ಟೆಷ್ಟು ಕಡಮೆ ಮಾಡಿ, ತಾವೂ ಸಮಾಜ ಸೇವಕರೆಂಬ ಭಾವನೆಯನ್ನು ಎಷ್ಟೆಷ್ಟು ಹೆಚ್ಚು ಮಾಡಿಕೊಂಡರೆ ಅಷ್ಟಷ್ಟು ಶ್ರೇಷ್ಠ ರೀತಿಯಲ್ಲಿ ಸಾಹಿತ್ಯ

ನಿರ್ಮಾಣವು ಮುಂದುವರಿಯುವುದು. ಎಲ್ಲಕ್ಕೂ ಮೇಲಾಗಿ, ನಮ್ಮ ನಾಡಿನ ಸಂಸ್ಕೃತಿಯ ಜೀವಸ್ವರದ ಸ್ವರೂಪವನ್ನು ಗ್ರಹಿಸಿ ಅದಕ್ಕನುಗುಣವಾಗಿ ಸಾಹಿತ್ಯಸೃಷ್ಟಿ ಮಾಡಿದರೆ ಲಭಿಸುವಷ್ಟು ಮನ್ನಣೆಯು ಪರಸಂಸ್ಕೃತಿಯ ಅನುಕರಣದಿಂದ ಸಾಹಿತ್ಯಸೃಷ್ಟಿ ಮಾಡಿದರೆ ನಮಗೆಂದಿಗೂ ಲಭಿಸದು; ಆಭರಣಗಳೂ ಅಲಂಕಾರಗಳೂ ಎಲ್ಲಿಂದ ಬೇಕಾದರೂ ಬರಲಿ; ಆದರೆ ದೇಹವು ಮಾತ್ರ ನಮ್ಮದೇ ಆಗಿರಲಿ. ನಮ್ಮ ಸಾಹಿತ್ಯವು ನಮ್ಮ ಸಂಸ್ಕೃತಿಯ ಪಡಿಯಚ್ಚಿನಲ್ಲಿ ಎರಕವಾದರೆ ಮಾತ್ರವೇ ಪರದೇಶಗಳವರೂ ಅದಕ್ಕೆ ಮನ್ನಣೆ ತೋರಿಸಿಯಾರು. ಪರಸಂಸ್ಕೃತಿಯ ಪಡಿಯಚ್ಚಿನಲ್ಲಿ ನಮ್ಮ ಸಾಹಿತ್ಯವು ಎರಕವಾದರೆ ಅವರಿಗೆ ಆದರವಿಲ್ಲ, ನಮಗೆ ಗೌರವವಿಲ್ಲ. ಎಲ್ಲಿಂದ ಬೆಳಕು ಬಂದರೂ ಅದನ್ನು ಆದರದಿಂದ ಸ್ವೀಕರಿಸೋಣ. ಆದರೆ, ನಮ್ಮ ಸಂಸ್ಕೃತಿಗೆ ಲೇಶಮಾತ್ರವೂ ಲೋಪ ಬರದಂತೆ ಸಾಹಿತ್ಯವನ್ನು ನಿರ್ಮಿಸೋಣ. ಹಿರಿಯರು ಕಿರಿಯರೆಂಬ ಭೇದವಿಲ್ಲದೆ, ಜಾತಿ ಮತ ಪಂಗಡ ಭೇದವಿಲ್ಲದೆ, ಪಂಡಿತ-ಪಾಮರರೆಂಬ ಭೇದವಿಲ್ಲದೆ ಸಮಸ್ತರೂ ಒಟ್ಟುಗೂಡಿ ಯಥಾಶಕ್ತಿಯಾಗಿ ಕನ್ನಡಿಗರ ಒಡತಿ ರಾಜರಾಜೇಶ್ವರಿಯ ಸೇವೆ ಮಾಡಿ ಕೃತಾರ್ಥರಾಗೋಣ. ಸಿರಿಗನ್ನಡಂ ಗೆಲ್ಗೆ!

ಸಿ. ಕೆ. ವೆಂಕಟರಾಮಯ್ಯ



## ಪತ್ರ-ಪುಷ್ಪ ++ ++ ++ ++

ನಾನು ಸಾಹಿತ್ಯಕ್ಷೇತ್ರದಲ್ಲಿ ಬಂದುದು ಹೇಗೆ ? ಸಹಜವಾಗಿ; ಗೊತ್ತಿಲ್ಲದೆ. ಮೊದಲಿಗೆ ಈ ಸಾಹಿತ್ಯ-ಸ್ಫೂರ್ತಿ ಬರಿ ಒಂದು ಸ್ಫುರಣವಾಗಿತ್ತು, ಬಾಲಕನ ಕನಸಾಗಿತ್ತು, ರೋಮಾಂಚನೀಯ ಕಥೆಯಾಗಿತ್ತು. ಇಂಥ ಕಥೆಗಳನ್ನು ಕಟ್ಟಿ ಗೆಳೆಯರಿಗೆ ಹೇಳುವದರಲ್ಲಿಯೇ ಜೀವವು ಸ್ಫೂರ್ತಿಯನ್ನು ಪಡೆಯುತ್ತಿತ್ತು. ಹನ್ನೊಂದು ಹನ್ನೆರಡು ವರ್ಷದವನಿದ್ದಾಗ ಜಾನಪದ ಸಾಹಿತ್ಯದಲ್ಲಿಯ ಗೀತೆಗಳನ್ನು ಜನತೆಯ ಬಾಯಿಂದ ಕೇಳಿ ಅದೇ ದಾಟಿಯಲ್ಲಿ ಕವನಗಳನ್ನು ಕಟ್ಟಿದೆ. ಗಳಗನಾಥರ ಕಾದಂಬರಿಗಳನ್ನು ಓದಿ ಮನಸೋತು ಮುಂದೆ ಎರಡು ಮೂರು ವರ್ಷಗಳ ನಂತರ ಒಂದು ರೋಮಾಂಚನೀಯ ಕಾದಂಬರಿಯನ್ನು ಬರೆಯಲು ಪ್ರಾರಂಭಿಸಿದೆ. ಅದು ಮುಗಿಯಲಿಲ್ಲ. ಬರೆದಿದ್ದೂ ಈಗ ಇಲ್ಲ.

ಇಂಗ್ಲಿಷು ನಾಲ್ಕನೆಯ ಇಯತ್ತೆಗೆ ಬಂದಾಗ ಆಂಗ್ಲ ಸಾಹಿತ್ಯವನ್ನು ಓದುವ ಹುಚ್ಚು ಹಿಡಿಯಿತು. ಕೈಗೆ ಸಿಕ್ಕ ಎಲ್ಲ ಕಥೆ-ಕಾದಂಬರಿ-ಕವಿತೆಗಳನ್ನು ಓದಿ ಮುಗಿಸಿದೆ. ಇಂಗ್ಲಿಷು ಶಾಲೆಯಲ್ಲಿ ಶಿಕ್ಷಕರಾಗಿದ್ದ ನನ್ನ ಅಜ್ಜಂದಿರು ಈ ಅಭಿರುಚಿಗೆ ಪುಟ ಕೊಟ್ಟರು. ನನ್ನ ನೋಟಬುಕ್ಕಿನ ಮೇಲೆ ಗೀಚಿದ ಒಂದು ಇಂಗ್ಲಿಷು ಪದ್ಯವನ್ನು ಓದಿ ಶ್ರೀ. ತಂತ್ರಿ ಎಂಬ ಶಿಕ್ಷಕರು ನನಗೆ ಆಂಗ್ಲ ಛಂದಸ್ಸನ್ನು ಮನೆಗೆ ಕರೆದು ಕಲಿಸಿಕೊಟ್ಟರು. ಆಗ ಇಂಗ್ಲಿಷಿನಲ್ಲಿ ಕವಿತೆಗಳನ್ನು ಬರೆಯಲು ನಾನು ಪ್ರಾರಂಭಿಸಿದೆ. ಲಾಂಗ್‌ಫೆಲೊ, ವರ್ಡ್ಸ್‌ವರ್ಥ, ಟೆನಿಸನ್, ಶೆಲ್ಲಿ,—ಇವರೇ ಆಗಿನ ಸ್ಫೂರ್ತಿದಾಯಕರು. ಇವರ ಕಾವ್ಯದ ಮಾದರಿಯಲ್ಲಿ ಭಾವಗೀತಗಳನ್ನೂ ಕಥನಾತ್ಮಕ ಕವಿತೆಗಳನ್ನೂ ಬರೆದೆ. ನಾನು ಮೇಟ್ರಿಕ್ ಆಗುವದರಲ್ಲಿ ಸಾವಿರಾರು ಸಾಲಿನ ಕಾವ್ಯ

ಪ್ರಪಂಚ ನನ್ನ ನೋಟುಬುಕ್ಕುಗಳಲ್ಲಿ ಬೆಳೆದಿತ್ತು. ಕ್ಲಾಸಿನಲ್ಲಿ ನಿಬಂಧ ಬರೆಯಲು ಹೇಳಿದರೆ,— ಒಮ್ಮೊಮ್ಮೆ ಪದ್ಯದಲ್ಲಿಯೇ ಅದನ್ನು ಬರೆಯುತ್ತಿದ್ದೆ. ಇದನ್ನೆಲ್ಲ ನೋಡಿ ಮೆಚ್ಚಿದವರೂ ಉಂಟು, ತೆಗಳಿದವರೂ ಉಂಟು. ಟೆನಿಸನ್ನನ ಗಿನೀವಿಯರ್ ಎಂಬ ದೀರ್ಘ ಕಥನಕಾವ್ಯವನ್ನು ನಮಗೆ ಮೇಟ್ರಿಕ್ಕಿಗೆ ಹಚ್ಚಿದ್ದರು. ಅದನ್ನೋದಿ ಅದರಷ್ಟೇ ದೀರ್ಘವಾದ 'ಲೀಲಾ' ಎಂಬ ಕಥನಕಾವ್ಯವನ್ನು ಒಂದು ಸನ್ನಿವೇಶವನ್ನು ಕಲ್ಪಿಸಿ ಬರೆದೆ. ಈ ಎಲ್ಲ ಆಂಗ್ಲ ಪದ್ಯರಚನೆ ನನ್ನ ಕಾವ್ಯಶಕ್ತಿಯ ಸೂಕ್ಷ್ಮದೇಹವಿದ್ದಂತೆ. ಅದರಲ್ಲಿದ್ದ ತಿರುಳೆಂದರೆ ಇಷ್ಟು: ಒಂದು ಸೂಕ್ಷ್ಮ ಸೌಂದರ್ಯದರ್ಶನ; ಮನೆಯಲ್ಲಿಯ ಪರಂಪರೆಯಾದ ಶ್ರೀ ಪಂತರೆಂಬ ಸಂತರ ಜೀವನ-ಕಾವ್ಯಗಳಿಂದ ಪಡೆದ ಭಕ್ತಿ-ಶ್ರದ್ಧೆಗಳು; ಅವ್ಯಕ್ತವಾಗಿ ನನ್ನಲ್ಲಿದ್ದ ಶೆಲ್ಲಿಯ ಕಾವ್ಯ-ಮಥನದಿಂದ ನನ್ನಲ್ಲಿ ರೂಪಗೊಂಡ ಒಂದು ದೈವಿಕ ಆಕಾಂಕ್ಷೆ, ಅಸಮಾಧಾನ. ಇವು ಆಗಿನ ಕವಿತೆಗಳಲ್ಲಿ ಆಕೃತಿಯಾಗಿದ್ದಿಲ್ಲ; ಮಂಜಿನ ವಾತಾವರಣವಾಗಿದ್ದವು.

ಈ ಕಾವ್ಯದ ಸಸಿಯನ್ನು ಸಹೃದಯತೆಯಿಂದ ಕಂಡವರೆಂದರೆ ಶ್ರೀ ಗುಡಿ ರಾಮರಾಯರೆಂಬ ಶಿಕ್ಷಕರು. ಕಾವ್ಯವನ್ನೆಲ್ಲದಿದ್ದರೂ ಒಂದು ಸತ್ವವನ್ನು ಕಂಡು ಹುರಿದುಂಬಿಸಿದವರೆಂದರೆ ಶ್ರೀ ಜೋಶಿ ಯಶವಂತರಾಯರು. ಇವರಲ್ಲಿ ಒಬ್ಬರು ನನ್ನ ಹುಟ್ಟೂರಾದ ಸವಣೂರಲ್ಲಿ ಇಂದಿಗೂ ಶಾಲೆಯ ಅಧ್ಯಾಪಕರಾಗಿದ್ದಾರೆ; ಇನ್ನೊಬ್ಬರು ಪ್ರಾಧ್ಯಾಪಕರಾಗಿದ್ದಾರೆ. ನಾನು ಆರನೆಯ ಇಯತ್ತೆಗೆ ಬರುವಾಗಲೇ ಶ್ರೀ ತಂತ್ರಿಯವರು ಇನ್ನೊಂದೆಡೆಗೆ ಹೋಗಿದ್ದರು. ಆದರೆ ಅವರು "You will sing sweet songs in the future" ಎಂದು ತಮ್ಮ ಒಂದು ಪತ್ರದಲ್ಲಿ ಬರೆದ ವಾಕ್ಯ ನನಗೆ ಹೆಚ್ಚಿನ ಉತ್ಸಾಹವನ್ನು ಕೊಟ್ಟಿತು. ಅವರ ಜಾಗದಲ್ಲಿ ಶ್ರೀ ಬೇಂದ್ರೆ ಎಂಬ ಒಬ್ಬ ಮಹಾರಾಷ್ಟ್ರೀಯರು ಬಂದರು. ಇವರು ಜಾತಿಯಿಂದ ಸಿಂಪಿಗರು. ನೀತಿಯಿಂದ ಒಬ್ಬ ಭಕ್ತರು. ಇವರ ಸಹೃದಯತೆಯೂ ನನ್ನ ಕಾವ್ಯಶಕ್ತಿಯನ್ನು ಪೋಷಿಸಿತು. ಇದೇ ಜಾಗಕ್ಕೆ ನನ್ನ ಕಾವ್ಯಗುರುಗಳಾದ ಶ್ರೀ ದ. ರಾ. ಬೇಂದ್ರೆಯವರು ಅರ್ಜಿ ಮಾಡಿದ್ದರು. ಆದರೆ ಆಗ ಇನ್ನೂ ನಾವು ಭೆಟ್ಟಿಯಾಗುವ ಯೋಗವಿರಲಿಲ್ಲ.

ನನ್ನ ಕಾವ್ಯದ ಈ ಸೂಕ್ಷ್ಮ-ದೇಹ-ಧಾರಣದ ಅವಧಿಯಲ್ಲಿ ಒಮ್ಮೆ ಅದಕ್ಕೆ ಮನ್ನಣೆ ಸಿಕ್ಕಿತು. ಸವಣೂರಿನಲ್ಲಿ ಒಮ್ಮೆ ದರ್ಬಾರ ನಡೆದಾಗ ಅಲ್ಲಿಯ

ನವಾಬ ಸಾಹೇಬರ ಮೇಲೆ ನಾನು ಬರೆದ ಒಂದು ಕವಿತೆಯು ನಮ್ಮ ಆಗಿನ ಪ್ರಾಧ್ಯಾಪಕರ ಕಣ್ಣಿಗೆ ಬಿತ್ತು. ಅದನ್ನು ನಾನು ದರ್ಬಾರದಲ್ಲಿ ಓದಬೇಕೆಂದರು. ದರ್ಬಾರದ ದಿನ ನನ್ನ ಗಂಟಲು ಕೂತಿತ್ತು. ನನ್ನ ಸಹವಿದ್ಯಾರ್ಥಿಯೊಬ್ಬನು ಅದನ್ನು ಓದಿದ. ನಾನು ಆ ಅಂದಿನ ಮಟ್ಟಿಗೆ 'ಆಸ್ಥಾನ ಕವಿ'ಯಾದೆ.

೧೯೨೫ರಲ್ಲಿ—ಹದಿನಾರು ವರ್ಷದವನಿದ್ದಾಗ—ನಾನು ಮೇಟ್ರಿಕ್ ಪಾಸಾಗಿ ಧಾರವಾಡಕ್ಕೆ ಬಂದೆ. ಮುಂದಿನ ಅಭ್ಯಾಸಕ್ಕೆ ಸಾಂಗಲಿಯ ವಿಲಿಂಗ್ಡನ್ ಕಾಲೇಜಿಗೆ ನಾನು ಹೋಗಬೇಕೆಂದು ಒಂದು ಯೋಜನೆಯಿತ್ತು. ಅದು ರೂಪಗೊಂಡಿದ್ದರೆ ನನ್ನ ಜೀವನ ಯಾವ ಹಾದಿ ಹಿಡಿಯುತ್ತಿತ್ತೋ ನಾನು ಹೇಳಲಾರೆ. ಆದರೆ **ಆಗುವದು** ಆಗುವದಿತ್ತು. ಅಂತೇ ನಾನು ಧಾರವಾಡಕ್ಕೆ ಹೋದೆ. ಗೆಳೆಯರ ಗುಂಪಿನವರಾದ—ಬೇಂದ್ರೆಯವರ ವಿದ್ಯಾರ್ಥಿಗಳಾದ—ಶ್ರೀ ರಾ. ಶಾ. ಅಭ್ಯಂಕರರ ಮನೆಯಲ್ಲಿಯೇ ಅವರ ಮನೆಯವನೊಬ್ಬನಾಗಿ ಇದ್ದೆ. ಈ ವಿಷಯದ ಬಗ್ಗೆ ನಾನು 'ಗೆಳೆಯರ ಗುಂಪಿನ ಕಣಸು' ಎಂಬ ಲೇಖದಲ್ಲಿ ಬರೆದಿದ್ದೇನೆ. ಆದಕಾರಣ ಅದನ್ನು ಇಲ್ಲಿ ಬೆಳೆಸುವದಿಲ್ಲ. ಧಾರವಾಡಕ್ಕೆ ಹೋದ ಒಂದು ವರ್ಷದಲ್ಲಿ ನನಗೆ ಬೇಂದ್ರೆಯವರ ಮಾರ್ಗದರ್ಶಕತ್ವ ದೊರೆಯಿತು; ವಿವಿಧ ವ್ಯಕ್ತಿಗಳ ಸ್ನೇಹ ವನ್ನು ತುಂಬಿಕೊಂಡು ನಿಂತ ಗುಂಪಿನಲ್ಲಿ ಪ್ರವೇಶ ದೊರೆಯಿತು. ಗುಂಪಿನ 'ಸ್ವಧರ್ಮ', 'ಜಯಕರ್ನಾಟಕ'ಗಳು ನನ್ನ ಕನ್ನಡ ಕಾವ್ಯ-ವಿಮರ್ಶೆಗಳಿಗೆ ಪುಟಕೊಟ್ಟವು. ಮುಂದೆ ಗೆಳೆಯರ ಗ್ರಂಥಮಾಲೆಗಳು ನನ್ನ ಸಾಹಿತ್ಯ ಕೃತಿಗಳ ರಂಗಭೂಮಿಯಾದವು. ಗುಂಪಿನ ಮೂಲಕ ಇಂದಿನ ಕನ್ನಡ ಸಾಹಿತ್ಯದ, ಕರ್ನಾಟಕದ ಪರಿಚಯವು ನನಗಾಯಿತು; ಇಂದಿನ ಕನ್ನಡ ಸಾಹಿತ್ಯಕ್ಕೆ, ಕರ್ನಾಟಕಕ್ಕೆ, ನನ್ನ ಪರಿಚಯವಾಯಿತು.

ಹೀಗಿದ್ದರೂ ಇಂಗ್ಲಿಷು ಬರವಣಿಗೆಯನ್ನು ಕಡಿಮೆಮಾಡಿ ಕನ್ನಡ ದಲ್ಲಿಯೇ ಹೆಚ್ಚಾದ ಅಭಿರುಚಿಯನ್ನು ಪಡೆಯಲು ನನಗೆ ನಾಲ್ಕೈದು ವರ್ಷ ಗಳು ಹಿಡಿದವು. ಬೇಂದ್ರೆಯವರು ನನ್ನ ಆಂಗ್ಲ ಪದ್ಯರಚನಾಶಕ್ತಿಯನ್ನು ಕನ್ನಡದ ಅನುವಾದಕ್ಕೆ ತಿರುಗಿಸಲು ಯತ್ನಿಸಿದರು. ೧೯೩೭ರಲ್ಲಿ ಅನೇಕ ಆಧುನಿಕ ಕನ್ನಡ ಕವಿತೆಗಳನ್ನು ನಾನು ಇಂಗ್ಲಿಷಿನಲ್ಲಿ ಭಾಷಾಂತರಿಸಿದೆ. ಹಾಗೆ ಮಾಡಿಯೇ ಅವುಗಳನ್ನು ತಿಳಿದುಕೊಂಡೆ. ಬಿ. ಏ., ಎಮ್. ಎ. ದಲ್ಲಿ ಹಳೆಗನ್ನಡದ ಅಭ್ಯಾಸ ಮಾಡಿದೆ. ಈಗ ನನ್ನ ಆಂಗ್ಲ ರಚನೆ

(ಗದ್ಯವನ್ನು ಬಿಟ್ಟು) ಹೆಚ್ಚಾಗಿ ಕನ್ನಡದ ತೊತ್ತಾಗಿದೆಯೆಂದರೂ ಸಲ್ಲುವದು. ಆದರೂ ವರ್ಷ ಎರಡು ವರ್ಷಕ್ಕೊಮ್ಮೆ ಇಂಗ್ಲಿಷಿನಲ್ಲಿಯೇ ಕಾವ್ಯ ಉಕ್ಕಿ ಬರುವದುಂಟು. ಸಂಸ್ಕಾರವು ದುರ್ದಮ್ಯವಾದದ್ದು.

೧೯೨೯—೩೦ರಲ್ಲಿ 'ಸೆಳವು' ಎಂಬ ನನ್ನ ದೀರ್ಘ ಕವನ ಪ್ರಸಿದ್ಧವಾಯಿತು. ಬೇಂದ್ರೆಯವರು ಮಂಜಿನಂತಿದ್ದ ನನ್ನ ಕಾವ್ಯಶಕ್ತಿಯನ್ನು ಸ್ಫುಟವಾಗಿಸಿದ್ದರು; ಅದರ ಬೇರು ಆಳವಾದ ಜೀವನದಲ್ಲಿ ಇಳಿಯುವಂತೆ ಮಾಡಿದ್ದರು; ಕನ್ನಡದ ದೇಹವನ್ನು ಆ ಸ್ಫೂರ್ತಿಗೆ ಕೊಟ್ಟಿದ್ದರು.

ಧಾರವಾಡದಿಂದ ನಾನು ಹೋಗಿದ್ದು ಪುಣೆ, ಆಕ್ಸಫರ್ಡ, ಸಾಂಗಲಿ, ಸಿಕಂದ್ರಾಬಾದು ಮತ್ತು ಈಗ ವೀಸನಗರಕ್ಕೆ. ಆಂಗ್ಲ ವಾಙ್ಮಯದ ಅಭ್ಯಾಸ, ಆಂಗ್ಲ ಪಾಂಡಿತ್ಯದ ದೃಷ್ಟಿಯಿಂದ ಲೇಖನ, ಪರಪ್ರಾಂತಗಳ ಜೀವನದೃಷ್ಟಿಯ ಅರಿವು, ಅನ್ಯರಲ್ಲಿ ಕನ್ನಡ ನಾಡಿನ ಜೀವನದೃಷ್ಟಿಯ ನಿವೇದನ, ಜೊತೆಗಿದ್ದ ಅನ್ಯ ಪ್ರಾಂತೀಯ ಇಲ್ಲವೆ ಕನ್ನಡದ ತರುಣ ಸಾಹಿತ್ಯೋಪಾಸಕರೊಡನೆ ಸಮರಸದ ಜೀವನ, ಆಗೀಗ ಕನ್ನಡದ ಸಾರ್ವಜನಿಕ ಜೀವನದಲ್ಲಿ ಕಾರ್ಯ, ಆಂಗ್ಲಭಾಷೆಯಲ್ಲಿ ಕನ್ನಡದ ನಿರೂಪಣೆ, ಕನ್ನಡ ಕಾವ್ಯ-ಸಾಹಿತ್ಯ ನಿರ್ಮಾಣ —ಈ ಎಲ್ಲ ಊರುಗಳಲ್ಲಿ ನಾನು ಮಾಡಿದ ಇಲ್ಲವೆ ಮಾಡುತ್ತಿರುವ ಕೆಲಸದ ರೇಖಾಚಿತ್ರ ಇದು. ಈ ಎಲ್ಲದರ ಹಿಂದೆ ವಿಶಾಲ ಜೀವನದ ದಾರಿಯ ಶೋಧನ ನನ್ನ ಹವಣಿನ ಹೆಗ್ಗುರುತು. ಅದರ ಮನನಕ್ಕಾಗಿಯೇ ನನ್ನ ಅಭ್ಯಾಸ. ಅದರ ಅನುಭವ-ಆಕಾಂಕ್ಷೆಗಳನ್ನು ನಿರೂಪಿಸಲೆಂದೇ ನನ್ನ ಸಾಹಿತ್ಯ. ಈ ಅವಧಿಯಲ್ಲಿ ನಾನು ಬೆಳೆದಿದ್ದೇನೆ. ಬೆಳೆದಷ್ಟು ಮಟ್ಟಿಗೆ ಬಾಳಿದ್ದೇನೆ.

ನನಗೆ ಮುಖ್ಯವಾದ ಪ್ರಚೋದನ ಶಕ್ತಿ ಇದು,—ಬಾಳನ್ನು ತಿಳಿಯಬೇಕೆಂಬ ಜಿಜ್ಞಾಸೆ, ಹಂಬಲ. ಧಾರವಾಡಕ್ಕೆ ಬರುವ ಪೂರ್ವದಲ್ಲಿ ಈ ಶಕ್ತಿ ಯಾವ ಪರಿಗಳಲ್ಲಿ ಕಾಣಿಸಿಕೊಂಡಿತೆಂಬುದನ್ನು ಈ ಮೊದಲು ಹೇಳಿದ್ದೇನೆ. ಧಾರವಾಡದಲ್ಲಿದ್ದಾಗ ಈ ಜಿಜ್ಞಾಸೆಯು ಜೀವನದ ಆಳದ ಹಾಗು ವಿಸ್ತಾರದ ದರ್ಶನವನ್ನು ಪಡೆಯಿತು. ಗುಂಪಿನಲ್ಲಿ ಪ್ರಚಲಿತವಾದ ಅರವಿಂದ-ಅನುಭಾವ-ರಾಜಕೀಯ ಸಾಹಿತ್ಯ ಈ ಆಳ-ವಿಸ್ತಾರಗಳನ್ನು ಪೋಷಿಸಿತು. ಸ್ನೇಹ-ನಲುಮೆಗಳ ಅನುಭವ ಈ ದರ್ಶನಕ್ಕೆ ತಿರುಳನ್ನು ಒದಗಿಸಿಕೊಟ್ಟಿತು. ಪ್ರಕೃತಿಯ ರೂಪರಾಶಿಯು ಒಂದು ಸಾರ್ವತ್ರಿಕ ರಾಮಣೀಯಕತೆಯ ಬೆಡಗನ್ನು ತಂದಿತು. ಟಾಗೋರ-ರಾಮತೀರ್ಥ-ವಿವೇಕಾನಂದ-ವರ್ಡ್ಸ್‌ವರ್ಥ-

ಶೆಲ್ಲಿ-ಎ. ಇ. ಮೊದಲಾದವರ ಕೃತಿಗಳು ಇದನ್ನೆಲ್ಲ ದೃಢತರವಾಗಿಸಿದವು. ಅನೇಕ ಆನುಷಂಗಿಕ ಭಾವಗಳಲ್ಲಿ ಅನುಭಾವದ ಹಾರೈಕೆ-ಹಂಬಲಗಳು ಈ ಅವಧಿಯಲ್ಲಿ ಎದ್ದು ಕಾಣುತ್ತಿದ್ದವು. ರಾಷ್ಟ್ರೀಯತೆ-ಪ್ರಾಂತೀಯತೆಯ ಪ್ರಭಾವ ದೇಶದಲ್ಲಿಯ ಆಂದೋಲನಗಳಿಂದ ನನ್ನಲ್ಲಿಯೂ ಒಡಮೂಡಿತು. ಪುಣೆಯಲ್ಲಿ ನಾನು ಕಳೆದ ಐದು ವರ್ಷಗಳಲ್ಲಿ ಈ ಎಲ್ಲ ಅನುಭವದ ಅಡಿಗಲ್ಲನ್ನು ಭದ್ರವಾಗಿಸಿದೆ. ಈ ಅನುಭವಕ್ಕೆ ಇನ್ನೂ ಸ್ಫುಟವಾದ ಮೂರ್ತಸ್ವರೂಪ ವನ್ನು ಕೊಟ್ಟೆ.

ಇಂಗ್ಲಂಡಿಗೆ ಹೋಗುವದು ನನ್ನ ಒಂದು ಕನಸಾಗಿತ್ತು. ಇದರಿಂದ ನಾನು ಮೇಲೆ ಹೇಳಿದ ನನ್ನ ಎಲ್ಲ ಪ್ರಯತ್ನಗಳಿಗೆ ಒಂದು ಉತ್ಕಟತೆ ಬಂತು. ಅಲ್ಲದೆ ಮೂಲ ಪ್ರಚೋದನ ಶಕ್ತಿಯು ಇನ್ನೊಂದು ಪರಿ ತೆರೆಯಿತು. ಅದಾವುದೆಂದರೆ,-ಸಾಮಾಜಿಕತೆ-ಸಮತೆಗಳ ಪ್ರಗತಿ. ಮೂಡಣ-ಪಡುವಣದ ಸಮಾಜಗಳಲ್ಲಿಯ ಅಜಗಜಾಂತರ ಭೇದವನ್ನು ನೋಡಿ ಹುಟ್ಟಿದ ಜುಗುಪ್ಸೆ, ಸಂತಾಪ, ಕರುಣೆ; ಈಗ ಅನುಭಾವದೊಡನೆ ಸಮತೆಯೂ ನನ್ನ ಗುರಿಯಾಗಿ ಮೇಳವಿಸಿತು. ಅಂತರ್ಮುಖತೆಗೆ ಬಹಿರ್ಮುಖತೆಯ ಸರಿತೂಕ ಸಿಕ್ಕಿತು. ಬೇರೆ ಪ್ರಾಂತಗಳಿಗೆ ಹೋಗಿ ಬೆಳೆದಿದ್ದ ವಿಶಾಲದೃಷ್ಟಿ ಇನ್ನೊಂದು ಖಂಡಕ್ಕೆ ಹೋಗಿ ಇನ್ನಿಷ್ಟು ಬೆಳೆಯಿತು. ರಾಜಕೀಯ-ಸಾಮಾಜಿಕ ಪ್ರಗತಿಯಲ್ಲಿ ಕಾಣಿಸಿಕೊಳ್ಳುವ ಸಗುಣ ಬ್ರಹ್ಮನು ನಿರ್ಗುಣ ಬ್ರಹ್ಮನೊಡನೆ ಆಗ ತನ್ನದೂ ಒಂದು ಸ್ಥಾನವನ್ನು ನನ್ನ ಮನಸ್ಸಿನಲ್ಲಿ ರಚಿಸಿಕೊಂಡ.

ವಿಲಾಯತಿಯಿಂದ ಮರಳಿದ ಮೇಲೆ ನನ್ನ ಜೀವನದ ಕನಸು ಒಂದು ಸಮಗ್ರತೆಯನ್ನು ತಾಳಿತು. ಕಾವ್ಯವು ನನ್ನ ಹುಟ್ಟುಗುಣ. ಅದನ್ನು ಬೆಳಿಸು-ವದು ಸಾಧ್ಯವಿದೆಯೇ ಹೊರತು ಅಳಿಸುವದು ಸಾಧ್ಯವಿಲ್ಲ. ಹಾಗಾದರೆ ಈ ಕಾವ್ಯಕ್ಕೆ ಹೂರಣ ಯಾವುದು ? ನಾನು ಮೇಲೆ ಹೇಳಿದ ಕನಸಿನ ಸಮಗ್ರತೆ. ಸ್ನೇಹ-ಪ್ರೀತಿ-ಸೌಂದರ್ಯಗಳ ದರ್ಶನದಿಂದ, ಜ್ಞಾನ-ಭಕ್ತಿಗಳ ಜೋಡಣೆ-ಯಿಂದ, ನನ್ನ ಆತ್ಮಚೇತನವನ್ನು ಪಡೆದುಕೊಳ್ಳಬೇಕು. ಹೀಗೆ ಸೂಕ್ಷ್ಮ-ವಾಗಿಸಿದ ದೃಷ್ಟಿಯಿಂದ ಸೃಷ್ಟಿ-ಸಮಾಜಗಳಲ್ಲಿ ಆಡುತ್ತಿರುವ ಶಕ್ತಿಗಳನ್ನು ಪರಿಶೀಲಿಸಿ ಅವುಗಳ ಹಿಂದಿನ ವಿರಾಟ ರೂಪವನ್ನು ತಿಳಿಯಬೇಕು. ಶ್ರೀ. ಅರವಿಂದರ ತತ್ವದಲ್ಲಿ ಶ್ರದ್ಧೆಯಿದ್ದುದರಿಂದ, ಒಂದು ದಿವ್ಯ ಪೂರ್ಣತೆಯ ಕಡೆಗೆ ಸಾಗಿದ ಜೀವನದಲ್ಲಿ, ದೈವವು ಕಲ್ಪಿಸಿದ ರಾಷ್ಟ್ರ-ಪ್ರಾಂತ-ಸಮಾಜ

ಗಳಲ್ಲಿ ನಿಂತು, ಅದರ ಅವತರಣಕ್ಕಾಗಿ ಸಾಧ್ಯವಿದ್ದುದನ್ನು ಮಾಡಬೇಕು. ನನ್ನ ದೈನಿಕ ಜೀವನವನ್ನು ನಾನು ಈ ಮಾನದಂಡದಿಂದ ಅಳೆಯುತ್ತಿರುತ್ತೇನೆ. ನನ್ನ ಸಾಹಿತ್ಯ-ಕೃತಿಗಳನ್ನು ಇದೇ ಒರೆಗಲ್ಲಿಗೆ ಹಚ್ಚಿ ನೋಡುತ್ತಿರುತ್ತೇನೆ. ಕಾವ್ಯರಚನೆಯು ತರುವ ಆನಂದ-ಸಮಾಧಾನಗಳೂ ಈ ಸಾಧನದ ಸಾಮಗ್ರಿ-ಯಾಗಿವೆ; ಶ್ರದ್ಧೆಯನ್ನು ರಕ್ಷಿಸುವದರಲ್ಲಿ ಭಾಗಿಯಾಗಿವೆ.

ನಾನು ಸಾಹಿತ್ಯದಲ್ಲಿ ಏನನ್ನು ಸಾಧಿಸಬೇಕೆಂದಿದ್ದೇನೆ ? ನನ್ನ ಸ್ಫೂರ್ತಿ-ಅನುಭವಗಳ ನಿರೂಪಣೆಯನ್ನು. ಇದಕ್ಕೂ ಹೆಚ್ಚಾಗಿ ಇಲ್ಲವೆ ಬೇರೆಯಾಗಿ ಯಾರು ಏನನ್ನು ಸಾಧಿಸಬಲ್ಲರು ? ಹಾಗೆ 'ಆಗಬೇಕು' ಎಂಬುದರ ಮಾಲಿಕೆಯಲ್ಲಿ ಅನೇಕ ಮಾತುಗಳಿವೆ. ಉದಾಹರಣಾರ್ಥವಾಗಿ, ವೇದೋಪ-ನಿಷತ್ತುಗಳ ಮಂತ್ರಸಿದ್ಧಿ ನನ್ನ ಕಾವ್ಯದಲ್ಲಿ ಬರಬೇಕೆಂದು ಬಯಕೆಯಿದೆ. ಆದರೆ ನನ್ನ ಬಾಳು ಆ ಮಟ್ಟಕ್ಕೆ ಬರದೆ ಕಾವ್ಯದಲ್ಲಿ ಅದು ಸಾಧಿಸುವದೆಂತು? ವ್ಯಾಸರಂತೆ ಇಂದಿನ ಯುಗದ ಮಹಾಭಾರತವನ್ನು (ಹಿಂದಿನ ಯುಗದ ಯಾವುದೇ ಮಹಾಕಾವ್ಯದ ಭಾಷಾಂತರವಲ್ಲ) ಬರೆಯಬೇಕೆಂದಿದ್ದೇನೆ. ಆದರೆ ಆ ಆರ್ಷದೃಷ್ಟಿಯೂ ಸತ್ಯದ ಸಾಕ್ಷಾತ್ಕಾರವೂ ಇರದೆ ಅದು ಸಿದ್ಧಿಸು-ವದು ಹೇಗೆ ? ಶೆಕ್ಸಪಿಯರನಂತೆ ಮಾನವಕುಲದ ಹೃದಯವನ್ನು ಬಿಚ್ಚಿ ತೋರಿಸಬೇಕೆಂದಿದ್ದೇನೆ. ಆದರೆ ಸಗುಣಬ್ರಹ್ಮದ ಆ ಅನಂತ ದರ್ಶನವಿಲ್ಲದೆ ಇದು ಹೇಗೆ ಸಾಧ್ಯ ? ಶ್ರೀ ಅರವಿಂದರಂತೆ ಯೋಗಾನುಭವ-ಜ್ಞಾನಗಳ ಸಮ್ಯಕ್ತ್ವದ ಸಹಾಯದಿಂದ ವಿಶ್ವಶಕ್ತಿಯ ಅದ್ಭುತ ಗತಿಯನ್ನು ವಿವರಿಸಿ ತೋರಿಸಬೇಕೆಂದಿದ್ದೇನೆ. ಆದರೆ ಆ ಅನುಭವ-ಜ್ಞಾನಗಳು ಬರಬೇಕಷ್ಟೇ ? ಆ ಪ್ರತಿಭೆ-ಸಿದ್ಧಿಗಳಿದ್ದ ಮಹನೀಯರು ಅಂಥ ಕಾರ್ಯವನ್ನು ಮಾಡಿದ್ದಾರೆ, ಮಾಡುತ್ತಿದ್ದಾರೆ. ನನ್ನ ಜೀವನ-ಸಾಹಿತ್ಯಗಳು ಈ ಹಾದಿಯ ಮೇಲೆ ನಡೆ-ಯುತ್ತಿರುವ ಎಳೆಯ ಮಗು. ಅನುಭವಕ್ಕೆ ಸರಿಯಾದ ನಿರೂಪಣೆ, ಹೆಚ್ಚಿನ ಅನುಭವಕ್ಕೆ ಬೇಕಾದ ಸಾಹಸ-ಪ್ರಯತ್ನಗಳನ್ನು ನಾನು ಕಾಯ್ದುಕೊಂಡು ಹೋದರೆ ಸಾಕು.

ನನ್ನ ಗ್ರಂಥಗಳು ಸಾಹಿತ್ಯದಲ್ಲಿಯ ನನ್ನ ಗುರಿಯನ್ನು ಎಷ್ಟರಮಟ್ಟಿಗೆ ಸಾಧಿಸಿವೆ ? ಈ ಪ್ರಶ್ನೆಯು ನನ್ನ ಕೃತಿಗಳ ವಿಮರ್ಶೆಯನ್ನು ನನ್ನಿಂದಲೇ ಕೇಳುತ್ತದೆ. ಆದರೆ ಕೇಳಿದ ಹೊಣೆಯು ನಿಮ್ಮದಿರುವದರಿಂದ ಹೇಳಲು ನಾನು ಹಿಂಜರಿಯುವದಿಲ್ಲ. ನನ್ನ ವಿಮರ್ಶೆಯು ಮೇಲೆ ಹೇಳಿದ ಜೀವನ-

ದೃಷ್ಟಿಯ ನಿರೂಪಣೆಯನ್ನು ಸಾಹಿತ್ಯದಲ್ಲಿ ಎತ್ತಿ ಹಿಡಿಯುತ್ತದೆ. ಆ ದೃಷ್ಟಿಯ ಸಮಗ್ರತೆಯೇ ಆ ವಿಮರ್ಶೆಗೆ ದೊರೆತಿರಬಹುದಾದ ಸ್ವಾಗತಕ್ಕೆ ಕಾರಣ-ವಾಗಿದೆ. ಇಂಥ ಜೀವನದೃಷ್ಟಿಯನ್ನು ಕೊನರಿಸುವದೇ ಸಾಹಿತ್ಯದ ಕಾರ್ಯ; ಈ ಕಾರ್ಯವನ್ನು ಸಾಹಿತ್ಯವು ಹೇಗೆ, ಎಷ್ಟರಮಟ್ಟಿಗೆ ಮಾಡುವದು,ಮಾಡಿದೆ, ಆ ದೃಷ್ಟಿಯ ಬಗೆ ಯಾವುದು; ಇವೆ ಮೊದಲಾದ ಪ್ರಶ್ನೆಗಳನ್ನು ಆ ವಿಮ-ರ್ಶೆಯು ಎತ್ತಿ ವಿವರಿಸಿದೆ. 'ವಿಮರ್ಶಕ ವೈದ್ಯ' ದಲ್ಲಿ ಇದೇ ಕ್ರಿಯೆಯನ್ನು ನಾಟಕರೂಪದಲ್ಲಿ ಕಾಣಬಹುದು.

'ಸಮುದ್ರದಾಚೆಯಿಂದ' ಹಾಗು 'ಇಂದಿನ ಕರ್ನಾಟಕ' ದಲ್ಲಿಯ ಗದ್ಯದಲ್ಲಿ ಸಮಾಜದ ವಿವಿಧ ರೂಪಗಳನ್ನು ನಾನು ಹಿಡಿದ ಮಾನದಂಡದಿಂದ ಅಳೆದಿದ್ದೇನೆ. ಸಮಾಜದ ನರಕ-ಸ್ವರ್ಗಗಳನ್ನು ಎತ್ತಿ ತೋರಿಸುವ ಮಾನ-ವೀಯ ದೃಷ್ಟಿ 'ಇಜ್ಜೋಡಿ'ನಲ್ಲಿ ರೂಪಗೊಳ್ಳುತ್ತಿದೆ. ಇನ್ನೊಂದು ರಾಜ-ಕೀಯ-ಸಾಮಾಜಿಕ ಸಮಸ್ಯೆಯನ್ನು **ಜನನಾಯಕವು** ಬಿಚ್ಚಿ ತೋರಿಸುತ್ತದೆ.

'ಚೆಲುವಿನ ನಿಲುವು' ('ರಸನಿಮಿಷಗಳು' ಎಂದು **ಜೀವನದಲ್ಲಿ** ಅಚ್ಚಾಯಿತು) ನನ್ನ ಕಾವ್ಯದೃಷ್ಟಿಯ ಪ್ರಾದುರ್ಭಾವದ-ಅದನ್ನು ಎಚ್ಚರಿಸಿದ ಅರ್ಥಪೂರ್ಣ ಸನ್ನಿವೇಶಗಳ–ಕಥನವಾಗಿದೆ. ಇದು ನನ್ನ ಪದ್ಯಕಾವ್ಯಕ್ಕ ಪೀಠಿಕೆಯಿದ್ದಂತೆ; ಬೆಳೆಯಬಹುದಾದ ಜೀವನದ ಉಪೋದ್ಘಾತವಿದ್ದಂತೆ.

'ಆಕಾಶಗಂಗೆ'ಯು 'ಚೆಲುವಿನ ನಿಲುವಿ'ನ ಹೊಂಚನ್ನೇ ಇನ್ನೊಂದು ನಿಲುವಿನಲ್ಲಿ ಸಾಧಿಸುವ ಚಂಪೂಕಾವ್ಯ. **ಪಯಣ, ಕಲೋಪಾಸಕ, ಅಭ್ಯುದಯ, ಸಮುದ್ರ ಗೀತಗಳು,**- ಈ ನಾಲ್ಕು ಕವನಸಂಗ್ರಹಗಳಲ್ಲಿ ವ್ಯಕ್ತಿತ್ವದ ಬೇರೆ ಬೇರೆ ಪಾಂಗುಗಳೂ ಭಾವನಾಲಹರಿಗಳೂ ಅಭಿವ್ಯಕ್ತಿ-ಯನ್ನು ಪಡೆದಿವೆ.

ಈ ಕೃತಿಗಳಲ್ಲಿ ನಾವೀನ್ಯವು ಸಹಜವಾಗಿ ನೆಲೆಸಿದ ಗುಣವೆಂದು ಕಾಣು-ತ್ತದೆ. ಪ್ರತಿಯೊಂದು ವ್ಯಕ್ತಿತ್ವವೂ ನವೀನವಾದುದು. ಆದರೆ ಸಾಹಿತ್ಯರೂಪದ ನಾವೀನ್ಯವೊಂದಿದೆ. ವ್ಯಕ್ತಿತ್ವದ ಸುತ್ತಲು ಕೃತಿಯು ಬೆಳೆದು ಬಂದಾಗ ಇದು ತಾನಾಗಿಯೇ ಪ್ರಕಟವಾಗುವದು. ಕಾಲಮಹಿಮೆಯೂ ವ್ಯಕ್ತಿತ್ವದ ವಿಶೇಷವೂ ಕೂಡಿಯೇ ಇದರ ಸ್ವರೂಪವನ್ನು ನಿರ್ಣಯಿಸುವವು. ವಿಮರ್ಶೆಯ ತತ್ವಗಳ ಸಮಾಲೋಚನೆಯನ್ನೂ ವಿಶಿಷ್ಟ ಕೃತಿಗಳ ಪರಿಶೀಲನವನ್ನೂ ಕೂಡಿಯೇ ಒಳಗೊಂಡ ನನ್ನ ವಿಮರ್ಶೆಯಲ್ಲಿ ಜನತೆಯು ಒಂದು ಹೊಸತನವನ್ನು

ಕಂಡಿತು. ನನಗೆ ತಿಳಿದಮಟ್ಟಿಗೆ **ಇಜ್ಜೋಡು** ಉತ್ತರ ಕರ್ನಾಟಕದ ಬಳ-ಕೆಯ ಮಾತನ್ನು ಮೊದಲು ಕಾದಂಬರಿಯಲ್ಲಿ ತಂದಿತು. **ಸಮುದ್ರದಾಚೆಯಿಂದ, ಇಂದಿನ ಕರ್ನಾಟಕ, ಚೆಲುವಿನ ನಿಲುವು**,-ಇವು ಹೊಸ ಬಗೆಯ ಬರವಣಿಗೆಗಳಾದವು. **ಆಕಾಶಗಂಗೆಯು** ಒಂದು ನವೀನ ಜಾತಿಯ ಚಂಪೂಕಾವ್ಯ. **ಪಯಣ-ಕಲೋಪಾಸಕ-ಅಭ್ಯುದಯಗಳಲ್ಲಿ** ಒಂದು ವಿಶಿಷ್ಟ ಸೂಕ್ಷ್ಮ-ವಿಶಾಲ ದೃಷ್ಟಿಯೂ ಬಂಧ ಇಲ್ಲವೆ ಛಂದದ ನವೀನತೆಯೂ ಕಂಡುಬರುತ್ತವೆ. 'ಸಮುದ್ರಗೀತ'ಗಳ ವಸ್ತುವೂ ಛಂದವೂ ನವೀನವಾಗಿವೆ. ನವೀನತೆಯು ಸಹಜವು ಹೇಗೆಂಬುದಕ್ಕೆ ಒಂದೇ ಒಂದು ಉದಾಹರಣೆಯನ್ನು ಕೊಡುತ್ತೇನೆ. ಹಡಗದ ಮೇಲಿದ್ದಾಗ ಅದರ ಯಂತ್ರದ ಆರ್ಭಟದಲ್ಲಿ ಮನಸ್ಸಿನಲ್ಲಿ ಯಾವ ತಾನವನ್ನೂ (Tune) ಹಿಡಿಯುವದಾಗುತ್ತಿರಲಿಲ್ಲ. ಅದನ್ನೂ ಆ ಯಂತ್ರವು ಛೇದಿಸಿಬಿಡುತ್ತಿತ್ತು. ಆದರೆ ಭಾವನೆಯ ಆವೇಶ ಆಗ ತುಂಬಿ ತುಳುಕುತ್ತಿತ್ತು. ಆಗ ಬರೆಯದೆ ಇರುವುದು ಸಾಧ್ಯವಿರಲಿಲ್ಲ. ಆಗ ತಾನಾ-ಗಿಯೇ ನನ್ನಲ್ಲಿ ಹುಟ್ಟಿ ಬಂತು,-ಸ್ವಚ್ಛಂದ ಛಂದ. ಅದೇ ನೇಪಲ್ಸ್ ಬಂದರ-ದಲ್ಲಿ **ಇಳಿದು ತಿರುಗಾಡಿ** ಅಲ್ಲಿಯ ಮೂರ್ತಿ ಸಂಗ್ರಹಾಲಯವನ್ನು ನೋಡಿ-ದಾಗ **ವಾರ್ಧಕ ಷಟ್ಪದಿಯಲ್ಲಿ** ನಾನು ಒಂದು ಕವನವನ್ನು ಕಟ್ಟಿದೆ !

ಇಲ್ಲಿಯ ವರೆಗೆ ಹೆಸರು ತೆಗೆದುಕೊಂಡ ಕೃತಿಗಳಲ್ಲಿ ಆಂತರಿಕತೆಯೂ ಬಹಿರ್ಮುಖತೆಯೂ ಕೆಲವು ಮಟ್ಟಿಗೆ ಬೇರೆಬೇರೆಯಾಗಿ ಪ್ರಕಟವಾಗಿವೆ. 'ಕಲೋಪಾಸಕ'ವು ಬಹ್ವಂಶದಲ್ಲಿ ಅಂತರ್ಮುಖವಾಗಿದ್ದರೆ 'ಅಭ್ಯುದಯ' ಇಲ್ಲವೆ 'ಇಜ್ಜೋಡಿ'ನ ಮೊದಲಿನ ಎರಡು ಭಾಗಗಳು ವಿಶೇಷವಾಗಿ ಬಹಿ-ರ್ಮುಖ ಇಲ್ಲವೆ ಸಾಮಾಜಿಕವಾಗಿವೆ. 'ಇಜ್ಜೋಡಿ'ನ ಮೊದಲನೆಯ ಭಾಗವನ್ನು ಓದಿದ ಒಬ್ಬ ಪ್ರಾಥಮಿಕ ಶಾಲೆಯ ಶಿಕ್ಷಕರು ಭುಜಂಗರಾಯರದ್ದು ನಿಮ್ಮ ಲೇಖಕರಿಗೇನು ಗೊತ್ತು ? ಎಂದು ಜಿ. ಬಿ. ಜೋಶಿಯವರಿಗೆ ಕೇಳಿದ-ರಂತೆ! ಅದೇ ಸ್ವಭಾವದ, ಅದೇ ಹೆಸರಿನ ಸೇವಾನಿವೃತ್ತ ವಿದ್ಯಾಧಿಕಾರಿಗಳಿರ-ಬಹುದೆಂದು ನಾನು ಕನಸು-ಮನಸಿನಲ್ಲಿಯೂ ಎಣಿಸಿರಲಿಲ್ಲ. ಅಂತರ್ಮುಖತೆ ವಿಶೇಷವಾಗಿ ಪ್ರಕಟವಾಗುವ ನನ್ನ ಕೃತಿಗಳಿಂದ 'ವರುಣಕುಂಜ'ದ ಕೆಲವು ಎಳೆಯರು ಒಂದು ಹೊಸ ಅನುಭವದ ದಾರಿಯನ್ನು ಹಿಡಿದರು.

ಆದರೆ ವ್ಯಕ್ತಿತ್ವವು ಅನೇಕ ಮುಖವಾಗಿದ್ದರೂ ಅದರಲ್ಲಿ ಸಹಜಸಿದ್ಧ-ವಾದ ಸಮನ್ವಯವಿರಬೇಕು. ಆಗ ಸಾಹಿತ್ಯಕೃತಿಗೆ ಪೂರ್ಣತೆ ಬರುತ್ತದೆ.

ಕೆಲವು ವರ್ಷಗಳಿಂದ ಈ ಸಮನ್ವಯವು ನನ್ನಲ್ಲಿ ಸಿದ್ಧವಾಗಹತ್ತಿದೆಯೆಂದು ನನಗೆನಿಸಿದೆ. 'ಬಾಳದೇಗುಲದಲ್ಲಿ' ಎಂಬ ನನ್ನ ಸಂಗ್ರಹವು ಪೂರ್ಣವಾಗಿ, ಪುಸ್ತಕರೂಪವಾಗಿ ಪ್ರಕಟವಾದಾಗ ಅದರಲ್ಲಿ ಈ ಸಮನ್ವಯವು ರಸಿಕರಿಗೆ ಕಾಣಬಹುದು. ಬೇರೆ ಬೇರೆ ಪ್ರಾಂತಗಳ ಸಾಹಿತಿಗಳೊಡನೆ ಅದರ ವಿಷಯ-ವನ್ನು ಪರಿಶೀಲಿಸಿದಾಗ ಅವರೂ ಅದರ ಸಮನ್ವಯತೆ-ನವೀನತೆಗಳನ್ನು ಒಪ್ಪಿಕೊಂಡಿದ್ದಾರೆ. ಇದು ಕವನಸಂಗ್ರಹವಲ್ಲ, ಕವನಮಂದಿರ. ಮಹಾಕಾವ್ಯ (epic; ಕಾವ್ಯದ ಒಂದು ಪ್ರಕಾರ; great poetry ಯನ್ನು ಮಹೋನ್ನತ ಕಾವ್ಯವೆಂದು ಹೇಳಬಹುದು ) ಇಂದಿನ ಯುಗದಲ್ಲಿ ಕಾದಂಬರಿಯಾಗಿ ಇಲ್ಲವೆ ಕವನಮಂದಿರವಾಗಿ ಸಾಧಿಸಬಹುದೆಂದು ನನಗೆನಿಸುತ್ತದೆ.

'ಇಜ್ಜೋಡು' ಈಗ ಹದಿನೈದು ವರ್ಷಗಳಿಂದ ಬೆಳೆಯುತ್ತ ಬಂದಿದೆ. ಒಂದು ಸಾಮಾಜಿಕ ಕಾದಂಬರಿಯೆಂದು ಪ್ರಸಿದ್ಧವಾಗ ಈ ಕೃತಿಯು–ಅದರ ಎಲ್ಲ ಭಾಗಗಳು ಮುಗಿದಾಗ–ಈ ಸಮನ್ವಯದ ಇನ್ನೊಂದು ಉದಾಹರಣೆ ಆಗುವದೆಂದು ನನಗೆ ಕಾಣುತ್ತದೆ. ಅದರ ಈಗಿನ ಗಾತ್ರಕ್ಕೆ ಹೆಸರು ಸಣ್ಣ-ದಾಗಿದೆ. ಅದರ ಹೊಸ ಹುಟ್ಟು ಹೊಸ ಹೆಸರಿಗಾಗಿ ಕಾಯುತ್ತಿದೆ. ಈ ವರ್ಷದಲ್ಲಿ ಇದನ್ನು ಮುಗಿಸಬೇಕೆಂದಿದ್ದೇನೆ.

ಈ ಸಮನ್ವಯದ ಇನ್ನೊಂದು ಉದಾಹರಣೆಯೆಂದು ನನಗೆ ತೋರುವದೆಂದರೆ ಇನ್ನೂ ಮುದ್ರಿತವಾಗದ–'ಯುಗಾಂತರ' ಎಂಬ ನಾಟಕ. ಮೂಡಣ–ಪಡುವಣಗಳ ಸಂಸ್ಕೃತಿ, ಆಂತರಿಕತೆ–ಸಾಮಾಜಿಕತೆಗಳ ಸಂಘ-ರ್ಷಣ-ಸಾಮರಸ್ಯದಿಂದ ಹುಟ್ಟಿದ ಕೃತಿ ಇದು. ಅಂತೇ ಬರಲಿರುವ ಯುಗದ ಪೂರ್ವಚಿನ್ಹಗಳಲ್ಲಿ ಒಂದು.

ಸುತ್ತಲಿನ ಸೃಷ್ಟಿಯ ರಾಮಣೀಯಕತೆ-ರಹಸ್ಯಗಳು ಮೊದಲಿಗೆ ನನ್ನನ್ನು ಮಂಜಾಗಿ ಕವಿದವು. ಜೊತೆಗೆ ಸಾಹಿತ್ಯದ ಸಂಸ್ಕಾರದಿಂದ ಆಂತರಿ-ಕತೆ ತಲೆದೋರಿತು; ತಿಳುವಳಿಕೆ ಬೆಳೆಯಲು ಸಾಮಾಜಿಕತೆಯೂ ಜಾಗೃತ ವಾಯಿತು. ಮುಂದೆ ಆಂತರಿಕತೆಯೇ ಕೆಲವು ಕಾಲ ಮೇಲುಗೈಯಾಯಿತು. ಆಮೇಲೆ ಒಂದು ಹೊಸ ಸಂಸ್ಕೃತಿಯ ಸಂಪರ್ಕದಿಂದ ಸಾಮಾಜಿಕ ಪ್ರಜ್ಞೆ ಕ್ರಾಂತಿಯುತವಾಯಿತು. ಕೆಲವೊಂದು ಕವಿತೆಗಳಲ್ಲಿ–ಗದ್ಯದ ಕೆಲವೊಂದು ಭಾಗದಲ್ಲಿ–ಮೊದಲಿನಿಂದ ಈ ಸಮನ್ವಯವು ಕಾಣಿಸಿಕೊಂಡಿದೆ. ಈ ಮೂರು

ಕೃತಿಗಳಲ್ಲಿ ಅದು ಮೂರ್ತಿಮಂತವಾಗಿದೆ, ಪೂರ್ಣವೆಂದೆನಿಸುವ ಸೃಷ್ಟಿಯಾಗಿದೆ ಎಂದೆನಿಸುತ್ತದೆ.

ಈ ಸಮನ್ವಯವಾದ ಮೇಲೆ ಮುಂದೇನು ? ಸಮ್ಯಕ್ತರವಾದ ಸಮನ್ವಯ. ಮತ್ತೇನಿರಬಹುದು ? ನಾವು ನಿಂತ ಸ್ಥಳ ಎತ್ತರವಾದಂತೆ ದೃಷ್ಟಿಯ ವಿಶಾಲತೆ ಬೆಳೆಯುತ್ತದೆ. ನಮ್ಮ ದರ್ಶನದಲ್ಲಿ ತೇಜವು ಹೆಚ್ಚಾದ ಹಾಗೆ ಅದು ಸೂಕ್ಷ್ಮತರವಾಗುತ್ತದೆ. ಇಂದು ಎದುರಿಸಿದ ಸಮಸ್ಯೆಗಳನ್ನೇ ಇದಕ್ಕೂ ಹೆಚ್ಚು ಸಮಾಧಾನಕರವಾಗಿ ಆಗ ಎದುರಿಸಬಹುದು. ಅಂಥ ದೃಷ್ಟಿಯನ್ನು ಒಳಗೊಂಡ ಕೃತಿಗಳಿಂದ ಸಾಹಿತ್ಯವು ಕೊಡಬಲ್ಲ ಜ್ಞಾನ-ಶಕ್ತಿ-ಆನಂದಗಳು ಪಾವನತರವಾಗುತ್ತವೆ, ಪೂರ್ಣವಾಗುತ್ತವೆ.

ನನ್ನ ಸಾಹಿತ್ಯದ ಕ್ರಿಯೆ-ಪ್ರತಿಕ್ರಿಯೆಗಳ ಬಗ್ಗೆ ನಾನು ಹೆಚ್ಚಿಗೆ ಹೇಳಬೇಕಾಗಿಲ್ಲ. ಕಣ್ಣುಮುಚ್ಚಿ ಕೂಡುವ ಕನಸಿಗನೆಂದು ಕೆಲವರು ಕಿಡಿಗಣ್ಣಿನಿಂದ ನೋಡಿದ್ದಾರೆ. 'ಕಲೋಪಾಸಕ'ವನ್ನು ಒರೆದವರು 'ತುಳಸಿ'ಯಂತಹ ದೃಶ್ಯವನ್ನು ಬರೆಯಬಹುದೆ ? ಎಂದು ಬೇರೆ ಕೆಲವರು ಖೇದಗೊಂಡಿದ್ದಾರೆ. ಆದರೆ ಇದರ ಹಿಂದಿರುವ ಸಮನ್ವಯವನ್ನಾಗಲಿ ವ್ಯಕ್ತಿತ್ವವನ್ನಾಗಲಿ ಕಂಡುಕೊಂಡವರು ತೀರ ಕಡಿಮೆ. ಅಲ್ಲಲ್ಲಿ ಕಂಡು ಬರುವ ಸಹೃದಯರೂ, ಎಳೆಯರೂ, ಸಾಹಿತಿಗಳೂ,—ಇವರನ್ನು ಬಿಟ್ಟರೆ ಇಂದಿನ ಕನ್ನಡ ಸಾಹಿತ್ಯದ ತೀರ ಸುಲಭ ಭಾಗಗಳನ್ನು ಮಾತ್ರ ಜನತೆ ಗ್ರಹಿಸಿದೆ. 'ಇಂಗ್ಲಿಷ ಗೀತ'ಗಳು ಜನಮನವನ್ನು ಹಿಡಿದಿವೆ. ಆದರೆ 'ಶುಕ್ರಗೀತ'ವನ್ನು ಎಷ್ಟು ಜನ ತಿಳಿದಿದ್ದಾರೆ ? 'ಬೇಲೂರ ಶಿಲಾಬಾಲಿಕೆ'ಯರನ್ನು ಅನೇಕರು ಬಲ್ಲರು, ಆದರೆ 'ಮಂಕು ತಿಮ್ಮನ ಕಗ್ಗ'ವನ್ನು ಓದಿದವರೆಷ್ಟು ಮಂದಿ ? ಗೋವಿಂದ ಪೈ ಅವರ 'ನಂದಾದೀಪ'-'ಗೋಲ್ಗಾಥಾ' ಎಷ್ಟು ಜನರ ಕಣ್ಣಿಗೆ ಬಿದ್ದಿವೆ ? ಬೇಂದ್ರೆಯವರ ಜಾನಪದಧಾಟಿ-ಬಳಕೆಮಾತುಗಳನ್ನೂ ಪ್ರೇಮಗೀತ-ರಾಷ್ಟ್ರಗೀತಗಳನ್ನೂ ಜನತೆಯು ತಿಳಿದಿದೆ. ಆದರೆ ಅವರ ಕಾವ್ಯದಲ್ಲಿ ಮೂಡಿದ ಸಮಗ್ರ ವ್ಯಕ್ತಿತ್ವವನ್ನು ಬಲ್ಲವರೆಷ್ಟು ಜನ ?

ಹೀಗಾಗಿ ಇಂದಿನ ಸಾಹಿತ್ಯ ಇನ್ನೂ ಜನಮನದಲ್ಲಿ ಇಂಗಿಲ್ಲ. ಅದಕ್ಕೆ ಇನ್ನೂ ಕಾಲು ಶತಮಾನವಾದರೂ ಬೇಕು. ನನ್ನ ಕೃತಿಗಳು ಇದಕ್ಕೂ ಹೆಚ್ಚುಕಾಲ ಕಾಯಬೇಕಾಗಬಹುದು. ನನ್ನ ಕಾವ್ಯದ ವಸ್ತು ಕೆಲವು ಮಟ್ಟಿಗೆ ಹೊಸತು; ನಿರೂಪಣಾ ಪದ್ಧತಿಯು ಅದರಷ್ಟೇ ಬಹ್ವಂಶದಲ್ಲಿ ಅಪರಿಚಿತ-

ವಾದದ್ದು. ಈ ಕಾವ್ಯದಲ್ಲಿ ಬರಿ ನವರಸದ ಪುನರಾವೃತ್ತಿಯಿಲ್ಲ. ಹೊಸ ದೃಷ್ಟಿಯಿಂದ ಆ ರಸಗಳನ್ನು ನೋಡಿದಾಗ ಅವು ಹೊಂದಿದ ಮಾರ್ಪಾಟಿದೆ. ನಿರೂಪಣೆಯಲ್ಲಿ ಈ ಮಾರ್ಪಾಟಿನ ಫಲಿತಾಂಶವನ್ನು 'ದೇಸಿ'ಗಾಗಲಿ'ಮಾರ್ಗ'ಕ್ಕಾಗಲಿ ಹೊಂದಿಸುವ ಯತ್ನವು ಅಷ್ಟೊಂದಿಲ್ಲ; ಪ್ರತಿಯಾಗಿ ಮಾರ್ಪಾಟಿನ ಒಡನೆ ಅದರ ವಿಧಾನವನ್ನೂ ಸಹ ಕಾವ್ಯವಸ್ತುವಾಗಿಸುವ ಹವಣಿಕೆಯಿದೆ. ಹೀಗಾಗಿ 'ಕಲೋಪಾಸಕ'ವು ಪ್ರಕಟವಾದಾಗ ಅದನ್ನು ಕುರಿತು ಮಂಗಳೂರಿನ ಶ್ರೀ ನಾರಾಯಣಭಟ್ಟರು ಮಾತಾಡಿರಬಹುದು. 'ಸಮುದ್ರಗೀತಗಳು' ಪ್ರಕಾಶಿತವಾದಾಗ ಒಬ್ಬ ವಿ ಸೀ. ಅವರು ಅದರ ಮೇಲೆ ಭಾಷಣ ಮಾಡಿರಬಹುದು. ಆದರೆ ಒಟ್ಟಿನಲ್ಲಿ ಇವುಗಳ ನಿಷ್ಕರ್ಷೆ ಇನ್ನೂ ಆಗಬೇಕಾಗಿದೆ. ಅವುಗಳಿಂದ ಬರಬಹುದಾದ ಜ್ಞಾನ-ಶಕ್ತಿ-ಆನಂದಗಳ ತೂಕವನ್ನು ಇನ್ನೂ ಮಾಡಬೇಕಾಗಿದೆ.

ನನ್ನ ಸಾಹಿತ್ಯರಚನೆಗೆ ಅನುಕೂಲ ಸಂಗತಿಗಳೆಂದರೆ ಇವು: (೧) ಎಲ್ಲ ಸಾಹಿತಿಗಳನ್ನೂ ಪ್ರೇರಿಸಬಲ್ಲ ಇಂದಿನ ಯುಗದ ಪ್ರಭಾವ-ತೇಜಸ್ಸುಗಳು. (೨) ನನ್ನ ಪೀಳಿಗೆಗಿಂತ ಹಿರಿಯರಾದ ಸಾಹಿತಿಗಳು ಕನ್ನಡದಲ್ಲಿ ಮಾಡಿದ ಕಾರ್ಯ. ಇದರಿಂದ ಸಾಹಿತ್ಯದ ಎಲ್ಲ ಅಂಗಗಳಲ್ಲಿ ಅನುಪಮವಾದ ಸಹಾಯ ದೊರಕಿತು. (೩) ನಮ್ಮ ಪ್ರಾಂತದ ಹಾಗು ಉಳಿದ ಪ್ರಾಂತಗಳ ಸಾಹಿತಿಗಳೊಡನೆ ಬಂದ ಸಂಬಂಧ; ಅವರ ಸಹೃದಯತೆ-ವಿಮರ್ಶೆಗಳ ಅನುಭವ. (೪) ಬೇರೆ ಬೇರೆ ಪ್ರಾಂತಗಳಲ್ಲಿ ಇರುವ ಪ್ರಸಂಗ ಬಂದಿದ್ದರಿಂದ ಸಹಜವಾಗಿ ಬರುವ ದೃಷ್ಟಿವೈಶಾಲ್ಯ. (೫) ಈ ಯುಗವು ಮುಖ್ಯವಾಗಿ ಸಾಧಿಸಬೇಕಾದ ಮೂಡಣ-ಪಡುವಣ ಸಂಸ್ಕೃತಿಗಳ ಸಮನ್ವಯದಲ್ಲಿ ದೇಶದ ಹಿರಿಯರು ಮಾಡಿದ, ಮಾಡುತ್ತಿರುವ ಕಾರ್ಯ. (೬) ಕನ್ನಡ ನಾಡಿನ ಹಾಗು ಸಾಹಿತ್ಯದ ಉಜ್ವಲ ಪರಂಪರೆ. (೭) ನಾಡ ಎಳೆಯರಲ್ಲಿ ಕಂಡುಬರುವ ಸೌಹಾರ್ದಶೀಲುವಳಿಕೆಗಳು.

ಸಾಹಿತ್ಯರಚನೆಗೆ ಪ್ರತಿಕೂಲವಾದ ಸಂಗತಿಗಳೇ ಇಲ್ಲವೆಂದು ಹೇಳಬಹುದು. ಏಕಂದರೆ ಎಲ್ಲ ಸಂಗತಿಗಳೂ ಸಾಹಿತಿಯ ದೃಷ್ಟಿಯನ್ನು ಪೋಷಿಸಬಲ್ಲವು. ಆದರೂ ರಚಿತವಾದ ಸಾಹಿತ್ಯದ ಪ್ರತಿಕ್ರಿಯೆಯ ದೃಷ್ಟಿಯಿಂದ ಕೆಲವು ಮಾತುಗಳನ್ನು ಇಲ್ಲಿ ವಿವರಿಸಬಹುದು: (೧) ಶೈಲಿಯ ಪಾಕು ಇಂದು ಪೂರ್ವದ ಹಳಗನ್ನಡವನ್ನು ಹಿಡಿದು ಗ್ರಾಮ್ಯ ಭಾಷೆಯ ವರೆಗೆ

ಭಾಷೆಯ ಎಲ್ಲ ರೂಪಗಳೂ ಸಾಹಿತ್ಯದಲ್ಲಿ-ಕಾವ್ಯದಲ್ಲಿ-ಬಳಕೆಯಾಗುತ್ತಿವೆ. ಇಂಥ ಸಮಯದಲ್ಲಿ ತನ್ನ ಭಾವನೆಗೆ ತಕ್ಕುದಾದ ಶೈಲಿಯನ್ನು ಸಿದ್ಧಗೊಳಿಸಲು ಕವಿಗೆ ವಿಲಂಬವಾಗುತ್ತದೆ. ಆದರೆ ಹೀಗೆ ಸಿದ್ಧಗೊಳಿಸುವದರಲ್ಲಿಯೂ ಒಂದು ಆನಂದವಿದೆ. (೨) ವಿಧಾಯಕ ಕಾರ್ಯ ಹಾಗು ಸಾಹಿತ್ಯೋಪಾಸನೆ,-ಇವುಗಳ ತಾಕಲಾಟ. ಆದರೆ ಯಾರಿಗೆ ಗೊತ್ತು ? ವಿಧಾಯಕ ಕಾರ್ಯದ ಅನುಭವದಿಂದ ಸತ್ವವು ಮಾಗುತ್ತ ನಡೆದರೆ? (೩) ಪ್ರಕಾಶನ ಕಾರ್ಯದಲ್ಲಿಯ ಅನನುಕೂಲಗಳು. ಬರೆದದ್ದು ಬರೆದಲ್ಲಿಯೇ ಕುಳಿತಾಗ ನವೀನ ರಚನೆಗೆ ಪ್ರೋತ್ಸಾಹ ಬರುವದಿಲ್ಲ. (೪) ಇಂದಿನ ನಮ್ಮ ದೇಶ-ಪ್ರಾಂತಗಳಲ್ಲಿನ ವಿಭಕ್ತ ಜೀವನ. (೫) ಕನ್ನಡದಲ್ಲಿ ಬರುತ್ತಿರುವ ಹದಗೆಟ್ಟ ವಿಮರ್ಶೆ. ದೇಶದ ರಾಜಕಾರಣದಲ್ಲಿ ಜಾತೀಯತೆಯಂತೆ ಇದು ಇಂದಿನ ಕನ್ನಡ ಸಾಹಿತ್ಯರಂಗದಲ್ಲಿ ವಿಘಾತುಕವಾಗಿದೆ. ಈ ವಿಮರ್ಶೆಯ ಅವತಾರಗಳು ವಿವಿಧವಾಗಿವೆ. ಗುಣದ ಇಲ್ಲವೆ ದೋಷದ ಒಂದು ಚುಂಗನ್ನು ಹಿಡಿದು ಆನೆಯ ಬಾಲವೇ ಆನೆಯೆಂದು ಪ್ರಸ್ತಾಪಿಸುವ ಗಜರಗಳೆಯ ವಿಮರ್ಶೆ; ತನ್ನ ಮಲ್ಲಿನಾಥಿಕೆಯಿಂದ ಸತ್ಯಾಭಾಸವನ್ನು ಹುಟ್ಟಿಸಿ ಅದನ್ನೇ ಸತ್ಯವೆಂದು ಸಾಧಿಸಿ ಸತ್ಯವೆಂದು ಕಾಣುವ ಆ ಆಭಾಸದ ಮೇಲೆ ಸಾಹಿತಿಯನ್ನು ಇಲ್ಲವೆ ಕವಿಯನ್ನು ಶೂಲಕ್ಕೇರಿಸುವ ಆಭಾಸವಿಮರ್ಶೆ; ಕವಿಯ ನಂಬಿಕೆ-ಶ್ರದ್ಧೆಗಳೇನೇ ಇರಲಿ, ಅವು ಎಷ್ಟರಮಟ್ಟಿಗೆ ಕಾವ್ಯವಾಗಿವೆಯೆಂಬುವನ್ನು ನೋಡುವದನ್ನು ಬಿಟ್ಟು ಆ ನಂಬಿಕೆ-ಶ್ರದ್ಧೆಗಳೊಡನೆ ವಿಮರ್ಶಕನ ಶ್ರದ್ಧೆ ತಾಕಲಾಡಿದರೆ ಆ ನಂಬಿಕೆ-ಶ್ರದ್ಧೆಗಳನ್ನೊಳಗೊಂಡ ಕಾವ್ಯವನ್ನೇ ಶಪಿಸುವ ಕುರುಡು ವಿಮರ್ಶೆ; ನೀತಿಗೆ ಪಟ್ಟಗಟ್ಟಿ ಕಾವ್ಯವು ತನ್ನ ಪರಿಣಾಮದಲ್ಲಿ ಹೇಗೆ ಕಲ್ಯಾಣಕರವಾಗಬಲ್ಲದೆಂಬುದನ್ನು ಮರೆತು ನೀತಿಪಾಠವನ್ನು ಕಲಿಸಬಯಸುವ 'ಸಂಪನ್ನ' ವಿಮರ್ಶೆ; ಕಾವ್ಯದ ಆತ್ಮವನ್ನು ಮರೆತು ದೇಹರಚನೆಯನ್ನು ಮಾತ್ರ ಅವಲೋಕಿಸುವ ಚಾರ್ವಾಕ ವಿಮರ್ಶೆ; ಕಾವ್ಯದ ಆತ್ಮವನ್ನು ನೆನೆದು ದೇಹವನ್ನೇ ಮರೆಯುವ ಶೂನ್ಯ ವಿಮರ್ಶೆ; ಒಂದು ಪದ್ಯದಿಂದ ಅದನ್ನೊಳಗೊಂಡ ಕೃತಿಯನ್ನೇ ಅಳೆಯಲು ನಡೆದ ಮಾರುಗೈ ವಿಮರ್ಶೆ; ಒಂದು ಕೃತಿಯಿಂದ ಒಬ್ಬ ಸಾಹಿತಿಯನ್ನೇ ತೂಗಲು ನಡೆದ ಒಗ್ಗಾಲಿ ವಿಮರ್ಶೆ; ಅಂಶದಿಂದ 'ಇಡಿ'ಯನ್ನೇ ಅಲ್ಲಗಳೆಯುವ ಧ್ವಂಸ ವಿಮರ್ಶೆ; ಒಂದು ಕೃತಿಯ ತಿರುಳನ್ನು ತಿಳಿಯದೆ ಅಪಾರ್ಥವನ್ನು ಕಲ್ಪಿಸಿ ಹರಿಹಾಯುವ ಮರುಳು ವಿಮರ್ಶೆ; ಒಬ್ಬ

ವ್ಯಕ್ತಿಯನ್ನು ಇಲ್ಲವೆ ಒಂದು ವಿಚಾರವನ್ನು ಪೂರ್ವಗ್ರಹವಿದ್ದು ಕಣ್ಣಿನ ಹಿಮ್ಮಗ್ಗಲಿಂದ ನೋಡುವ ವಿಮರ್ಶೆ. ಈ ವಿಮರ್ಶಾವಿಚಾರಗಳಿಂದ ರಾಜಕೀಯರಂಗದಲ್ಲಿಯಂತೆ ಸಾಹಿತ್ಯರಂಗದಲ್ಲಿಯೂ ಕೆಂಧೂಳಿಯೆದ್ದಿದೆ.

ಆದರೆ ಇದರಿಂದ ಕೆಚ್ಚಿನ ಸಾಹಿತಿಯು ಕೂದಲೆಳೆಯೂ ಕೊಂಕಲಾರದು. ಇಂಥ ವಿಮರ್ಶೆಗೆ ಅವನ ಉಪಾಯವೆಂದರೆ,—ದುರ್ಲಕ್ಷ್ಯ. ಒಂದೇ ಒಂದು ಮದ್ದೆಂದರೆ,—ಉದಾತ್ತ ಉದಾಸೀನತೆ. ಯೋಗ್ಯವಾದ ಗುಣದೋಷ-ವಿಮರ್ಶೆಯನ್ನು ಗ್ರಹಿಸದಿದ್ದರೆ ಸಾಹಿತಿಯು ಹೇಗೆ ಪ್ರತಿಗಾಮಿಯಾಗುವನೋ ಹಾಗೆಯೇ ಮೇಲೆ ಹೇಳಿದ ವಿಮರ್ಶೆಗಳಿಗೆ ಉತ್ತರಕೊಡಲು ಹವಣಿಸಿದರೆ ತನ್ನ ಆಯುಷ್ಯವನ್ನು ವ್ಯರ್ಥವಾಗಿ ಹಾಳುಮಾಡಿಕೊಳ್ಳುವನು. ಅವನು ಬೆಲೆ ಕೊಡುವ ವಿಮರ್ಶಕರ ಅಭಿಪ್ರಾಯ ಅವನಿಗೆ ಎಲ್ಲ ಮನ್ನಣೆಗಿಂತ ಪ್ರಿಯವಾದುದು. ಕಾಲೋಹ್ಯಯಂ ನಿರವಧಿಃ ! ಕನ್ನಡದ ಬಗ್ಗೆ ಇನ್ನೂ 'ವಿಪುಲಾ ಚ ಪೃಥಿವೀ' ಎಂದು ಹೇಳಲು ಬಾರದಿದ್ದರೂ ಅಶಿಕ್ಷಿತವಾಗಿ ನೂರಕ್ಕೆ ತೊಂಬತ್ತರಷ್ಟಿರುವ ಸಮಾಜದ ಅಂಗವಿದೆಯಲ್ಲ? ಅದು ಸುಶಿಕ್ಷಿತವಾದಾಗ ಏನು ಹೇಳುವದೋ ಯಾರಿಗೆ ಗೊತ್ತು?

ನನ್ನ ತಪಸ್ಸಿನ ಫಲಶ್ರುತಿಯೇನೆಂದು ನೀವು ಕೇಳಿದ್ದೀರಿ. ನನ್ನ ಜೀವನವನ್ನು ನಾನು ತಪಸ್ಸೆಂದು ಕರೆಯಲಾರೆನೆಂದು ತೋರುತ್ತದೆ. ಅದು ಏಕಾಗ್ರವಾಗಿ, ಏಕಸೂತ್ರವಾಗಿ ನಡೆದಿರುವದು ನಿಜ. ಅದರ ಹಿಂದೆ ಒಂದು ಸಂಕಲ್ಪವಿರುವದೂ ನಿಜ. ಆದರೆ ಉಚಿತ ಪ್ರಮಾಣದಲ್ಲಿ ಬೇಕಾದ ಪ್ರಯತ್ನಕ್ಕಿಂತ ಅದರಲ್ಲಿ ದೈವಿಕ ಕರುಣೆ ಹೆಚ್ಚಾಗಿದೆ. ನನ್ನ ಜೀವನದ ಫಲಶ್ರುತಿಯ ಬಗ್ಗೆ ಒಡನುಡಿಯಬೇಕಾದರೆ,-ಶ್ರುತಿಯಾಗಿ ಮಾರ್ಪಡುವದೇ ಜೀವನದ ಫಲ. ಶ್ರುತಿಯಾದಾಗ ಕೃತಿಯಾಗಲು ಅದಕ್ಕೆ ತಡ ಹಿಡಿಯುವದಿಲ್ಲ. ಆ ಮಾರ್ಪಾಟಿಗಾಗಿ ನಾನು ಕಾಯುತ್ತೇನೆ.

ವಿ. ಕೃ. ಗೋಕಾಕ

# ಮಾನವತೆಯ ಅರಳಿಕೆ ++ ++ ++

ಬೆಟಗೇರಿ ಬೆಳಗಾಂವಿ ಜಿಲ್ಲೆಯ ಗೋಕಾಕ ತಾಲೂಕಿನ ಒಂದು ಸಾಮಾನ್ಯವಾದ ಹಳ್ಳಿ. ಸುಮಾರು ಒಂದುವರೆ ಸಾವಿರ ಜನವಸತಿಯಿರು-ವುದು. ಜನರೆಲ್ಲ ಹೆಚ್ಚಾಗಿ ಕೃಷಿಯನ್ನೆ ಅವಲಂಬಿಸಿಕೊಂಡಿರುವರು. ಆದುದರಿಂದಲೆ ಅಲ್ಲಿಯ ಪ್ರಾಥಮಿಕ ಶಾಲೆಯಲ್ಲಿ ಒಬ್ಬರಿಗಿಂತ ಹೆಚ್ಚು ಜನ ಶಿಕ್ಷಕರೆ ಇರುವುದಿಲ್ಲ. ಹಿಂದೆ ಅಂಚೆಯ ಆಫೀಸು ಇರಲಿಲ್ಲ. ಇಂದು ಇದೆಯಾದರೂ ಒಂದು ದಿನ ಅಲ್ಲಿಂದ ಹೋಗುವುದು; ಇನ್ನೊಂದು ದಿನ ಹೊರಗಿನಿಂದ ಬರುವುದು. ಜನಸಾಮಾನ್ಯರಲ್ಲಿ ಕನ್ನಡ ಮುಲಕೀಪರೀಕ್ಷೆ ಪಾಸಾದವನು ಕೂಡ-ಇದುವರೆಗೆ-ಒಬ್ಬನೂ ಇಲ್ಲ. ಇಂತಹ ಊರಲ್ಲಿ ಹುಟ್ಟಿ ಬಳೆದವನು ನಾನು. ಹುಟ್ಟಿದುದು ೨೦ನೆಯ ಶತಮಾನದ ಪ್ರಾರಂಭದ ವರುಷ.

ಹಳ್ಳಿಯಲ್ಲಿಯೆ ಇದ್ದರೂ ಸಂಪ್ರದಾಯವಂತರ ಮನೆ ನಮ್ಮದು. ಆಗ ಊರಲ್ಲಿ ನಮ್ಮ ದಾಯಾದಕುಲಕ್ಕೆ ಸೇರಿದುವೇ ಆದ ಬ್ರಾಹ್ಮಣರ ಮನೆಗಳು ಹತ್ತೆಂಟು. ಎಲ್ಲ ಮಾತಿನಲ್ಲಿಯೂ ಸ್ಪರ್ಧೆಯಿರುವಂತೆ ಆ ಮನೆತನಗಳಲ್ಲಿ ಸಂಪ್ರದಾಯಪರಿಪಾಲನೆಯ ಮಾತಿನಲ್ಲಿಯೂ ಸ್ಪರ್ಧೆಯಿರುತ್ತಿದ್ದಿತು. ಒಳ್ಳೆಯ ಕಾಲ. ಎಲ್ಲರೂ ಉಂಡುಕೊಂಡು ಸುಖವಾಗಿ ಇದ್ದರು. ಹೊಸಕಾಲದ ಬೆಡಗಿನ ಗಾಳಿ ನಮ್ಮೂರಿಗೆ ಆಗ ಸ್ವಲ್ಪವೂ ಸೋಂಕಿರಲಿಲ್ಲವಾದುದರಿಂದ, ಬಂದ ಆದಾಯವೆಲ್ಲ ಸಂಪ್ರದಾಯಪಾಲನೆಯಲ್ಲಿಯೆ ವೆಚ್ಚವಾಗುತ್ತಿದ್ದಿತು. ಆದುದರಿಂದ ಹಿಂದುಗಳು ಪೂಜಿಸಬಹುದಾದ ಬಹುಸಂಖ್ಯಾಕ ದೇವತೆಗಳಿಗೆ ನಮ್ಮ ಮನೆತನ ಎಡೆ ಕೊಟ್ಟಿದ್ದಿತು. ಈ ದೇವತೆಗಳ ಸಲುವಾಗಿ ನಡೆಯು-ತ್ತಿರುವ ಪೂಜೆ, ಪುರಸ್ಕಾರ, ಹಬ್ಬ, ಹರಿದಿನ, ಆಚಾರ-ವಿಚಾರಗಳು

ಚಿಕ್ಕತನದಲ್ಲಿ ನನ್ನ ಮನಸ್ಸನ್ನೆಳೆದು ಎಲ್ಲವನ್ನೂ ಸೂಕ್ಷ್ಮದೃಷ್ಟಿಯಿಂದ ನೋಡಲು ಹಚ್ಚುತ್ತಿದ್ದುವು.

ಮನೆಯಲ್ಲಿ ಸ್ವಂತದ ಬೇಸಾಯವಿದ್ದುದರಿಂದ ಚಿಕ್ಕತನದಲ್ಲಿ ಅದರ ವಾತಾವರಣವನ್ನೂ ಅನುಭವಿಸಿದೆನು. ದುಡಿಯುವ ಎತ್ತುಗಳು, ಕಟ್ಟಿ ಮೇಯಿಸುವ ಹೋರಿಗಳು, ಹೈನದ ದನಗಳು, ಎಳಗರುಗಳು, ನೀರಿಗಾಗಿ ಲಗಳೆ ಹೇರುವ ಕೋಣ ಇವೆಲ್ಲವುಗಳ ಪರಿಚಯ-ಗೆಳೆತನಗಳಿಂದ ನನ ಮನಸ್ಸು ಅದೆಷ್ಟೋ ಸಂಸ್ಕಾರವನ್ನು ಪಡೆದಿರಬಹುದು. ಮನೆಯಲ್ಲಿ ಕೆಲಸಕ್ಕೆ ಇರುವ-ಆಗಾಗ ಕೆಲಸಕ್ಕೆ ಬರುವ-ಆಳುಗಳು, ಹೊಲ ಮಾಡಿದ ರೈತರು, ಹತ್ತಿ ಬಿಡಿಸಲಿಕ್ಕೆ-ಹತ್ತಿ ಅರೆಯಲಿಕ್ಕೆ-ಬರುವ ಹಳ್ಳಿಯ ಹೆಂಗುಸರು, ನಟ್ಟು ಕಡಿಯಲಿಕ್ಕೆ ಬರುವ ಕೂಲಿಯಾಳುಗಳು ಇವರೊಂದಿಗೆ ಕಳೆದ ಕಾಲ ನನ್ನ ಅಂತಃಕರಣದ ಅರಳಿಕೆಗೆ ಕಾರಣವಾಗದೆ ಇಲ್ಲ.

ಹನ್ನೆರಡು ತಿಂಗಳೂ ಜುಳುಜುಳು ತಿಳಿನೀರನ್ನು ಹರಿಯಿಸುತ್ತಿರುವ ನಮ್ಮೂರಿನ ಹಳ್ಳ, ಹಳ್ಳದ ದಂಡೆಯ ತೋಟಗಳು, ನಮ್ಮ ಮಾವಿನ ತೋಪು, ಹುಳಿಯಿದ್ದರೂ, ಅಂದು ಕಷ್ಟದಿಂದ ಹತ್ತಿ ಹಣ್ಣು ಪಡೆದು ಸವಿಮಾಡಿ ತಿನ್ನು ತ್ತಿದ್ದ ಬೋರಿಯ ಮರ-ಬೆಳವಲ ಮರ, ನಮ್ಮ ತೋಟಕ್ಕೇ ಒಂದು ಸೌಂದರ್ಯವನ್ನು ಒದಗಿಸಿದ ಜಂಬುನೀರಲ ಮರ, ಇನ್ನೆಲ್ಲಿಯೂ ಇಲ್ಲದೆ ನಮ್ಮ ತೋಟದಲ್ಲಿಯೆ ನಿಡಿದಾಗಿ ನಿಂತಿದ್ದ ತೆಂಗಿನ ಮರಗಳೆರಡು, ಅದರಡಿ ಯಲ್ಲಿಯೆ ನಳನಳಿಸಿ ಬೆಳೆಹು ಅಂದವಾದ ಹೂಗಳನ್ನು ಅರಳಿಸಿ ನಮ್ಮ ಮನೆಯ ದೇವರ ಪೂಜೆಗೆ ಒದಗಿಸಿ ಕೊಡುತ್ತಿದ್ದ ಗುಲಾಬಿಯ ಕಂಟಿ, ದುಂಡು ಮಲ್ಲಿಗೆ-ಜಾಜಿಯ ಬಳ್ಳಿಗಳು, ಬೆಳೆಗೂಡಿದ ಹೊಲಗಳು ಇವೆಲ್ಲ ತಮ್ಮ ಗೆಳೆತನದಿಂದ ನನಗೊಂದು ಸಂಸ್ಕಾರವನ್ನೊದಗಿಸದೆ ಬಿಟ್ಟಿಲ್ಲ.

ತಂದೆ ತುಂಬ ರಸಿಕರೆಂದು ಊರಲ್ಲಿ ಅಷ್ಟೇ ಅಲ್ಲ, ಅತ್ತಣ ಭಾಗದಲ್ಲಿಯೆ ಪ್ರಸಿದ್ಧಿ. ಅವರು ಸಂದರ್ಭ ಬಂದಾಗ ಬರೆದುಕೊಡುವ ಸುಂದರ ಚಿತ್ರ ಗಳನ್ನು ಕಂಡು ಆನಂದಿಸುತ್ತಿದ್ದೆ. ಒಳ್ಳೆಯ ಪ್ರತಿಮಾಕಾರರು. ಗಣಪತಿ ಯನ್ನು ಮಾಡಿದರೆ ಒಂದೊಂದು ವರ್ಷ ಒಂದೊಂದು ಭಾವ-ಭಂಗಿಗಳಲ್ಲಿ. ಬಣ್ಣಗಾರಿಕೆಯಂತೂ ಗೋಕಾಂವಿಯ ಜೀನಗಾರರನ್ನು ಸರಿಗಟ್ಟುವಂತಹದು. ಇಂಪಾಗಿ ಹಾಡುತ್ತಿದ್ದರು. ಚಿಕ್ಕತನದಲ್ಲಿ ನಮ್ಮನ್ನು ಮುಂದೆ ಕೂಡಿಸಿಕೊಂಡು ಸ್ತೋತ್ರಗಳನ್ನೂ ಭಕ್ತಿಗೀತಗಳನ್ನೂ ಸವಿಯಾದಧಾಟಿಗಳಿಂದ ಕಲಿಸುತ್ತಿದ್ದರು.

ಒಳ್ಳೆಯ ಸಂಗೀತ ವಿಮರ್ಶಕರೆಂದೂ, ಲಯಕಾರರೆಂದೂ ಅವರಿಗೆ ಹೆಸರು ಇದ್ದಿತು. ಹಳ್ಳಿಗಳಲ್ಲಿ ಹಲಿಗೆ-ಕರಡಿಗಳನ್ನು ಬಾರಿಸುವ ಜನರು, ತಮ್ಮ ಜಂಭಗಾರಿಕೆ ಬಿಟ್ಟು ವಿನಯದಿಂದ ಇವರಿಗೆ ತಲೆವಾಗುತ್ತಿದ್ದರು. ತಂದೆಯವರಿರುವ ವರೆಗೆ ಮನೆಯಲ್ಲಿ ತಂಬೂರಿಯಿದ್ದಿತು. ತಬಲಾ-ಢಕ್ಕೆಗಳೂ ಇದ್ದುವು. ಜಾಣರಾದ ಕುಲಕರಣಿ—ಎಂದೂ ಹೆಸರುವಾಸಿಯಾದವರು.

ಹಳ್ಳಿಗರಿಗೆ ಬೇಕಾಗುವ ಜ್ಯೋತಿಷ ಅವರಿಗೆ ಗೊತ್ತು. ವಾಸ್ತುಶಿಲ್ಪ ಗೊತ್ತು. ಬಡಿಗತನದಲ್ಲಿಯೂ ಸಾಕಷ್ಟು ಬುದ್ಧಿ ಹರಿಯುವುದು. ಮನೆ ಕಟ್ಟುವುದು ಹೇಗೆ, ಗೋಡೆಯ ಗಿಲಾಯಿ ಮಾಡುವುದು ಹೇಗೆ?—ಎಂದು ಎಷ್ಟೋ ಜನರು ಅವರನ್ನು ಕೇಳಿಕೊಂಡು ಹೋಗುವರು. ಚಿಕ್ಕತನದಲ್ಲಿ ತಂದೆಯವರ ಇವೆಲ್ಲ ವ್ಯವಹಾರಗಳನ್ನೂ ಕಣ್ಣಾರೆ ನೋಡುವ ಸಂದರ್ಭ ಬಂದುದಕ್ಕಾಗಿ, ಈ ಸಂದರ್ಭಗಳೂ ನನ್ನ ಮನದ ವಿಕಾಸಕ್ಕೆ ಕಾರಣವಾಗದೆ ಹೋಗಿರಲಾರವು.

ತಾಯಿ ಕಲಿತವಳಲ್ಲವಾದರೂ ಸಂಸ್ಕಾರವಂತಳಾದ ಗೃಹಿಣಿಯಾಗಿದ್ದಳು. ತುಂಬ ಭಾವಿಕಳು. ಸಂಪ್ರದಾಯಗಳನ್ನು ಚಾಚು ಬಿಡದೆ ನಡೆಯಿಸಿಕೊಂಡು ಬರುವಳು. ಕನ್ನಡ, ಮರಾಠಿಯ ಪುರಾಣಗ್ರಂಥಗಳನ್ನೂ ಕತೆಕಾದಂಬರಿಗಳನ್ನೂ ಓದಿಸಿ ಕೇಳುವುದರಲ್ಲಿ ಆಸಕ್ತಿ ಹೆಚ್ಚು. ಗೋಕಾವಿಯ ಅನಂತಾಚಾರ್ಯ ಕವಿಗಳು ರಚಿಸಿದ 'ವೆಂಕಟೇಶ ಪಾರಿಜಾತ' 'ಧ್ರುವ ಚರಿತ್ರ' 'ಪ್ರಲ್ಹಾದ ಚರಿತ್ರ' 'ಶಿವ ಪಾರಿಜಾತ' ಮೊದಲಾದ ಗೀತಕಾವ್ಯಗಳು ನಮ್ಮ ತಾಯಿಯ ಪ್ರೇರಣೆಯ ಮೂಲಕವೇ, ವಾರದಲ್ಲಿ ಒಂದೊಂದು ದಿನ ಒಂದೊಂದು ಪಾರಾಯಣ ಗ್ರಂಥಗಳಾಗಿ ಇದ್ದುದರಿಂದ, ನಮ್ಮ ಮನೆಯಲ್ಲಿ ಬಹುತರವಾಗಿ ಎಲ್ಲರಿಗೂ ಇವು ಮುಖೋದ್ಗತವಾಗಿದ್ದವು. ಪ್ರಾಸಂಗಿಕವಾಗಿ ಹಾಡುತ್ತಿದ್ದ ಕೃಷ್ಣಲೀಲೆಯ ಹಾಡುಗಳು, ಸುದಾಮನ ಹಾಡು, ಶುಕ್ರವಾರ-ಶನಿವಾರಗಳ ಹಾಡು, ದಾಸರ ಕೀರ್ತನಗಳು ಇವು ಚಿಕ್ಕತನದಲ್ಲಿ ಸಾಹಿತ್ಯದ ಕಡೆಗೆ ನನ್ನ ಒಲವನ್ನು ಹರಿಸಲು ತುಂಬ ಕಾರಣವಾದುವು. ಮನೆಯಲ್ಲಿ ತುಂಬ ಬಳಗ. ಮದುವೆ, ಮುಂಜಿ, ಶೋಭನ, ಸೀಮಂತ, ಬಸಿರು, ಬಾಣಂತಿತನ, ಹುಟ್ಟಿದ ಹಬ್ಬ, ನಾಮಕರಣ, ಜಾವುಳ ಇವೆಲ್ಲ ಆಗಾಗ ನಡೆದೇ ಇರುವುವು. ಈ ಸಂದರ್ಭಗಳಲ್ಲಿ ನಡೆಯಿಸಬೇಕಾಗುವ ರಸಮಯವಾದ ವಿವಿಧ ಸಂಪ್ರದಾಯಗಳೂ ನನ್ನ ಮನಸ್ಸಂಸ್ಕಾರಕ್ಕೆ ಕಾರಣವಾದುವು.

ಹಳ್ಳಿಗೆ ಆಗಾಗ ಪುರಾಣಿಕರು ಬಂದು ಪುರಾಣಸಪ್ತಾಹ ನಡೆಯಿಸು-ವರು. ಹರಿದಾಸರು ಬಂದು ಕೀರ್ತನೆಗಳನ್ನು ಮಾಡುತ್ತಿದ್ದರು. ನಮ್ಮ ತಾಯಿಯ ಆದೇಶದಂತೆ. ಇಂತಹ ಪ್ರಸಂಗಗಳೊಂದನ್ನೂ ತಪ್ಪಿಸಿಕೊಳ್ಳುತ್ತಿ-ರಲಿಲ್ಲ. ಮೊದಲಿನಿಂದ ಕೊನೆಯ ವರೆಗೆ ಕುಳಿತು ಮನಗೊಟ್ಟು ಕೇಳುತ್ತಿ-ದ್ದೆನು. ಮನೆಗೆ ಬಂದಮೇಲೆ ತಾಯಿ ಕೇಳಿದಾಗ, ನಾನು ಕೇಳಿದುದನ್ನು ಹೇಳಲು ಪ್ರಯತ್ನ ಪಡುತ್ತಿದ್ದೆನು. ತಪ್ಪಿದಲ್ಲಿ ತಾಯಿ ತಿದ್ದಿ ತಿಳಿಹೇಳುತ್ತಿದ್ದಳು. ತಾಯಿಯ ಈ ಸಾಹಿತ್ಯಪ್ರೀತಿ ನಮ್ಮ ಮನೆಯ ಜನರನ್ನೆಲ್ಲ ಆ ಕಡೆಗೆ ಸೆಳೆಯುತ್ತಿದ್ದಿತು.

ನಮ್ಮ ಹಳ್ಳಿಯಲ್ಲಿ ರಸಿಕರಿಗೇನೂ ಕೊರತೆಯಿರಲಿಲ್ಲ. ಈಗಿನಂತಹ ಕಷ್ಟದ ಕಾಲವಲ್ಲ ಅದು. ಸಾಲದ ಶೂಲಿಯನ್ನೇ ಅವರು ಆಗ ಅರಿಯರು. ಕೋರ್ಟು-ಕಚೇರಿಗಳ ಮೋರೆಯ ಗುರುತು ಕೂಡ ಆಗಿರಲಿಲ್ಲ. ಎಲ್ಲರಿಗೂ ಹೊಟ್ಟೆತುಂಬ ಊಟ, ಮೈತುಂಬ ಬಟ್ಟೆ ದೊರೆಯುತ್ತಿದ್ದಿತು. ಹಳ್ಳಿಯ ಏಕನಾದದಂತಹ ಬಾಳಿನಲ್ಲಿ ವೈವಿಧ್ಯ ತಂದುಕೊಳ್ಳುವುದಕ್ಕಾಗಿ, ಹಳ್ಳಿಯ ರೈತರು ಸಾರ್ವಜನಿಕವಾಗಿ ಗೊಂದಲಿಗರಿಂದಲೂ ಎಲ್ಲಮ್ಮನ ಜೋಗಿ-ಯರಿಂದಲೂ ಕತೆಗಳನ್ನು ಹೇಳಿಸುವರು. ಕಿಳ್ಳಿಕೇತರ ಗೊಂಬೆಯ ನೆರಳಾಟ-ಗಳನ್ನಾಡಿಸುವರು. ಹಲಿಗೆ-ಕರಡಿಗಳ ಮಜಲುಗಳನ್ನು ಮಾಡಿಸಿ, ಲಾವಣಿ-ಕಾರರಿಂದ ಲಾವಣಿಪದಗಳನ್ನು ಹೇಳಿಸುವರು. ಕೃಷ್ಣಪಾರಿಜಾತ, ರಾಧಾ ಕೃಷ್ಣ, ರೂಪಸಿಂಗ, ಸಂಗ್ಯಾಬಾಳ್ಯಾ ಮೊದಲಾದ ಬಯಲಾಟಗಳನ್ನು ಆಡಿಸುವರು. ನನ್ನ ಚಿಕ್ಕತನದಲ್ಲಿ, ನನಗೆ ದೊರೆತ ಇಂತಹ ಸಂದರ್ಭಗಳನ್ನು ಒಮ್ಮೆಯೂ ಕಳೆದುಕೊಂಡಂತೆ ನನಗೆ ಜ್ಞಾಪಕವಿಲ್ಲ. ಈ ಎಲ್ಲ ಜಾನಪದ ಸಾಹಿತ್ಯದ ಕುತೂಹಲ ಪೂರ್ಣವಾದ ಸಹವಾಸವೂ ನನ್ನ ಮನಸ್ಸಿಗೊಂದು ಹದವನ್ನು ತಂದುಕೊಡಲು ಕಾರಣವಾಯಿತು.

ನನಗೆ ೯-೧೦ ವರುಷದ ವಯಸ್ಸು. ನಮ್ಮೂರಲ್ಲಿ ಹನುಮಂತದೇವರ ಜಾತ್ರೆ ( ಓಕಳಿ ) ನಡೆದಿದ್ದಿತು. ಜಾತ್ರೆಯ ಕೊನೆಯ ದಿನ ಬಯಲಾಟ ವೊಂದು ಆಗುವುದು ರೂಢಿ. ಅದರಂತೆಯೆ ಅಂದು 'ಹಿಡಕಲ್ಲ ಕಲ್ಲಪ್ಪ'ನ ಆಟ ಆಗಬೇಕಾಗಿದ್ದಿತು. ಆಟದವರು ತಮ್ಮೂರಿಂದ ಹೊರಟು ನಮ್ಮೂರನ್ನು ತಲ್ಪಬೇಕಾದರೆ ಹನ್ನೆರಡು ಗಂಟೆ ರಾತ್ರಿಯಾಯಿತು. ಆಟ ನೋಡಬೇಕೆಂಬ

ಉಬ್ಬಿನಲ್ಲಿ ನಾನು, ಎರಡು ವರ್ಷಗಳಿಗಿಂತ ಹಿರಿಯನಾದ ನನ್ನ ಅಣ್ಣ, ಎಚ್ಚರ-
ದಿಂದ ಹಾಗೆಯೆ ರಾತ್ರಿ ಕಳೆಯುತ್ತಲಿದ್ದೆವು. ಅಂದಿನ ಆ ಬೆಳುದಿಂಗಳ ರಾತ್ರಿ,
ಆಟ ನೋಡಲಿರುವ ಉತ್ಸಾಹ, ಇವು-ನಮ್ಮ ಎಳೆಯ ಮನಸ್ಸನ್ನು ಕುಣಿ-
ದಾಡಲು ಹಚ್ಚಿ 'ಕವಿತೆ' ಯೊಂದನ್ನು ಹೆಣೆಯಲು ಸ್ಫೂರ್ತಿ ಕೊಟ್ಟವು.
ಕವಿತೆಗೆ ವಸ್ತು ನೆರೆಮನೆಯ ಹುಡುಗನೊಬ್ಬನ ದಡ್ಡತನ-ಹುಂಬತನಗಳು.
ನಾವು ಶಾಲೆಯಲ್ಲಿ ವಸ್ತುಪಾಠದ ಹಾಡೆಂದು ಕಲಿತ 'ಹಿರಿಯ ಹುಡುಗನೇ,
ಕರಿಯ ನೋಡಿದು' ಎಂಬ ಹಾಡಿನ ಧಾಟಿಯಲ್ಲಿ ಆ 'ಕವಿತೆ'ಯ ಹೆಣಿಕೆ-
ಯಾಯಿತು. ಆ ಕವಿತೆಯ ರಚನೆಯಲ್ಲಿ ನನ್ನ ಭಾಗ ಹೆಚ್ಚಿನದೊ, ನಮ್ಮ
ಅಣ್ಣನ ಭಾಗ ಹೆಚ್ಚಿನದೊ ನನಗೆ ಜ್ಞಾಪಕವಿಲ್ಲ. ಆದರೆ ಕೊನೆಯ ಮುದ್ರಿ-
ಕೆಯ ಚರಣವನ್ನು, ನಾನು ಹೇಳುವಾಗ 'ಬಲ್ಲ **ಬಳವಂತ** ಮಾಡಿದ
ಉಲ್ಲಾಸದ ಪದವಿದು' ಎಂದು ನಮ್ಮ ಅಣ್ಣನ ಹೆಸರನ್ನು ಸೇರಿಸಿ ಹೇಳು-
ತ್ತಿದ್ದೆ. ಆತನು ಹೇಳುವಾಗ 'ಬಲ್ಲ **ಕೃಷ್ಣ** ಮಾಡಿದಂಥ ಉಲ್ಲಾಸದ ಪದ-
ವಿದು' ಎಂದು ನನ್ನ ಹೆಸರನ್ನು ಸೇರಿಸಿ ಹೇಳುತ್ತಿದ್ದ. ಆ ಹುಂಬ ಹುಡುಗನ
ಸ್ವಭಾವ ಚಿತ್ರ ನಮ್ಮ ಕವಿತೆಯಲ್ಲಿ ಚೆನ್ನಾಗಿ ಮೂಡಿತ್ತಾದುದರಿಂದ ಅನೇಕರು
ಅದನ್ನು ಹೇಳಿಸಿ ಕೇಳುವರು; ನಕ್ಕು ಮೆಚ್ಚಿಗೆ ತೋರಿ ನಮ್ಮ ಎಳೆಯ
ಮನಕ್ಕೆ ಅಹಂಕಾರ-ಆನಂದಗಳ ತೊಡಿಗೆ ತೊಡಿಸುವರು. ಅಂದಿನಿಂದ
ಮೊದಲಾದ ನಮ್ಮ ಕವಿತ್ವ ನಮ್ಮ ಅಣ್ಣ-ತಮ್ಮಂದಿರ ಸಹಕಾರದಿಂದ, ಜನರ
ಮೆಚ್ಚಿಕೆಯ ಮಾತುಗಳಿಂದ ಕುಡಿವಡೆದು ಬಳೆಯತೊಡಗಿತು. ನಮ್ಮ
ಮನೆಯ ಎತ್ತುಗಳಾದ ''ಹಣಮ್ಯಾ' 'ಬೆಳ್ಯಾ' ಗಳೂ ನನ್ನ ಕವನಕ್ಕೆ
ವಸ್ತುಗಳಾದುವು. ನಮ್ಮೂರ ಹನುಮಂತದೇವರು, ಈಶ್ವರ, ಮಹಾಲಕ್ಷ್ಮಿ-
ಯರನ್ನು ಕುರಿತೂ ಹಾಡುಗಳ ರಚನೆಯಾಯಿತು. ಮನೆಯಲ್ಲಿ ಅಕ್ಕ-ತಂಗಿ-
ಯರಿಗೆ ಬೇಕಾಗುವ ಆರತಿಹಾಡು, ಭೂಮದ ಪದಗಳನ್ನೂ ' ಕಟ್ಟಿ ' ಕೊಡ
ಬೇಕಾಯಿತು. ಊರಲ್ಲಿಯ ಬಯಲಾಟದವರು ತಮಗೆ ಕೊರತೆಯೆನಿಸಿದಲ್ಲಿ,
ಧಾಟಿಗಳನ್ನು ಕೊಟ್ಟು ಪದಗಳನ್ನು ಮಾಡಿಸಿಕೊಂಡರು. ಶಾಲೆಯಲ್ಲಿ ನಮಗೆ
ಕಲಿಸುತ್ತಿದ್ದ ಅಧ್ಯಾಪಕರು, ಶಾಲೆಯನ್ನು ನಿರೀಕ್ಷಿಸುವುದಕ್ಕೂ ಪರಿಕ್ಷಿಸುವು-
ದಕ್ಕೂ ಬರುವ ಅಧಿಕಾರಿಗಳನ್ನು ಸ್ವಾಗತಿಸಲಿಕ್ಕಾಗಿ ನಮ್ಮಿಂದ ಹಾಡುಗಳನ್ನು
ಮಾಡಿಸಿ, ನಮ್ಮಿಂದಲೇ ಹೇಳಹಚ್ಚುತ್ತಿದ್ದರು. ಬಂದ ಅಧಿಕಾರಿಗಳು ನಮ್ಮ
ಎಳೆಯ ವಯಸ್ಸನ್ನೂ, ನಾವು ರಚಿಸಿದ ಪದ್ಯಗಳನ್ನೂ ಕಂಡು, ನಮ್ಮನ್ನು

ಮೆಚ್ಚಿ ಪ್ರೈಢಡಹುತ್ತಿದ್ದರಲ್ಲದೆ, ನಮ್ಮ ಉಪಾಧ್ಯಾಯರನ್ನೂ ಪ್ರಶಂಸಿಸುತ್ತಿ-ದ್ದರು. ೧೯೧೧ನೆಯ ಡಿಸೆಂಬರ್ ೧೨ನೆಯ ತಾರೀಖಿನ ದಿನ ನಡೆದ ಐನೆಯ ಜಾರ್ಜರ ದಿಲ್ಲಿಯ ಸಿಂಹಾಸನಾರೋಹಣದ ಉತ್ಸವದಲ್ಲಿ, ನಮ್ಮ ಹಳ್ಳಿಯಲ್ಲಿ ನಾವೆ ರಚಿಸಿದ ಹಾಡನ್ನು ಹಾಡಿದುದು ನನ್ನ ಜ್ಞಾಪಕದಲ್ಲಿದೆ. ಅಂದು ಹಾಡು-ಗಳನ್ನು ಹೆಣೆಯುವುದೇ ನಮ್ಮ ಗುರಿ; ಹೆಣೆದುದನ್ನು ಹೇಳಿಕೊಳ್ಳುವುದರಲ್ಲಿಯೆ ಆನಂದ. ಛಂದಸ್ಸಿನ ಕಲ್ಪನೆಯಿಲ್ಲ; ಗುರು-ಲಘುಗಳ ವಿಚಾರ ಗೊತ್ತಿರಲಿಲ್ಲ. ಗೊತ್ತಿದ್ದ ಗೋತ್ರದ ಧಾಟಿಗಳಲ್ಲಿ, ನಮ್ಮಲ್ಲಿರುವ ಅಲ್ಪ ಶಬ್ದಸಂಗ್ರಹವನ್ನೆ ಉಪಯೋಗಿಸಿ ಹಾಡುಗಳನ್ನು ಹೆಣೆಯುತ್ತಿದ್ದೆವು. ದಾಸರ ಹಾಡುಗಳಲ್ಲಿಯ ಭಕ್ತಿಭಾವ ನಮ್ಮ ಆದರ್ಶವಾಗಿತ್ತು. ಎಂತಲೆ ಅಂದು ರಚಿಸಿದ ಹಾಡು ಗಳಲ್ಲಿ ಭಕ್ತಿಗೀತಗಳೇ ಹೆಚ್ಚು. ಬರೆದುವುಗಳನ್ನು ಮುದ್ರಿಸಬೇಕೆಂಬ ಕಲ್ಪನೆ ಅಂದು ನಮ್ಮ ಕನಸು-ಮನಸಿನಲ್ಲಿಯೂ ಇರಲಿಲ್ಲ.

ಮನೆಯಲ್ಲಿ 'ಶಾಂತಕವಿ'ಗಳ 'ಕೀಚಕವಧ' ನಾಟಕದ ಪ್ರತಿಯೊಂದು ಇದ್ದಿತು. ನಮ್ಮ ತಾಯಿ ಅದನ್ನು ಆಗಾಗ ಓದಿಸುತ್ತಿದ್ದರು. ಊರಲ್ಲಿಯ ಹಿರಿಯ ಜನರು 'ಕುಮಾರರಾಮ' 'ಸಿರಿಯಾಳ ಸತ್ತ್ವಪರಿಕ್ಷಾ' ಮೊದಲಾದ ನಾಟಕಗಳನ್ನು ತಾವು ಮೊಡಿದುದರ ವರದಿಯನ್ನು, ನೋಡಿದುದರ ವಿಮರ್ಶೆ ಯನ್ನು ಆಗಾಗ ಬಣ್ಣಿಸಿ ಹೇಳುವುದನ್ನು ಕೇಳುತ್ತಿದ್ದೆವು. ಕುಲಕರಣಿಕೆ ಕೆಲಸ ಮಾಡುತ್ತಿರುವ ಹಿರಿಯ ಅಣ್ಣ ಆಗಾಗ ಸರಕಾರಿ ಕೆಲಸಕ್ಕೆಂದು ಗೋಕಾಂವಿ, ಬೆಳಗಾಂವಿಗಳಿಗೆ ಹೋಗುವರು; ಅಲ್ಲಿ ತಾವು ನೋಡಿದ ನಾಟಕ ಗಳನ್ನು ಕುರಿತು ಮನೆಯಲ್ಲಿ ನಮ್ಮ ತಾಯಿಯ ಮುಂದೆ ವಿವರಣೆಯೊಂದಿಗೆ ಹೇಳುವರು. ಇವೆಲ್ಲವುಗಳ ಒಟ್ಟು ಪರಿಣಾಮ ಚಿಕ್ಕತನದಲ್ಲಿಯೆ ನಾಟಕ-ಗಳನ್ನು ಬರೆಯಲು ಪ್ರೇರಕವಾಯಿತು.

೧೯೧೧ನೆಯ ಇಸ್ವಿಯ 'ಸದ್ಬೋಧ ಚಂದ್ರಿಕೆ'ಯಲ್ಲಿ ದಿವಂಗತ ಗಳಗನಾಥರು ಬರೆದ 'ಪಿತೃಭಕ್ತಿ' ಎಂಬ ಕತೆ ಬಂದಿತ್ತು. ಅದನ್ನು ಓದಿದ ನಾವಿಬ್ಬರೂ ಅಣ್ಣ-ತಮ್ಮಂದಿರು ಅದೇ ಕಥೆಯನ್ನೇ ನಾಟಕವಾಗಿ ಬರೆಯ ಬೇಕೆಂದು ಪ್ರಾರಂಭಿಸಿದೆವು. ಶಾಂತಕವಿಗಳ 'ಕೀಚಕವಧ'ದ ತಂತ್ರವನ್ನೇ ಅನುಸರಿಸಿದೆವು. ಅದರಂತೆಯೆ ನಾಟಕಮುಖದಲ್ಲಿ ಗಣಪತಿ, ಸರಸ್ವತಿ, ವಿದೂಷಕ, ಸೂತ್ರಧಾರ ಇವರನ್ನೆಲ್ಲ ನಿರ್ಮಿಸಿದ್ದೆವು. ನಾಟಕಲೇಖನ ಮುಂದುವರೆದು ಮೊದಲನೆಯ ಅಂಕ ಮುಗಿಯಿತು. ಸಾಗ್ರಸಂಗೀತ ನಾಟಕ

ಕಿವಿಚುಟಿಕೆಯಾಗಿದ್ದ ಅಂದಿನ ಶಿರಹಟ್ಟಿ ನಾಟಕದಲ್ಲಿಯ ಪದಗಳ ಧಾಟಿಯಲ್ಲಿ ಪದಗಳನ್ನು ರಚಿಸಿ ಅಲ್ಲಲ್ಲಿ ಹಾಕಿದ್ದೆವು. 'ಪದ್ಮಾವತೀ ಪರಿಣಯ' ನಾಟಕದಲ್ಲಿಯ ನಾಂದೀ ಪದ್ಯವಾದ 'ನಿಗಮವಿನುತ ವರಮಾಧವನನುದಿನ' ಎಂಬ ಹಾಡಿನ ಧಾಟಿಯಲ್ಲಿ 'ಜಗದ ಜನಕನಿಗೆ ಮೊದಲು ವಂದನೆಯು' ಎಂಬ ಪದ ರಚಿಸಿ ಪ್ರಾರಂಭದಲ್ಲಿ ಸೇರಿಸಿದ್ದೆವು. ಮೊದಲನೆಯ ಅಂಕದಲ್ಲಿಯೆ ಇದ್ದ ಹಾಡುಗಳ ಸಂಖ್ಯೆ ೨೦-೨೨ರಷ್ಟಿತ್ತು. ಬರೆದ ಭಾಗವನ್ನಷ್ಟೇ ಅದೆಷ್ಟೋ ಸಲ ಬೇರೆಬೇರೆಯವರೆದುರು ಓದಿ ತೋರಿಸಿದೆವು. 'ಚೆನ್ನಾಗಿಲ್ಲ'ವೆಂದು ಯಾರೂ ಹೇಳಲಿಲ್ಲ. 'ಹೀಗಲ್ಲ, ಹೀಗೆ ಇರಬೇಕು!' ಎಂದು ಯಾರೂ ವಿಮರ್ಶೆ ಮಾಡಲಿಲ್ಲ. ಎಲ್ಲರೂ ಮೆಚ್ಚಿ ಹೊಗಳುವರು; ನಮ್ಮ ಹೆಮ್ಮೆ-ಸಂತಸಗಳನ್ನು ಹೆಚ್ಚಿಸುವರು.

೧೯೧೨ನೆಯ ಇಸ್ವಿಯಲ್ಲಿ ಘಟಿಸಿದ ನಮ್ಮ ತಂದೆಯವರ ಮರಣದೊಂದಿಗೆ ನನ್ನ ಜೀವನನಾಟಕದಲ್ಲಿ ಬೇರೊಂದು ಅಂಕ ಪ್ರಾರಂಭವಾಯಿತು. ಜೀವನ-ನಾಣ್ಯದ ಇನ್ನೊಂದು ಬದಿಯ ದರ್ಶನವಾಗಲು ತೊಡಗಿತು. ಮನೆತನದಲ್ಲಿ ದುಃಖ ಕ್ಲೇಶಗಳು ಒಂದರ ಹಿಂದೆ ಒಂದರಂತೆ ಬಂದು ಸೇರಲು ತೊಡಗಿದುವು. "ಅಶಕ್ತರಾದರೆ ಆಪ್ತ ಜನರೆ ವೈರಿಗಳು" ಎಂಬ ದಾಸರ ಮಾತಿನಲ್ಲಿಯ ರಹಸ್ಯವನ್ನು ನಾನು ಆಗ ಚೆನ್ನಾಗಿ ಅರಿತುಕೊಂಡೆ. ಮನೆಯಲ್ಲಿ ಕರುಣೆಯ ಮೂರ್ತಿಯಾದ ತಾಯಿ ಕಣ್ಣೀರು ಕರೆಯುತ್ತ ಕುಳಿತುಕೊಳ್ಳುವಳು. ನಾವು ನಾಲ್ಕಾರು ಜನ ಚಿಕ್ಕಮಕ್ಕಳು ಮೋರೆ ಬಾಡಿಸಿಕೊಂಡು, ಕರುಳನ್ನು ಕುದಿಸಿಕೊಳ್ಳುತ್ತ ಅವಳಿದುರು ಕುಳಿತಿರುವೆವು. ಆಗ ತಾಯಿ, ತನ್ನ ಜೀವನದಲ್ಲಿಯ ಸಂತಸದ ಘಟನೆಗಳನ್ನು ಹೇಳಿಯೂ ಅಳುವಳು; ಸಂಕಟದ ಘಟನೆಗಳನ್ನು ಹೇಳಿಯೂ ಅಳುವಳು. ಅಂದಿನಿಂದ ನಮಗೆ ಅಳುವಿನ ಪರಿಚಯವಾಗತೊಡಗಿತು.

ತಂದೆಯ ಮರಣದ ಮೂಲಕ—ಪ್ರಾಥಮಿಕ ಐದನೆಯ ತರಗತಿಯನ್ನು ಮುಗಿಸಿದ ನನಗೆ—ಮುಂದಿನ ವಿದ್ಯಾಭ್ಯಾಸ ಸಾಗಿಸುವ ಯೋಗ ಕೂಡಿ ಬರಲಿಲ್ಲ. ಅದಕ್ಕಾಗಿ, ಟ್ರೇನಿಂಗ್ ಕಾಲೇಜಿನಲ್ಲಿ ಓದುತ್ತಿರುವ ನಮ್ಮ ಅಣ್ಣನು ಓದನ್ನು ಮುಗಿಸಿ ಕೆಲಸಕ್ಕೆ ಸೇರುವ ದಾರಿಯನ್ನು ನಾನು ನೋಡುತ್ತ ಕುಳಿತುಕೊಳ್ಳಬೇಕಾಯಿತು. ಈ ಅವಧಿಯನ್ನು ನಾನು ಸುಮ್ಮನೆ ಕಳೆಯಲಿಲ್ಲ. ಮನೆಯಲ್ಲಿಯ ದೇವರ ಪೂಜೆಯ ಹೊಣೆಯನ್ನು ನನ್ನ ತಲೆಯ ಮೇಲೆ

ಹೊತ್ತುಕೊಂಡೆ. ಅದಕ್ಕೆ ಬೇಕಾಗುವ ಮಂತ್ರ-ತಂತ್ರಗಳನ್ನು ಕಲಿತುಕೊಂಡೆ. ಸಾಯಂಕಾಲದ ಮಂಗಳಾರತಿಯಾದ ಮೇಲೆ ಹೇಳತಕ್ಕ 'ಗೋಪೀಗೀತ' 'ವೇಣುಗೀತ' 'ಭ್ರಮರಗೀತ' 'ದಾಮೋದರಾಷ್ಟಕ' 'ವೆಂಕಟೇಶಸ್ತೋತ್ರ' 'ಕಷ್ಣಾಷ್ಟಕ''ಮಂಗಲಾಷ್ಟಕ' ಮೊದಲಾದ ಸ್ವಾರಸ್ಯವಾದ ಸಂಸ್ಕೃತ ಸ್ತೋತ್ರ ಗಳನ್ನು ಪಾಠಮಾಡಿದೆ. ಪೂಜೆಯ ಕಾಲದಲ್ಲಿ ಹೇಳತಕ್ಕ ನಾಲ್ಕಾರು ಸೂಕ್ತ ಗಳನ್ನೂ 'ವಾಯುಸ್ತುತಿ' 'ರಾಘವೇಂದ್ರಸ್ತೋತ್ರ' 'ದ್ವಾದಶಸ್ತೋತ್ರ' ಗಳನ್ನೂ ಗಟ್ಟಿಮಾಡಿಕೊಂಡೆ. ಸ್ನಾನಸಂಕಲ್ಪ, ನಾಮ-ಮುದ್ರಾವಿಧಿ ಮೊದಲು ಮಾಡಿ, ನಿತ್ಯಾಹ್ನಿಕ ತಂತ್ರಗಳನ್ನೂ ತಿಳಿದುಕೊಂಡೆ.

ಸಂಧ್ಯಾವಂದನೆಗೆ ಕುಳಿತು ಗಾಯತ್ರಿ ಜಪವನ್ನು ಪ್ರಾರಂಭಿಸಿದನಂತರ ಸಾವಿರ ಸಾವಿರ ಜಪ ಮಾಡುತ್ತಿದ್ದೆ. ನಿತ್ಯವೂ 'ಭಗವದ್ಗೀತೆ' 'ವಿಷ್ಣುಸಹಸ್ರ ನಾಮಸ್ತೋತ್ರ'ಗಳ ಪಾರಾಯಣ ಮಾಡುತ್ತಿದ್ದೆ. ತಾಯಿಯ ಅಪೇಕ್ಷೆಯಂತೆ ಕುಟುಂಬಕಲ್ಯಾಣಕ್ಕಾಗಿ ಶುಕ್ರವಾರ, ಮಂಗಳವಾರಗಳ ಸಂಜೆಗೆ 'ಲಕ್ಷ್ಮೀ ಹೃದಯ-ನಾರಾಯಣಹೃದಯ' ಸ್ತೋತ್ರದ ಪಾರಾಯಣ ಮಾಡುತ್ತಿದ್ದೆ. ಆಗ ನಾನೊಬ್ಬ ಬಾಲಭಕ್ತ. ಧ್ರುವ-ಪ್ರಲ್ಹಾದರು ನನ್ನ ಆದರ್ಶವಾಗಿದ್ದರು.

ಇದೇ ಕಾಲದಲ್ಲಿ ದಿವಂಗತ ಗಳಗನಾಥರ ಕಾದಂಬರಿಗಳು ಒಂದರ ಹಿಂದೊಂದರಂತೆ ನನಗೆ ಓದಲು ದೊರೆತುವು. ರಾಮಾಯಣ-ಮಹಾಭಾರತ ಗಳ ಕನ್ನಡ ಅನುವಾದಗಳನ್ನು ಆಗಾಗ ಓದುವ ಸಂದರ್ಭ ಬಂದಿತು; ವಚನ ಜೈಮಿನೀಭಾರತವನ್ನೂ ಬಳ್ಳಾರಿಯ ಸೆಟ್ಟರ ಪ್ರಕಟನೆಗಳಾದ ಹಲವು ಅದ್ಭುತರಮ್ಯಕಥೆಗಳನ್ನೂ ಓದುವ ಯೋಗವೊದಗಿತು. ಇದೆಲ್ಲಕ್ಕೂ ಪ್ರೇರಕಳು ನನ್ನ ತಾಯಿ. ಆಕೆಗೆ ಓದಿಸಿ ಕೇಳುವ ನಾದವಿರದಿದ್ದರೆ, ನನಗೆ ಅಷ್ಟೊಂದು ಚಿಕ್ಕ ವಯಸ್ಸಿನಲ್ಲಿ ಇವೆಲ್ಲ ಗ್ರಂಥಗಳನ್ನು ಓದುವ ಸಂದರ್ಭ ಬರುತ್ತಿದ್ದಿತೋ ಇಲ್ಲವೋ ಸಂದೇಹ. ಈ ಕತೆಗಳಲ್ಲಿಯ ಕರುಣೆಯ ಪ್ರಸಂಗಗಳನ್ನು ಓದುತ್ತಿ-ರುವಾಗ, ನನ್ನ ತಾಯಿ ಅತ್ತು ಬಿಡುವರು; ನನಗೂ ಅಳುವು ಬಂದು ಕೆಲವು ಕಾಲ ಓದುವುದೇ ನಿಂತುಹೋಗುತ್ತಿತ್ತು. ಈ ಕಾಲವೆಂದರೆ ನನ್ನ ಹೃದಯ-ಮನಗಳ ಸಂಸ್ಕಾರದ ಮಟ್ಟವನ್ನು ಸಾಕಷ್ಟು ಎತ್ತರಿಸಲಿಕ್ಕೆ ಕಾರಣವಾಗಿದೆ ಎಂದು ನನ್ನ ತಿಳುವಳಿಕೆ. ಅಂದಿನಿಂದ ನನ್ನ ಒಲವಿಗನುಗುಣವಾಗಿ ಅದೆಷ್ಟೋ ಭಕ್ತಿಗೀತಗಳನ್ನು ನಾನೇ ರಚಿಸಿ ಹಾಡುತ್ತಲಿದ್ದೆ. ಮೊದಲು ಕವನರಚನೆ ಯಲ್ಲಿ ಸಹಕರಿಸುತ್ತಿದ್ದ ನನ್ನ ಅಣ್ಣ, ಲೌಕಿಕಮುಖನಾದುದರಿಂದ ಈಗಿನ

ನನ್ನ ಗೀತರಚನೆಯಲ್ಲಿ ಆತ ಸಹಕರಿಸುತ್ತಿರಲಿಲ್ಲ. ನಾನೊಬ್ಬನೆ ರಚಿಸತೊಡಗಿದ್ದೆ. 'ಗಿರಿಪುರೀಶ' ಎಂಬುದು ನನ್ನ ಅಂದಿನ ಪದಗಳ ಕೊನೆಯಲ್ಲಿ ಅಂಕಿತ-ವಿರುತ್ತಿದ್ದಿತು. ಆಗಲೂ ನನಗೆ ಸಾಹಿತ್ಯಶಾಸ್ತ್ರದ ಗಂಧವಿರಲಿಲ್ಲ; ಅದು ಆವಶ್ಯಕವಿದೆಯೆಂಬ ಅರಿವೂ ಇರಲಿಲ್ಲ.

ರಸಸಂಸ್ಕಾರವಾಗುವಂತಹ ಇನ್ನೊಂದು ಘಟನೆ ಇದೇ ಸಂಧಿಕಾಲದಲ್ಲಿ ಒದಗಿತು. ಊರಲ್ಲಿಯ ಹಿರಿಯ ಸವಿಗಾರರು ಕೆಲವರು ನಾಟಕ ಮಾಡಬೇಕೆಂದು ನಿರ್ಧರಿಸಿದರು. ನನಗೆ ಹಾಡಲಿಕ್ಕೆ ಮಿಕ್ಕವರಿಗಿಂತ ಚೆನ್ನಾಗಿ ಬರುತ್ತಿದ್ದಿತಾದುದರಿಂದ, ನನ್ನನ್ನೂ ನಾಟಕದಲ್ಲಿ ಸೇರಿಸಿಕೊಳ್ಳ-ಬೇಕೆಂದು ಅವರು ಹಾರಯಿಸಿದರು. ನಮ್ಮ ಹಿರಿಯ ಅಣ್ಣದಿರೊಬ್ಬರು ಈ ರಸಿಕರ ಬಳಗಕ್ಕೆ ಸೇರಿದವರು. ನನಗೆ ಆ ನಾಟಕಮಂಡಲಿಯಲ್ಲಿ ಸೇರಿ-ಕೊಳ್ಳಲಿಕ್ಕೆ ಮನಸ್ಸು ಇಲ್ಲದಿದ್ದರೂ—ಊರವರ ಮನಸ್ಸನ್ನು ಮುರಿಯಲಾರದೆ ನಮ್ಮ ತಾಯಿ ಕೂಡ ಹೋಗಲಿಕ್ಕೆ ಒಪ್ಪಿಗೆ ಕೊಟ್ಟುದರಿಂದ—ನಾಟಕದಲ್ಲಿ ಪಾತ್ರ ವಹಿಸಬೇಕಾಯಿತು. ಅರ್ಧನಾಟಕ ಮುಗಿವ ವರೆಗೆ ರಾಜನ ಹೆಂಡತಿ-ಯೊಬ್ಬಳ ಪಾತ್ರ, ಆಮೇಲೆ ಕೊನೆಯ ವರೆಗೆ ರಾಜನ ಮಗನ ಪಾತ್ರ—ನಾನು ಮಾಡಬೇಕೆಂದಾಯಿತು. ಸರಿ. ತಾಲೀಮು ಪ್ರಾರಂಭವಾಗಿ ನಾಟಕ ರಂಗದ ಮೇಲೂ ಬಂತು. ನಮ್ಮ ಹಳ್ಳಿಯಲ್ಲಿಯೆ ಮೂರು ಸಲ ಆಡಿದೆವು. ಹತ್ತು ಸಾವಿರಗಟ್ಟಲೆ ಕೂಡಿದ ಜನಸಂದಣಿಯ ಮೂಲಕ ಮೊದಲನೆಯ ಸಲ ಗಾಬರಿಗೊಂಡೆ. ಮುಂದಿನವೆರಡು ಪ್ರಯೋಗಗಳಲ್ಲಿ ನಿರ್ಭೀತನಾಗಿದ್ದೆ. ನೋಡಿದ ಜನರು ನನ್ನೊಬ್ಬನ ಅಭಿನಯವನ್ನೇ ತುಂಬ ಹೊಗಳುತ್ತಿದ್ದರು. ರಾಣಿಯಾಗಿದ್ದಾಗ ಸವತಿಮಾತ್ಸರ್ಯದ ದೌಷ್ಟ್ಯದ ಪ್ರದರ್ಶನವಿರುತ್ತಿದ್ದಿತು. ರಾಜನ ಮಗನಾದಾಗ, ವನವಾಸದಲ್ಲಿದ್ದ ದುಃಖವನ್ನು ಅಭಿನಯಿಸಬೇಕಾಗು-ತ್ತಿದ್ದಿತು. ಈ ನಾಟಕಾಭಿನಯವೂ ನನ್ನ ಮನಸ್ಸು-ಹೃದಯ-ಬುದ್ಧಿಗಳ ವಿಕಾಸಕ್ಕೆ ಕಾರಣವಾಗದೆ ಹೋಗಿರಲಾರದು.

ನನ್ನ ಮುಂದಿನ ವಿದ್ಯಾಭ್ಯಾಸಕ್ಕಾಗಿ ದಾರಿ ಕಾಯುತ್ತಲಿರುವಾಗ, ಟ್ರೇನಿಂಗ್ ಕಾಲೇಜಿನಲ್ಲಿ ಓದುತ್ತಿದ್ದ ನನ್ನ ಅಣ್ಣನಿಗೆ, ಕೊನೆಯ ವರ್ಷ ಕಟ್ಟಿನ ಜ್ವರವು ಬಂದು ಸತ್ತುಸತ್ತು ಉಳಿದರೂ, ಆ ಜ್ವರದ ಮೂಲಕ ಉಂಟಾದ ಅಶಕ್ತತೆ ಆತನಲ್ಲಿ ಕ್ಷಯದ ಬೀಜವನ್ನು ಬಿತ್ತಿಹೋಯಿತು. ಅಂತಹ ಅಶಕ್ತತೆಯಲ್ಲಿಯೆ ಆತನ ನೌಕರಿ ಪ್ರಾರಂಭವಾಯಿತು. ಇಂಗ್ಲಿಷ್ ಕಲಿಯಲು

ಏರ್ಪಾಡುಮಾಡಿ ನನ್ನನ್ನು ಎಲ್ಲಿಯಾದರೂ ಇರಿಸಬೇಕೆಂದಿರುವಾಗಲೆ ನನಗೆ ಪ್ಲೇಗು ಬಂದಿತು. ಅದರಿಂದ ಉಳಿದುದು ಮರುಹುಟ್ಟಿದಂತಾಯಿತು. ಪ್ಲೇಗಿನ ಪರಿಣಾಮವಾಗಿ ಇಂದ್ರಿಯಪಾಟವ ಹಾಳಾಗಿಹೋಯಿತು. ಕಣ್ಣು ಕಾಣುತ್ತಿರಲಿಲ್ಲ; ಕಿವಿ ಕೇಳುತ್ತಿರಲಿಲ್ಲ. ಎದ್ದು ನಿಲ್ಲುವುದೊತ್ತಟ್ಟಿಗಿರಲಿ, ನನ್ನ ತುತ್ತನ್ನು ನಾನೆ ನನ್ನ ಬಾಯಲ್ಲಿ ಹಾಕಿಕೊಳ್ಳಲಿಕ್ಕೆ ಸಾಧ್ಯವಿರಲಿಲ್ಲ. ನಾನು ಹೀಗೆ ಪರಾಧೀನಸ್ಥಿತಿಯಲ್ಲಿ ಇರುವಾಗಲೆ ಕ್ಷಯರೋಗಿಯಾದ ನಮ್ಮ ಅಣ್ಣ ತೀರಿದರು. ಮದುವೆಯಾಗಿ ಎರಡು ವರ್ಷ ತುಂಬಿರಲಿಲ್ಲ. ವಿಧವೆಯಾಗಿ ಮನೆಯಲ್ಲಿಯೆ ಇದ್ದ ನಮ್ಮ ಅಕ್ಕನ ಮಗಳನ್ನೆ ಆತನಿಗೆ ತೆಗೆದುಕೊಂಡಿದ್ದಿತು. ಈ ಅಣ್ಣನ ಮರಣದಿಂದ ನಮ್ಮ ಮನೆತನವೆಂದರೆ ಒಂದು ಕರುಣೆಯ ಆಕರವಾಗಿ ಪರಿಣಮಿಸಿತು. ಮಗನನ್ನು ಕಳೆದುಕೊಂಡ ತಾಯಿ, ಗಂಡನನ್ನು ಕಳೆದುಕೊಂಡ ಹರಯದ ಹೆಂಡತಿ, ಮಗಳೂ ವಿಧವೆಯಾದುದನ್ನು ಕಂಡ ವಿಧವೆ ಅಕ್ಕ, ಇವರೆಲ್ಲರ ದುಃಖದ ಉರಿಯನ್ನು, ಮನೆಯಲ್ಲಿಯೆ ಬಿದ್ದುಕೊಂಡ ನಾನು ಸಂಪೂರ್ಣವಾಗಿ ಅನುಭವಿಸಿದೆ. ಮನಸ್ಸು ಮರುಗುತ್ತಿತ್ತು. ಕರುಳು ಕುದಿಯುತ್ತಿತ್ತು. ಈ ಕಾವು ನನ್ನ ಹೃದಯಕ್ಕೆ ಸಾಕಷ್ಟು ಸಂಸ್ಕಾರ ಕೊಟ್ಟಿದೆ ಎಂದು ಹೇಳಬಹುದು.

ಇಂತಹ ಕಾಲದಲ್ಲಿಯೆ, ಒಂದು ವರ್ಷ ಅತಿವೃಷ್ಟಿಯಿಂದ ಬೆಳೆಗೇಡಾದರೆ ಇನ್ನೊಂದು ವರ್ಷ ಅನಾವೃಷ್ಟಿಯಿಂದ ಭೂಮಿ ಬಿತ್ತಿಗೆಯನ್ನೇ ಕಾಣಲಿಲ್ಲ. ಬರಗಾಲದ ಮೇಲೆ ಬರಗಾಲ; ಮನೆಯಲ್ಲಿ ತರುಬರುವ ಹಿರಿಯರಿಲ್ಲ. ಆದುದರಿಂದ ತಂದೆ-ಅಣ್ಣದಿರ ವಿಯೋಗದುಃಖದೊಂದಿಗೆ ದಾರಿದ್ರ್ಯದುಃಖವೂ ನಮ್ಮ ಮನೆತನದಲ್ಲಿ ತನ್ನ ಕೈಚಳಕ ತೋರಿಸತೊಡಗಿತು. ಇಂತಹದರಲ್ಲಿ ನನ್ನ ಒಲವನ್ನರಿತು ಮುಂದಿನ ವಿದ್ಯಾಭ್ಯಾಸಕ್ಕೆ ದಾರಿಮಾಡಿ ಕೊಡುವವರು ಯಾರು ? ಮುಂದಿನ ವಿದ್ಯಾಭ್ಯಾಸದ ದಾರಿಯನ್ನೆ ಬಿಟ್ಟಂತಾಯಿತು.

೧೯೧೬ನೆಯ ಇಸ್ವಿಯಲ್ಲಿ ಮತ್ತೆ ಮನುಷ್ಯವರ್ಗದಲ್ಲಿ ಬಂದು ಸೇರಿದೆ. ಕಣ್ಣು ಕಾಣತೊಡಗಿದುವು. ಕಿವಿಗಳು ಕೇಳತೊಡಗಿದುವು. ಜೋಲಿ ಹೊಡೆಯುತ್ತಲಾದರೂ ನಡೆದಾಡಲು ಪ್ರಾರಂಭಿಸಿದೆ. ನಮ್ಮ ಮನೆತನಕ್ಕೆ ಪರಂಪರೆಯಿಂದ ನಡೆದುಕೊಂಡು ಬಂದ ಕುಲಕರಣಿಕೆಯ ಕೆಲಸ ಮಾಡಲಿಕ್ಕೆ ಮನೆಯಲ್ಲಿ ಯಾರಾದರೂ ಕನ್ನಡ ಮುಲಕೀ ಪರೀಕ್ಷೆ ಪಾಸಾದವರು ಬೇಕಾಗಿದ್ದರು, ಅದಕ್ಕಾಗಿ ನಾನು, ನಮ್ಮ ಅಣ್ಣ ಇಬ್ಬರೂ ಮನೆಯಲ್ಲಿಯೆ ಅಭ್ಯಾಸ ಮಾಡಿ,

೧೯೧೭ರಲ್ಲಿ ಮುಲಕೀ ಪರೀಕ್ಷೆಗೆ ಕುಳಿತೆವು. ಅದೇ ವರ್ಷ ಇಬ್ಬರೂ ಪಾಸಾದೆವು. ಅಣ್ಣ ಕುಲಕರಣಿಕೆಯ ಕೆಲಸ ನಿಯಮಿಸಿಕೊಂಡುದರಿಂದ ನಾನು ನಿರುದ್ಯೋಗಿಯಾದೆ. ಊರಲ್ಲಿ ವಾಚನಾಲಯವನ್ನು ಪ್ರಾರಂಭಿಸಿದೆ. ಪ್ರಯತ್ನಪಟ್ಟು ೧೦-೧೨ ಪತ್ರಿಕೆಗಳು ಬರುವಂತೆ ಏರ್ಪಾಡು ಮಾಡಿದೆ. ಅಂತಹ ಬರಿಗೈ ಬಾಳಿನ ಕಾಲದಲ್ಲಿಯೂ ನಮ್ಮ ತಾಯಿ, ನನಗೆ ಬೇಕಾಗುವ ಪುಸ್ತಕ ಪಡೆಯಲಿಕ್ಕೆ ಹೇಗೋ ದುಡ್ಡನ್ನು ಒದಗಿಸಿಕೊಡುತ್ತಿದ್ದರು.

ಧಾರವಾಡದಲ್ಲಿ ಹೊಸದಾಗಿ (೧೯೧೮) ಹೊರಟ 'ಪ್ರಭಾತ' ಎಂಬ ಪದ್ಯಮಯ ಮಾಸಪತ್ರಿಕೆಯೂ ನನ್ನ ವಾಚನಾಲಯಕ್ಕೆ ಬರುತ್ತಿದ್ದಿತು. ಅದರಲ್ಲಿ ಪ್ರಕಟವಾದ 'ಶಾಂತಕವಿ' 'ಕಾವ್ಯಾನಂದ' 'ಕೆ. ಬಸವಾರ್ಯ' 'ಶ್ರೀನಿವಾಸ' ಮೊದಲಾದವರ ಕವನಗಳು ನನಗೆ ತುಂಬ ರುಚಿಸಿದುವು. 'ಅಂಬಿಕಾತನಯದತ್ತ' ಎಂಬ ಹೆಸರಿನಿಂದ ಪ್ರಕಟವಾದ ನಾಲ್ಕಾರು ಕವನಗಳಲ್ಲಿ ಮಿಕ್ಕವಾವುವೂ ಅಂದು ನನಗೆ ಅರ್ಥವಾಗಲಿಲ್ಲ; 'ತುತೂರಿ' ಎಂಬುದು ಮಾತ್ರ ತುಂಬ ಸೇರಿತು. ಹಲವು ಸಲ ಓದಿದುದರಿಂದ ಅದು ನನಗೆ ಬಾಯಿಪಾಠವೂ ಆಯಿತು. 'ಪ್ರಭಾತ'ದಲ್ಲಿ ಪ್ರಕಟವಾದ ಬೇರೆ ಹಲವರ ಕವಿತೆಗಳನ್ನು ನೋಡಿದಾಗ, ನಾನೂ ನನ್ನ ಕವಿತೆಗಳನ್ನೇಕೆ ಪ್ರಕಟನೆಗೆ ಕಳಿಸಬಾರದೆಂದುಕೊಂಡೆ. 'ಭಕ್ತಿಕುಸುಮಾವಳಿ' ಎಂಬ ಹೆಸರಿನಿಂದ ಕೆಲವು ಭಾಮಿನೀಷಟ್ಪದಿಗಳನ್ನು ರಚಿಸಿ ಕಳುಹಿದೆ. 'ಅದನ್ನು ಪ್ರಕಟಿಸಲಾಗುವುದು' ಎಂಬ ಪತ್ರ ಬಂದ ದಿನ ನನಗಾದ ಆನಂದವನ್ನು ನೋಡಿ ಹಿರಿಹಿರಿ ಹಿಗ್ಗಿದ ನನ್ನ ತಾಯಿ, ಅದು ಪ್ರಕಟವಾಗುವ ವರೆಗೆ ಬದುಕಿರಲಿಲ್ಲ. ೧೯೧೮ರಲ್ಲಿ ಭಾರತಕ್ಕೆ ನುಗ್ಗಿದ ಇನ್‌ಫ್ಲುಯೆಂಝಾ ಮಾರಿ, ನಮ್ಮ ತಾಯಿಯನ್ನು ಕಬಳಿಸಿ ಬಿಟ್ಟಿತು. ಪ್ರಭಾತದ ಮೊದಲನೆಯ ವರ್ಷದ ೧೦-೧೧ನೆಯ ಸಂಯುಕ್ತಾಂಕವಲ್ಲಿ ನನ್ನ ಕವಿತೆ ಪ್ರಕಟವಾಗಿ ಬಂದುದನ್ನು ಕಂಡಾಗ, ನನಗಾದ ಆನಂದ ಅಷ್ಟಿಷ್ಟಲ್ಲ. ಊಟಕ್ಕೆ ಕುಳಿತಾಗ ಸಂಚಿಕೆ ನನ್ನ ಕೈಗೆ ಸಿಕ್ಕಿತು; ನೋಡಿ ಹಾಗೆಯೆ ಕುಣಿದಾಡುತ್ತ ಊಟವನ್ನು ಬಿಟ್ಟು ಎದ್ದುದು ನನ್ನ ನೆನಪಿನಲ್ಲಿದೆ. ಈ ಪ್ರಕಟನೆಯ ಉತ್ಸಾಹ ಹಲವು ಕವಿತೆಗಳನ್ನು ರಚಿಸಿ ಪ್ರಭಾತಕ್ಕೆ ಕಳುಹಲು ಪ್ರಚೋದಿಸಿತು. 'ಸುಧನ್ವೋಪಾಖ್ಯಾನ' 'ರಮೆಯುಮ್ಮೆಯರ ವಿನೋದ ಸಂವಾದ' 'ನಿದ್ರಾದೇವಿ' ಕೆಲವು ಕೀರ್ತನೆಗಳು ಇವೆಲ್ಲ ಪ್ರಕಟನೆಗಾಗಿ ಹೋದುವು. ಸಂಪಾದಕರಿಂದ ಪ್ರಕಟನೆಯ ಆಶ್ವಾಸನ

ಪ್ರತಿಯೊಂದಕ್ಕೂ ದೊರೆಯುತ್ತಿತ್ತು. ಒಂದೆರಡು ಕೀರ್ತನೆಗಳು, 'ನಿದ್ರಾ-ದೇವಿ' ಪ್ರಭಾತದಲ್ಲಿ ಅಚ್ಚಾದುವು. ಜನರಿಂದ ಪ್ರೋಷಣೆ ಸಾಕಷ್ಟು ದೊರೆಯ-ದುದರಿಂದ ಎರಡನೆಯ ವರ್ಷದ ಕೊನೆಯೊಂದಿಗೆ 'ಪ್ರಭಾತ'ದ ಜೀವನದ ಕೊನೆಯೂ ಆಯಿತು. ಪ್ರಕಾಶನಕ್ಕೆಂದು ಹೋದ ಕವಿತೆಗಳು ಹಾಗೆಯೆ ಉಳಿದುವು.

ಪ್ರಭಾತದಲ್ಲಿ ಪ್ರಕಟವಾದ ಕವಿತೆಗಳ ಕಾರಣದಿಂದಲೆ ನನಗೆ ದಿವಂಗತ ಕಾವ್ಯಾನಂದರ (ನರಸಿಂಹಾಚಾರ್ಯ ಪುಣೇಕರ) ಪರಿಚಯವಾಯಿತು. ೧೯೪೯ರಲ್ಲಿ ಕೆಲಸವನ್ನೇನಾದರೂ ದೊರಕಿಸಲೆಂದು ನಾನು ಬೆಳಗಾಂವಿಗೆ ಹೋಗಿದ್ದೆ. ಶ್ರೀ. ಕೊಪ್ಪಳ ಜಯರಾಮಾಚಾರ್ಯರು ಶ್ರೀ. ಚಿತ್ರವಾಡಿಗಿ ಹನುಮಂತಗೌಡರೊಂದಿಗೆ ಕನ್ನಡದ ಪ್ರಚಾರಕ್ಕಾಗಿ ಕೀರ್ತನ ಮಾಡುತ್ತ ಬೆಳಗಾಂವಿಗೆ ಬಂದಿದ್ದರು. ಜಯರಾಮಾಚಾರ್ಯರಿಗೆ ಹಿಮ್ಮೇಳದವರಾರೂ ಇರಲಿಲ್ಲವಾದುದರಿಂದ, ನನ್ನ ಗೆಳೆಯರು ಕೆಲವರು, ಹಾಡಲು ಬರುವುದೆಂದು ನನ್ನನ್ನು ಒತ್ತಾಯಮಾಡಿ ಹಿಮ್ಮೇಳದಲ್ಲಿ ನಿಲ್ಲಿಸಿದರು. ಅಂದಿನ ಕೀರ್ತನಕ್ಕೆ ನನ್ನ ಸಂಗೀತದ ನೆರವು ಸಾಕಷ್ಟು ಸಿಕ್ಕಿತು. ಕೀರ್ತನದ ಕೊನೆಯಲ್ಲಿ, ಪ್ರೇಕ್ಷಕರಾಗಿ ಬಂದಿದ್ದ ಕಾವ್ಯಾನಂದರು, ಕೀರ್ತನಕಾರರನ್ನು ಹೊಗಳಿ ಮಾತನಾಡಿದರು. ನಾನಾರೆಂಬುದನ್ನೂ ಆಗಲೇ ಕೇಳಿ ತಿಳಿದುಕೊಂಡರು.

ಡಾ. ಸವಣೂರರು ಆಗ ಬೆಳಗಾಂವಿಯಲ್ಲಿ ಕರ್ನಾಟಕತ್ವದ ಪ್ರಚಾರದ ಸತ್ರವನ್ನೆ ನಡೆಯಿಸಿದ್ದರು. ಅದಕ್ಕಾಗಿ ಧಾರವಾಡದಿಂದ ಶ್ರೀ. ಆಲೂರ ವೆಂಕಟರಾಯರು, ಶ್ರೀ. ಮುದವೀಡು ಕೃಷ್ಣರಾಯರು, ಶ್ರೀ. ನರಗುಂದ ರಾಮರಾಯರು, ಶಾಂತಕವಿಗಳು ಇವರನ್ನು ಕರೆಯಿಸಿಕೊಂಡರು. ನಿತ್ಯವೂ ಜಯರಾಮಾಚಾರ್ಯರ ಕೀರ್ತನ, ಈ ವಕ್ತಾರರ ಉಪನ್ಯಾಸ ತಪ್ಪದೆ ನಡೆ-ಯುತ್ತಿದ್ದುವು. ಜಯರಾಮಾಚಾರ್ಯರ ಹಿಮ್ಮೇಳದವನಾಗಿ ನಿತ್ಯವೂ ನಿಲ್ಲತೊಡಗಿದುದರಿಂದ ನಾನೂ ಕನ್ನಡಪ್ರಚಾರಕರ ಗುಂಪಿನಲ್ಲಿ ಒಬ್ಬನಾಗಿ ಬಿಟ್ಟೆ. ಕನ್ನಡ ಭಾಷೆಯ ದುಃಸ್ಥಿತಿ, ಕನ್ನಡ ನಾಡಿನ ಛಿನ್ನವಿಚ್ಛಿನ್ನತೆಯ ದುಷ್ಪರಿಣಾಮ ನನಗೆ ಗೊತ್ತಾದುದು ಈ ಕಾಲದಲ್ಲಿ. ಕನ್ನಡಿಗರ ಗತವೈಭವ-ವನ್ನರಿತು ಹೆಮ್ಮೆಪಟ್ಟಿದೂ ಈ ಕಾಲದಲ್ಲಿ.

ಕಾವ್ಯಾನಂದರು ನನ್ನ ಸ್ಥಿತಿ–ಗತಿಗಳನ್ನು ಕೇಳಿಕೊಂಡರು. ನನ್ನ ಕೈ ನೋಡಿದರು, ಮುಖಸಾಮುದ್ರಿಕವನ್ನು ನೋಡಿದರು. "ನೀನು ಲಕ್ಷಣ–

ವಂತನಿದ್ದೀಯೆ. ನಿನಗೆ ಒಳ್ಳೆಯ ಭವಿಷ್ಯವಿದೆ. ಮನಸ್ಸಿದ್ದರೆ ನನ್ನೊಂದಿಗೆ ಬಾ! ನಿನಗೆ ಸಂಸ್ಕೃತ ಸಾಹಿತ್ಯದ ಪಾಠವನ್ನು ಕೊಡುತ್ತೇನೆ" ಎಂದು ಹೇಳಿದರು. ನಾನು ಕೆಲಸ ದೊರಕಿಸುವುದಕ್ಕೆ ಮಾಡಿದ ಪ್ರಯತ್ನವು ಫಲಿಸು-ವುದರಲ್ಲಿತ್ತು. ಆದರೆ ಕಾವ್ಯಾನಂದರ ಮಾತಿನಿಂದ ಕೆಲಸದ ಆಶೆಯನ್ನು ಬಿಟ್ಟು ಅವರ ಬೆನ್ನುಹತ್ತಿ ನಡೆದೆ. ಆಗ ನನ್ನೆದೆಯಲ್ಲಿಯ ದೈವಭಕ್ತಿಯ ಸ್ಥಾನವನ್ನು ಕನ್ನಡದ ಭಕ್ತಿ ಆಕ್ರಮಿಸಿದ್ದಿತು. ಅದರ ಪರಿಣಾಮವಾಗಿ 'ಕರ್ನಾಟಕಾಂಬೆ ನೀ ಧನ್ಯೆಧನ್ಯೆ' ಎಂಬ ಹಾಡು ಹೊರಕ್ಕೆ ಬಂದು, ನನ್ನ ಗೆಳೆಯರೆ ಒಬ್ಬರು ಬೆಳಗಾಂವಿಯಲ್ಲಿ ಪ್ರಾರಂಭಿಸಿದ್ದ 'ನವನೀತ' ಎಂಬ ಮಾಸಪತ್ರಿಕೆಯ ಮೊದಲನೆಯ ಸಂಚಿಕೆಯಲ್ಲಿ ಅಚ್ಚಾಯಿತು.

ಕಾವ್ಯಾನಂದರೊಂದಿಗೆ ಕಳೆದ ಕಾಲ ೫-೬ ತಿಂಗಳುಗಳಷ್ಟೇ ಆದರೂ ಆ ಕಾಲ ವಿವಿಧ ಮುಖದ ಲೋಕಾನುಭವವನ್ನು ಒದಗಿಸಿಕೊಟ್ಟಿತು. ನನ್ನ ಸಾಹಿತ್ಯ ನಿರ್ಮಿತಿಯ ಹೊರ-ಒಳರೂಪುಗಳು ಒಂದು ಬಗೆಯ ಒಪ್ಪನ್ನು ಪಡೆಯಲು ಅವಕಾಶವನ್ನೊದವಿಸಿತು. ಅವರಿಗೂ ಆಗ ಸಾಮಾನ್ಯಕಾಲ. ಆರ್ಥಿಕತೊಂದರೆ ಬಂದು ಒದಗಿತು. ಅದನ್ನು ತಿಳಿದೂ ಅವರ ಮೇಲೆ ಭಾರಹಾಕಲು ನನಗೆ ಮನಸ್ಸಾಗಲಿಲ್ಲ. ಆದುದರಿಂದ ಕಿತ್ತೂರನ್ನು ಬಿಟ್ಟು ಮರಳಿ ಬೆಟಗೇರಿಗೆ ಬಂದುಬಿಟ್ಟೆ.

ನನ್ನ ಸಾಹಿತ್ಯ ಜೀವನವನ್ನು ಇನ್ನೊಂದು ಹೊಸ ಪ್ರವಾಹ ಮುಂದು-ವರಿಸಲು ಕಾರಣವಾಯಿತು. ಆ ಹೊಸ ಪ್ರವಾಹವೆಂದರೆ ೧೯೨೧ರಲ್ಲಿ ಪ್ರಾರಂಭವಾದ ಅಸಹಕಾರ ಚಳವಳಿ. ಆಗ ಡಾ. ಸವಣೂರ ಅವರ ಪರಿಚಯದ ನೆರವಿನಿಂದ ಬೆಳಗಾಂವಿಯ ರಾಷ್ಟ್ರೀಯ ಶಾಲೆಯಲ್ಲಿ ಕನ್ನಡ ಅಧ್ಯಾಪಕನಾಗಿ ಸೇರಿದೆ. ನಿವಾಸ-ಅಲ್ಲಿಯ ಅಸಹಕಾರ ಚಳುವಳಿಯ ಕೆಲಸ-ಗಾರರಿಗಾಗಿ ಸ್ಥಾಪಿತವಾಗಿದ್ದ "ಸ್ವರಾಜ್ಯಾಶ್ರಮ"ದಲ್ಲಿ. ಅಲ್ಲಿಯ ನಿಯಮಿತ ಜೀವನವೂ ಶ್ರಮಸಹಿಷ್ಣುತೆಯೂ ಸಂಸ್ಕಾರ ಸಂಪನ್ನರಾದ ಆಶ್ರಮವಾಸಿ ಗೆಳೆಯರ ಸಹವಾಸವೂ ನನ್ನ ಬಾಳಿಗೆ ಹೊಸ ಗುರಿಯನ್ನೇ ತೋರಿದುವು. ದಿವಂಗತ ಕರಗುಪ್ಪಿ ಕೃಷ್ಣರಾಯರೂ ದಿವಂಗತ ಮಜಲೀ ವಕೀಲರೂ ನನಗೆ ತಿಳಿಯದಂತೆಯೆ ನನ್ನ ಬಾಳನ್ನು ತಿದ್ದಿದರು. ಆಶ್ರಮದ ಸಂಚಾಲಕರಾದ ಶ್ರೀ ಫೈಸಾಂಸ ಎಂಬವರ ಸಾಹಿತ್ಯಪ್ರೀತಿ-ಜ್ಞಾನಲಾಲಸೆಗಳೂ ಹರಿತವಾದ ಬುದ್ಧಿಯೂ ನನಗೆ ಆದರ್ಶವಾಗಿ ತೋರಿದುವು. ಅವರೊಂದಿಗೆ ನಾನು

ಮರಾಟಿಯ ಆಧುನಿಕ ಕವಿಗಳಾದ 'ಕೇಶವಸುತ' 'ಗೋವಿಂದಾಗ್ರಜ' ರೆವರೆಂಡ್ ಟಿಳಕ, ಬಾಲಕವಿ ಠೋಂಬರೆ, ಸಾವರಕರ, ಟೇಕಾಡೇ ಮೊದಲಾದವರ ಕವನಸಂಗ್ರಹಗಳನ್ನೋದಿದೆನು. ಅಭಂಗ ವಾಙ್ಮಯ, ಮಹಾರಾಷ್ಟ್ರೀಯ ಪ್ರಾಚೀನ ಕಾವ್ಯಗಳು ಕೆಲವು ಇವುಗಳ ಪರಿಚಯ ಮಾಡಿಕೊಂಡೆನು. ಕಾವ್ಯಕ್ಕೆ ಛಂದಸ್ಸು-ಅಲಂಕಾರ ಅಗತ್ಯವೆಂಬ ತಿಳುವಳಿಕೆ ನನಗಾದುದು ಇಲ್ಲಿಯೆ.

ರಾಷ್ಟ್ರಭಕ್ತಿಯನ್ನು ಉದ್ದೀಪಿಸುವ ಹಲವು ಹಾಡು-ಕವಿತೆಗಳನ್ನು ಇಲ್ಲಿ ಇರುವಾಗ ರಚಿಸಿದೆ. 'ರಾಷ್ಟ್ರೀಯ ಪದ್ಯಾವಲಿ' 'ರಾಷ್ಟ್ರೀಯ ಪದ್ಯಮಾಲೆ' 'ಗಾಂಧೀ ಗೀತಸಪ್ತಕ' 'ಮೇಳದ ಪದಗಳು' ಎಂಬ ರಾಷ್ಟ್ರೀಯತಾಪ್ರಚಾರಾತ್ಮಕ ಪದಸಂಗ್ರಹಗಳು ಪ್ರಸಿದ್ಧಿಸಿದುದು ಇಲ್ಲಿ ಇರುವಾಗಲೆ. ಹೊಸತಾಗಿಯೆ ಪ್ರಾರಂಭವಾಗಿದ್ದ 'ಜಯಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟವಾದ ಕವನಗಳು ಇಲ್ಲಿರುವಾಗಲೆ ರಚಿತವಾದುವು. ಇವೆಲ್ಲವುಗಳಿಗೆ ಪ್ರೇರಕವಾದುದು ಆಗ ನನ್ನ ಹೃದಯ-ಮನಗಳನ್ನು ತುಡಿಯುತ್ತಿದ್ದ ದೇಶಭಕ್ತಿ-ಸ್ವಾತಂತ್ರ್ಯಪ್ರೀತಿಗಳು. ಕನ್ನಡನಾಡಿನ ಪ್ರೀತಿಯೂ ಈ ರಾಷ್ಟ್ರಭಕ್ತಿಯ ಒಂದು ಅಂಗವೆಂದು ನನ್ನ ದೃಢವಾದ ಭಾವನೆಯಾಗಿತ್ತು. ಕನ್ನಡವು ಕರ್ಕಶವೆಂದು ಹೀಗಳೆದು ನುಡಿವವರನ್ನು ನೋಡಿ, ಕೆಣಕಿದವನಾಗಿ 'ಎನಿತು ಇನಿದು ಈ ಕನ್ನಡ ನುಡಿಯು?' ಎಂಬ ಹಾಡನ್ನು ಅಲ್ಲಿಯೆ ಹಾಡಿದೆನು. ಮಹಾರಾಷ್ಟ್ರೀಯರ ಮಹಾರಾಷ್ಟ್ರಭಕ್ತಿಯನ್ನು ಕಂಡ ನಾನು, ನನ್ನ ದೇಶಭಕ್ತಿಯಲ್ಲಿ ನಾನೇಕೆ ಹಿಂದುಳಿಯಬೇಕೆಂದು 'ನನ್ನದು ಈ ಕನ್ನಡ ನಾಡು' ಎಂಬ ಹೆಮ್ಮೆಯ ಹಾಡನ್ನು ಹೊರಕ್ಕೆ ಹಾಕಿದೆನು. ಕನ್ನಡಿಗರ ವೈಭವ-ಪರಾಕ್ರಮಗಳು ನೆನಪಾಗುವಂತೆ 'ಆ ಮಾಧವನೆಲ್ಲಿರುತಿಹನು?' 'ಕೊಡಲಾರೆನೆನ್ನ ಕೈದುವನು' ಮೊದಲಾದ ಗೀತಕವನಗಳನ್ನು ಅಲ್ಲಿಯೆ ಬರೆದೆನು. ನಾನೊಬ್ಬ ಕನ್ನಡ ಲೇಖಕನೆಂಬ ತಿಳುವಳಿಕೆಯಿಂದ, ಶ್ರೀ. ಗಂಗಾಧರರಾಯರೂ ಶ್ರೀ. ಯಾಳಗೀ ಗೋವಿಂದರಾಯರೂ ದಿವಂಗತ ಕರಗುಪ್ಪಿಯವರು ಕೈಕೊಂಡಿದ್ದ 'ಮಾತೃಭೂಮಿ' ಮಾಸಪತ್ರಿಕೆಯ ಸಂಪಾದಕತ್ವದ ಹೊಣೆಯನ್ನು ನನ್ನ ಮೇಲೆ ಹೊರಸಿದರು. ಒಂದು ವರ್ಷದ ದಿನ ಅದನ್ನು ನಡೆಯಿಸಿ, ಶ್ರೀಮಾನ್ ಮಜಲಿಯವರ ಹಣವನ್ನು ಹಾಳುಮಾಡಿದೆನಾದರೂ ಪತ್ರಿಕಾಸಂಚಾಲನದ ಅನುಭವಲಾಭವನ್ನು ಪಡೆದೆನು.

೧೯೨೪ನೆಯ ಮೇ ತಿಂಗಳಲ್ಲಿ ಬೆಳಗಾಂವಿಯಲ್ಲಿ ಜರುಗಿದ ಸಾಹಿತ್ಯ

ಸಮ್ಮೇಳನದಲ್ಲಿ ಶ್ರೀ. ಪೋತದಾರ ರಂಗನಾಥರಾಯರೊಂದಿಗೆ ಕೆಲಸ ಮಾಡಿ, ಅವರ ಕನ್ನಡದ ತೀಕ್ಷ್ಣ ಅಭಿಮಾನವನ್ನು ಕಂಡುಕೊಂಡೆ. ಅವರ ಕನ್ನಡ ಪ್ರೀತಿ ನನ್ನನ್ನು ಸೆಳೆದು ಗೆಳೆತನ ಬೆಳೆಸಲು ಕಾರಣವಾಯಿತು. ಈ ಗೆಳೆತನವೇ ೧೯೨೫ರಲ್ಲಿ ಧಾರವಾಡಕ್ಕೆ ನನ್ನನ್ನು ಕರೆದು ತಂದಿತು; ಧಾರವಾಡದ ಗೆಳೆಯರ ಗುಂಪಿನ ಪರಿಚಯ ಮಾಡಿಕೊಟ್ಟಿತು. ಕನ್ನಡ ಸಾಹಿತ್ಯದ ವ್ಯವಸ್ಥಿತವಾದ ಅಭ್ಯಾಸ ನಡೆದುದು ಇಲ್ಲಿಯೆ. ಲಕ್ಷ್ಮೀಶ, ಕುಮಾರವ್ಯಾಸ, ರತ್ನಾಕರವರ್ಣಿ, ರನ್ನ, ಪಂಪ, ಮುದ್ದಣ, ವಚನಕಾರರು, ದಾಸರು ಇವರೆಲ್ಲರ ಸಾಹಿತ್ಯಕೃತಿಗಳನ್ನು ಅಭ್ಯಸಿಸಿದುದು ಇಲ್ಲಿಯೆ. 'ಭಾವಗೀತ' ಎಂಬ ಹೆಸರಿನಿಂದ ಭಕ್ತಿಗೀತೆಗಳನ್ನು ಸಂಕಲನ ಮಾಡಿದುದು ಇಲ್ಲಿಯೆ. 'ಮುದ್ದನ ಮಾತು' ಹೊರಕ್ಕೆ ಬಂದುದು ಇಲ್ಲಿಯೆ. 'ಸ್ವಧರ್ಮ' ಪತ್ರಿಕೆಯ ಸಂಪಾದಕನಾಗಿ ಒಳ್ಳೆಯ ಕತೆಗಾರನೆಂದು ಹೆಸರು ಪಡೆದುದೂ ಇಲ್ಲಿಯೆ. ನಾಡಹಬ್ಬವನ್ನು ಪ್ರಾರಂಭಿಸಿದುದೂ ಇಲ್ಲಿ ಇರುವಾಗಲೆ.

ನಾನು ೧೯೨೭ರಲ್ಲಿ ಬೆಂಗಳೂರಿನ 'ಆರ್ಯವಿದ್ಯಾಶಾಲೆ' ಯಲ್ಲಿ ಅಧ್ಯಾಪಕವೃತ್ತಿ ಕೈಕೊಂಡು ಅಲ್ಲಿಗೆ ಹೋದುದು, ಕನ್ನಡ ಸಾಹಿತ್ಯದ ಹೆಚ್ಚಿನ ಅಭ್ಯಾಸ ಮಾಡಬೇಕೆಂದು. ಅಭ್ಯಾಸದೊಂದಿಗೆ ಶ್ರೀ. ಮಾಸ್ತಿ ಮೊದಲಾದ ಕನ್ನಡ ಪ್ರಮುಖ ಸಾಹಿತ್ಯಿಕರ ಪರಿಚಯಲಾಭವೂ ಅಲ್ಲಿ ಆಯಿತು. ಗಣಪತಿ ದೇವಾಲಯದ ಕಾರಣದಿಂದ ಬೆಂಗಳೂರಲ್ಲಿ ನಡೆದ ಹಿಂದು-ಮುಸಲ್ಮಾನ್ ಕಲಹವನ್ನು ಕಣ್ಣಾರೆ ಕಂಡೆ. ಹಿಂದುಗಳ ಹೇಡಿತನವನ್ನು ಕಂಡು ಕೆರಳಿದ ಹೃದಯದವನಾದೆ. 'ರಾಮರಾಜನ ರಣದುಂದುಭಿ' 'ಬಾಲಭಟನ ವೀರ ವಾಣಿ' ಕವನಗಳು ಮೈವೆತ್ತುದು ಆಗಲೆ. 'ರಾಯ ಸತ್ತ ಹಾವಳಿ' ಎಂಬ ಹೆಸರಿನಿಂದ ವಿಜಯನಗರದ ವಿನಾಶದಿನದ ಚಿತ್ರಕಾವ್ಯವನ್ನು ಬರೆಯಬೇಕೆಂದು ಸಂಕಲ್ಪಿಸಿದುದು ಅಲ್ಲಿಯೆ. ಆದರೆ ಹಿಂದು-ಮುಸ್ಲಿಮ್ ಮೈತ್ರಿಯನ್ನು ಮನವಾರೆ ಕೋರುವ ಕೆಲವು ಕನ್ನಡ ಹಿರಿಯರ ಸಲಹೆಯ ಮೇರೆಗೆ ಆ ಕಾವ್ಯರಚನೆಯ ಸಂಕಲ್ಪವನ್ನು ಅಲ್ಲಿಯೆ ಕರಗಿಸಿಬಿಟ್ಟೆ.

ಇದುವರೆಗಿನ ನನ್ನ ಜೀವನದ ಅನುಭವ, ಅಭ್ಯಾಸ ಇವು ನನ್ನಲ್ಲಿ ಸ್ವಾಭಿಮಾನ, ಸ್ವಾತಂತ್ರ್ಯಪ್ರೀತಿಗಳನ್ನು ಜಾಗೃತಗೊಳಿಸಿದುವು. 'ಹಂಗಿ-ನರಮನೆಗಿಂತ ವಿಂಗಡದ ಗುಡಿ ಲೇಸು' ಎಂಬ ಸರ್ವಜ್ಞನ ನಿಸ್ಪೃಹ

ವೃತ್ತಿಯ ರಹಸ್ಯವನ್ನು ತಿಳಿದುಕೊಂಡವು ಎಂತಲೇ ಆರ್ಯವಿದ್ಯಾಶಾಲೆಯಲ್ಲಿಯ ಕೆಲಸಕ್ಕೆ ರಾಜೀನಾಮೆ ಕೊಟ್ಟು ಮರಳಿ ಬೆಟಗೇರಿಗೆ ಬಂದುಬಿಟ್ಟೆ. (೧೯೩೦)

ಇದುವರೆಗಿನ ಅವಧಿಯಲ್ಲಿ ನಡೆದ ಓದು ವಿವಿಧಮುಖವಾದುದು. ರವೀಂದ್ರರ ಸಾಹಿತ್ಯದ ಪರಿಚಯವನ್ನು ಅವರ ಭಾಷೆಯಲ್ಲಿಯೆ ಮಾಡಿಕೊಳ್ಳ ಬೇಕೆಂದು ಬಂಗಾಲಿ ಭಾಷೆಯ ಅಭ್ಯಾಸವನ್ನು ಅಲ್ಪಸ್ವಲ್ಪ ಮಾಡಿದ್ದೆ. ರಾಷ್ಟ್ರಭಾಷೆಯಾದ ಹಿಂದಿಯನ್ನು ಕಲಿಯುವುದು ಅವಶ್ಯವೆನಿಸಿದುದರಿಂದ, ಹಿಂದಿ ಭಾಷೆಯ ಆಧುನಿಕ ಸಾಹಿತ್ಯಿಕರ ಕೆಲವು ಕೃತಿಗಳನ್ನೂ ಓದಿದ್ದೆ. ಕನ್ನಡ ಭಾಷೆಯಲ್ಲಿ ಪ್ರಕಟವಾದ ಪುಸ್ತಕಗಳಲ್ಲಿ ಕೈಗೆ ದೊರೆತುವುಗಳನ್ನೆಲ್ಲ ವಿಮರ್ಶಾ ಪೂರ್ವಕ ಅಭ್ಯಾಸ ಮಾಡಿದ್ದೆ. ಆದುದರಿಂದ ನನಗೊಂದು ಲೇಖನಸಿದ್ಧಿ ದೊರೆತಂತಾಗಿತ್ತು. ಏನು ಬರೆದರೂ, ಓದಿ ಜನರು ಮೆಚ್ಚುವರೆಂಬ ನಂಬುಗೆ ತಲೆದೋರಿತ್ತು.

ಈ ನಂಬುಗೆಗೆ ಸರಿಯಾಗಿ ಜಯಕರ್ನಾಟಕದ ನನ್ನ ನಾಮರಹಿತ ಸಂಪಾದಕತ್ವ ಜನರಿಗೆ ಮೆಚ್ಚಿಕೆಯಾಯಿತು. ಬರೆದ ಸಣ್ಣಕತೆಗಳು, 'ಸುದರ್ಶನ' 'ರಾಜಯೋಗಿ' 'ಅಶಾಂತಿಪರ್ವ' ಮೊದಲಾದ ಕಾದಂಬರಿ ಗಳು ಜನದ ಮನವನ್ನು ಸೆಳೆದುಕೊಂಡುವು. ನನ್ನ ಸಣ್ಣಕತೆಗಳಲ್ಲಿ ನನ್ನ ಜೀವನದ ಅನುಭವದ ಛಾಯೆ ಪುಟಪುಟದಲ್ಲಿಯೂ ಮೂಡಿ ನಿಂತಿದೆ. ಹಳ್ಳಿಗರ ಬಾಳಿನ ಕಷ್ಟ-ನಷ್ಟಗಳನ್ನೂ ಸಂಸ್ಕೃತಿ-ಸೌಂದರ್ಯಗಳನ್ನೂ ಕನ್ನಡ ಸಾಹಿತ್ಯದಲ್ಲಿ ಮೊದಲಿಗೆ ಮುಂದೆ ತಂದವನೇ ನಾನು. ಕಾದಂಬರಿಗಳಲ್ಲಿಯೂ, ಜೀವನ ಗೀತಗಳ ಸಂಗ್ರಹವಾದ 'ವಿರಹಿಣಿ' 'ಒಡನಾಡಿ' 'ಕಾರಹುಣ್ಣಿವೆ' ಗಳಲ್ಲಿಯ ಕವನಗಳಲ್ಲಿಯೂ ನನ್ನ ಜೀವನದ ತತ್ತ್ವಜ್ಞಾನವು ಸ್ಪಷ್ಟವಾಗಿ ಮೂಡಿ ನಿಂತಿದೆ.

ನನ್ನ ವೈವಾಹಿಕ ಜೀವನದ ಅನುಭವವೂ, ಅರಿವು ಮರೆವುಗಳ ಮಧ್ಯ-ದಲ್ಲಿ ಓಡಾಡುವ ನನ್ನ ಹೆಂಡತಿಯೂ ನನ್ನ ಬಾಳನ್ನು ಹದಗೊಳಿಸಲಿಕ್ಕೆ ಇನ್ನಿಷ್ಟು ಕಾರಣಗಳನ್ನೊದವಿಸಿದರು. ನನ್ನ ಬಳಿಯಲ್ಲಿಯೆ ಇದ್ದು ತನ್ನ ಕಾಲೇಜಿನ ಪಾಠವನ್ನು ಸಾಗಿಸಿ, ಎಂ. ಎ. ಪದವಿ ಪಡೆಯಲಿದ್ದ ನನ್ನ ತಮ್ಮ ದಿವಂಗತ ವಿಜಯೀಂದ್ರನ ಸುಸಂಸ್ಕೃತ ಜೀವನದ ಸಹವಾಸವೂ, ಅಕಾಲ ಮರಣದಿಂದ ಉಂಟಾದ ಆತನ ಅಗಲಿಕೆಯೂ ನನ್ನ ಅನುಭವದ ಆಳವನ್ನು ಹೆಚ್ಚಿಸಲು ಹೆಚ್ಚಿನ ಸಾಧನವಾಗಿ ಪರಿಣಮಿಸಿದುವು. ಎಲ್ಲಕ್ಕಿಂತ ಹೆಚ್ಚಾಗಿ

ನನ್ನ ಹೃದಯವನ್ನು ಕಲಕಿ ಕಣ್ಣು ತೆರೆಯಲು ಹಚ್ಚಿದುದೆಂದರೆ ಮಾನವನ ಅಜ್ಞಾನ, ಪಶುತನಗಳು; ಬದುಕಿನ ತಿರುಳನ್ನರಿಯದೆ ಮಾನವನು ವೈಯಕ್ತಿಕ ಸ್ವಾರ್ಥದ ಮೂಲಕ ಲೋಕದಲ್ಲಿ ಹಬ್ಬಿಸುತ್ತಿರುವ ಆಸುರೀ ಶಕ್ತಿಗಳು; ಅದ-ರಿಂದುಂಟಾಗುವ ಸಮಾಜದಲ್ಲಿಯ ಅತೃಪ್ತಿ-ಅಶಾಂತಿಗಳು. ಮಾನವನ ಅಜ್ಞಾನ-ಸ್ವಾರ್ಥಸಾಧನೆಯ ನೆರಳು-ಬೆಳಕಿನಾಟಗಳು ಇಂದು ಲೋಕವನ್ನೇ ದಿಕ್ಕುಗೆಡಿಸುತ್ತಿರುವುದನ್ನು ಕಾಣುವ ಕಣ್ಣು, ಅದರ ಮೂಲಕಾರಣವನ್ನು-ವಿಶ್ಲೇಷಿಸಿ-ವಿಂಗಡಿಸಿ-ಕಂಡುಹಿಡಿಯುವ ಬುದ್ಧಿ ಇವುಗಳನ್ನು, ಇದುವರೆಗಿನ ನನ್ನ ಜೀವನದ ಅನುಭವವೈವಿಧ್ಯವು ಒದಗಿಸಿಕೊಟ್ಟಿರುವುದೆಂದು ನಾನು ಭಾವಿಸಿದ್ದೇನೆ.

ಇಂದಿನ ನನ್ನ ಹಂಬಲವು ದೇವನನ್ನು ಕಾಣಬೇಕೆಂಬುದಲ್ಲ; ರಾಜ-ಕೀಯ ಸ್ವಾತಂತ್ರ್ಯ ಬೇಕೆಂಬುದು ಅಲ್ಲ; ಸುಖಮಯವಾದ ಬಾಳು ಸಿಕ್ಕ-ಬೇಕೆಂದು ಅಲ್ಲ. ಜಗತ್ತಿನಲ್ಲಿ ನಿಜವಾದ ಮಾನವತೆ ತಲೆದೋರಬೇಕು-ಎಂದು. ಪ್ರತಿಯೊಬ್ಬ ಮಾನವನ ಜೀವನ ಯೌಗಿಕಜೀವನವಾಗಬೇಕು-ಎಂದು. ಆಧ್ಯಾತ್ಮ-ಅಧಿಭೂತಗಳ ಸಮನ್ವಯದ ಸಂಪೂರ್ಣಜ್ಞಾನ ಲೋಕದಲ್ಲಿ ನೆಲೆಗೊಳ್ಳಬೇಕು-ಎಂದು. ಹೀಗಾದರೆ ಎಲ್ಲರಿಗೂ ದೇವನ ದರ್ಶನವಾಗುವುದು. ಎಲ್ಲರಿಗೂ ಸ್ವಾತಂತ್ರ್ಯ ಸಿಕ್ಕುವುದು; ಎಲ್ಲರ ಬಾಳೂ ಸುಖಮಯವಾಗುವುದು. ಎಲ್ಲರೂ ಹಾರಯಿಸುವ ಶಾಂತಿ ಎಲ್ಲರಿಗೂ ಸಿಕ್ಕುವುದು. ಮಾನವನು ನಿಜವಾದ ಮಾನವನಾದರೆ ಮರ್ತ್ಯಲೋಕವನ್ನೇ ಸ್ವರ್ಗವನ್ನಾಗಿ ಮಾರ್ಪಡಿಸಬಹುದೆಂಬ ಆಶಾವಾದಿ ನಾನು. ಈ ಆಶಾವಾದಿತ್ವವೇ ಇಂದಿನ ನನ್ನ ಸಾಹಿತ್ಯನಿರ್ಮಿತಿಯ ಜೀವಾಳವಾಗಿದೆ. ಎಂದೂ ಇದೇ ಜೀವಾಳವಾಗಿರಬೇಕೆಂಬ ಖಂಡಿತವಾದ ನಂಬುಗೆ ನನ್ನನ್ನು ಎಚ್ಚರಿಸುತ್ತದೆ. ನಾನೀಗ ನಡೆಯಿಸುತ್ತಿರುವ 'ಜಯಂತಿ' ಪತ್ರಿಕೆಯ ಉದ್ದೇಶ ಇದೇ ಆಗಿದೆಯೆಂಬುದನ್ನು ಅದರ ಒಂಬತ್ತು ವರ್ಷಗಳ ಸಂಪಾದಕೀಯ ವಿಚಾರದಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ.

—ಬೆಟಗೇರಿ ಕೃಷ್ಣಶರ್ಮ



## “ಅಹಂ ಕರೋಮೀತಿ ವೃಥಾಭಿಮಾನಃ” ++ ++

ನಾನು ವಿದ್ಯಾರ್ಥಿಯಾಗಿದ್ದಾಗ ಮೈಸೂರು ಮಹಾರಾಜರವರ ಕಾಲೇಜಿನಲ್ಲಿ ಇದ್ದದ್ದು ಎರಡು ಸಂಘಗಳು-(೧) ೧೮೯೪ರಲ್ಲಿ ಹುಟ್ಟಿ ಥಾಮಸ್ ಡೆನ್ಹಾಂ ಅವರ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದ ಚರಿತ್ರಸಂಘ (೨) ಸುಮಾರು ೧೯೧೩ರಲ್ಲಿ ಶ್ರೀ. ಬಿ. ಎಂ. ಶ್ರೀಕಂಠಯ್ಯನವರಿಂದ ಸ್ಥಾಪಿತವಾದ ಇಂಗ್ಲಿಷ್ ಸಾಹಿತ್ಯಸಂಘ. ಕನ್ನಡಕ್ಕೆ ಯಾವ ಸಂಘವೂ ಇರಲಿಲ್ಲ. ೧೯೧೫ ರಲ್ಲಿ ನಾನು ಬೆಂಗಳೂರಿಗೆ ವೇ॥ ಗರಣಿ ಕೃಷ್ಣಾಚಾರ್ಯರಿಗೆ ಬದಲಾಗಿ ಕನ್ನಡದ ಉಪಾಧ್ಯಾಯನಾಗಿ ಹೋದಾಗ ಅಲ್ಲಿಯೂ ಕನ್ನಡಕ್ಕೆ ಯಾವ ಸಂಘವೂ ಇರಲಿಲ್ಲ. ಒಂದು ಸಂಘವನ್ನು ಸ್ಥಾಪಿಸಬೇಕೆಂಬ ಯೋಚನೆಯೂ ಹೋದಕೂಡಲೆ ಬರಲಿಲ್ಲ. ಕನ್ನಡ “ ಮುನುಷಿ ” ಎಂದು ವಿದ್ಯಾರ್ಥಿಗಳ ಅನಾದರಣೆ, ತಿರಸ್ಕಾರ, ಹಾಸ್ಯಗಳಿಗೆ ಗುರಿಯಾಗದಂತೆ ಅವರಿಗೆ ಉಪಯೋಗವಾಗುವ ರೀತಿಯಲ್ಲಿ ಪಾಠ ಹೇಳಿ ಕನ್ನಡಕ್ಕೂ ಅದರ ಉಪಾಧ್ಯಾಯನಿಗೂ ಒಂದು ಗೌರವವನ್ನು ಸಂಪಾದಿಸಿಕೊಳ್ಳುವುದಕ್ಕೇ ಕೆಲವು ಕಾಲ ಹಿಡಿಯಿತು. ಕನ್ನಡದಲ್ಲಿಯೂ ಕಲಿಯುವುದು ಇದೆ, ಇಂಗ್ಲಿಷಿನಂತೆಯೇ ಕಲಿಯುವುದು ಇದೆ, ಎಂದು ತೋರಿಸಿ, ಕನ್ನಡದ ಸ್ಥಿತಿಯನ್ನು ಬಂಗಾಳಿ ಮರಾಠಿಗಳ ಸ್ಥಿತಿಯೊಡನೆ ಹೋಲಿಸಿ ಕನ್ನಡದಲ್ಲಿ ಒಂದು ಅಭಿಮಾನ ಹುಟ್ಟಿಸಿ ವಿದ್ಯಾರ್ಥಿಗಳ ಸಹಾನುಭೂತಿ, ಸ್ನೇಹ, ಗೌರವಗಳನ್ನು ಗಳಿಸಲು ಒಂದೆರಡು ವರ್ಷ ಬೇಕಾಯಿತು. ಅಂದಿನ ಸ್ಥಿತಿಯನ್ನು ಪ್ರಬುದ್ಧ ಕರ್ಣಾಟಕದ ಮೊಟ್ಟಮೊದಲ ಸಂಚಿಕೆಯ ಮೊದಲನೆಯ ಲೇಖನದ ವಾಕ್ಯಗಳಲ್ಲಿ ಸೂಚಿಸಿದೆ—

"ಬೆಳಗಾಯಿತು. ಕೂಡಲೇ ಮಲಗಿದ್ದವರೆಲ್ಲರೂ ಎದ್ದು ಅವರವರ ಕೆಲಸಗಳಿಗೆ ಹೊರಟರು. ಮನೆಯಲ್ಲಿ ಎಲ್ಲೆಲ್ಲಿ ನೋಡಿದರೂ ಗದ್ದಲ; ಆದರೂ ಇನ್ನೂ ಕೆಲವು ಹುಡುಗರು ಮಲಗಿ ನಿದ್ದೆಹೋಗುತ್ತಿದ್ದರು. ಅದನ್ನು ನೋಡಿ ಅವರ ತಾಯಿಯು "ಇನ್ನೂ ಏಳುವದಿಲ್ಲವೇನ್ರೋ! ಓದುವ ಹುಡುಗರು ಇಷ್ಟು ಹೊತ್ತು ಮಲಗಿದರೆ ಹ್ಯಾಗೆ?" ಎಂದು ಗದರಿಸಿದಳು.

ಕೂಡಲೆ ಹುಡುಗರು ಎದ್ದು ಸರಸರನೆ ಕೈಯಲ್ಲಿ ಒಂದೊಂದು ಕನ್ನಡ ಪುಸ್ತಕವನ್ನು ಹಿಡಿದು ಕುಳಿತುಕೊಂಡರು. ಸ್ವಲ್ಪ ಹೊತ್ತಿನ ಮೇಲೆ ಅವರ ಉಪಾಧ್ಯಾಯರು ಬಂದು ನೋಡುತ್ತಾರೆ! ಕೆಲವು ಹುಡುಗರು ಇನ್ನೂ ತೂಕಡಿಸುತ್ತಿದ್ದಾರೆ! ಕೆಲವರು ಪುಸ್ತಕವನ್ನು ತಲೆಕೆಳಗಾಗಿ ಹಿಡಿದುಕೊಂಡಿದ್ದಾರೆ! ಒಬ್ಬನಾದರೂ ಮುಖ ತೊಳೆದಿಲ್ಲ' ಉಪಾಧ್ಯಾಯರು ಅವರೆಲ್ಲರನ್ನೂ ಮೊದಲು ಚೊಕ್ಕಟವಾಗಿ ಕೈಕಾಲು ಮುಖಗಳನ್ನು ತೊಳೆದುಕೊಂಡು ಬರುವಂತೆ ಹೇಳಿದರು. ಬಳಿಕ ಎಲ್ಲರಲ್ಲಿಯೂ ಲವಲವಿಕೆ ಹುಟ್ಟಿತು.

ಹುಡುಗರು ಬದ್ಧಿವಂತರು. ಆದರೂ ಮೈಬಗ್ಗಿ ಕೆಲಸಮಾಡುತ್ತಿರಲಿಲ್ಲ. ಆದ್ದರಿಂದ ಇವರ ಕೈಯಲ್ಲಿ ಕೆಲಸ ಮಾಡಿಸುವುದಕ್ಕೆ ಪಾಪ ಆ ಉಪಾಧ್ಯಾಯನು ಸ್ವಲ್ಪ ಕಷ್ಟಪಡಬೇಕಾಯಿತು. ಕೊನೆಗೆ ಹುಡುಗರು ಅವನ ದಾರಿಗೆ ಬಂದು ಚೆನ್ನಾಗಿ ವ್ಯಾಸಂಗ ಮಾಡುತ್ತ ಯೋಗ್ಯರೆನಿಸಿಕೊಂಡರು. ಉಪಾಧ್ಯಾಯನಿಗೂ ಸಂತೋಷವಾಗಿ ಕಾಲಿದಾಸನ ಕುಮಾರಸಂಭವದ "ಕ್ಲೇಶಃ ಫಲೇನ ಹಿ ಪುನರ್ನವತಾಂ ವಿಧತ್ತೇ" (ತಕ್ಕ ಫಲವುಂಟಾದರೆ ಪಟ್ಟ ಕಷ್ಟಗಳೆಲ್ಲ ಮರೆತುಹೋಗಿ ಹೊಸ ಉತ್ಸಾಹವುಂಟಾಗುತ್ತದೆ ಎಂಬ ತಾತ್ಪರ್ಯವುಳ್ಳ) ಶ್ಲೋಕವು ಜ್ಞಾಪಕಕ್ಕೆ ಬಂತು."

ಆಗ ಮೈಸೂರು ವಿಶ್ವವಿದ್ಯಾನಿಲಯವು ಹುಟ್ಟಿದ್ದು ಹೊಸದು. ಹುಡುಗರು ಅದರ ಪರೀಕ್ಷೆಗಳಿಗೆ ಇನ್ನೂ ಕೂರುವ ಕಾಲ ಬಂದಿರಲಿಲ್ಲ. ಮದರಾಸ್ ವಿಶ್ವವಿದ್ಯಾನಿಲಯದ ಇಂಟರ್‌ಮೀಡಿಯೆಟ್ ಪರೀಕ್ಷೆಗೆ ಕನ್ನಡದ ಪ್ರಬಂಧ ಪತ್ರಿಕೆಯಲ್ಲಿ ಇಂಗ್ಲಿಷ್ ಪಠ್ಯಪುಸ್ತಕದ ಮೇಲೆ ಒಂದು ಪ್ರಶ್ನೆ ಬರುತ್ತಿತ್ತು. ಅದನ್ನು ಅದುವರೆಗೆ ಇಂಗ್ಲಿಷಿನ ಉಪಾಧ್ಯಾಯರು ತೆಗೆದುಕೊಳ್ಳುತ್ತಿರಲಿಲ್ಲ. ಕನ್ನಡದ ಉಪಾಧ್ಯಾಯರಿಗೆ ಸಾಧ್ಯವಿರಲಿಲ್ಲ. ಎರಡನ್ನೂ ಬಲ್ಲ ನಾನು ಅದನ್ನು ಇಂಗ್ಲಿಷ್ ಉಪಾಧ್ಯಾಯನಂತೆ ವಿದ್ಯಾರ್ಥಿಯಂತೆ ವ್ಯಾಸಂಗ ಮಾಡಿ ಅದರ ಸಾರಾಂಶವನ್ನು ಬರೆದು ಕೊಟ್ಟು ಕನ್ನಡದಲ್ಲಿ ಪ್ರಬಂಧವನ್ನು ಬರೆದು ಓದಿ ಹೇಳಿದೆ. ಪರೀಕ್ಷೆಗೆ ಉಪಯುಕ್ತವಾಗಿದ್ದುದರಿಂದ ಅದನ್ನು ಹುಡುಗರು ಎಲ್ಲರೂ ಅಪೇಕ್ಷಿಸಿದರು. ಈ ಮಧ್ಯೆ ಕೆಲವು ವಿದ್ಯಾರ್ಥಿಗಳು ಅತ್ಯುತ್ತಮವಾದ

ಪ್ರಬಂಧಗಳನ್ನು ಬರೆದಿದ್ದರು. ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯನವರು ನಳಚರಿತ್ರೆಯ ಮೇಲಣ ಒಂದು ಪ್ರಶ್ನೆಗೆ ಒಂದು ಅಭ್ಯಾಸ ಪುಸ್ತಕದ ತುಂಬ ಬರೆದಿದ್ದರು. ಹುಡುಗರು ಅಭ್ಯಾಸ ಪ್ರಬಂಧವನ್ನು ಬರೆಯುವುದಕ್ಕೇ ಕಳ್ಳ ತಪ್ಪಿಸಿಕೊಳ್ಳುವಾಗ, ಬರೆದರೂ ಒಂದೆರಡು ಪುಟಗಳನ್ನು ಕಾಟಕ್ಕೆ ತಪ್ಪೋ ನೆಪ್ಪೋ ಬರೆದುಹಾಕುವಾಗ, ಈ ವಿದ್ಯಾರ್ಥಿ ನಿರರ್ಗಳವಾಗಿ ಒಂದೂ ತಪ್ಪಿಲ್ಲದೆ ಮುತ್ತಿನಂಥ ಬಿಡಿಬಿಡಿಯಾದ ಅಕ್ಷರದಲ್ಲಿ ಅನಾಯಾಸವಾಗಿ ಒಂದು ಪುಸ್ತಕ ಬರೆದುಬಿಟ್ಟಿದ್ದನು. ಇದರಂತೆ ಶ್ರೀ ಎಸ್. ವಿ. ರಂಗಣ್ಣನವರು, ಎನ್. ನೀಲ-ಕಂಠಪ್ಪನವರು ಮುಂತಾದ ಮೇಧಾವಿಗಳಾದ ವಿದ್ಯಾರ್ಥಿಗಳು ತಮ್ಮ ಬರವಣಿಗೆಯಲ್ಲಿ ಒಂದೊಂದು ವಿಧವಾದ ಅಪೂರ್ವ ಸಾಮರ್ಥ್ಯವನ್ನು ವ್ಯಕ್ತಪಡಿಸಿದ್ದರು. ಇವರ ಬರವಣಿಗೆಯೆಲ್ಲಾ ವ್ಯರ್ಥವಾಗಿ ಹೋಗಿಬಿಡುವುದಲ್ಲಾ ಎಂದು ನನಗೆ ಒಂದು ಬಗೆಯ ಕೊರಗಾಗಿತ್ತು. ಆಗ ನಾನು ಇವೆಲ್ಲವನ್ನೂ ಒಂದು ಪ್ರಕಟನೆಯಾಗಿ ಅಚ್ಚುಮಾಡಿಸಬಹುದೆಂದೂ, ವಿದ್ಯಾರ್ಥಿಗಳು ವೆಚ್ಚವಹಿಸುವುದಾದರೆ ನಾನು ಆ ಕೆಲಸವನ್ನು ಕೈಕೊಳ್ಳುವೆನೆಂದೂ ಹೇಳಿದೆ. ಅದಕ್ಕೆ ಬಹುಮಂದಿ ಉತ್ಸಾಹಶಾಲಿಗಳಾಗಿ ಮುಂದೆ ಬಂದರು.

× × × ×

ಹಲವು ಅಭಿಮಾನಶಾಲಿಗಳಾದ ವಿದ್ಯಾರ್ಥಿಗಳು ನನ್ನ ಸುತ್ತ ಮುತ್ತಿಕೊಂಡು ನಾನು ಹೇಳಿದ್ದನ್ನು ನಡೆಸುವುದಕ್ಕೆ ಸಿದ್ಧರಾದರು. ಮೊದಲು ಸಂಘದ ಏರ್ಪಾಡು. ಈಗ 'ಕರ್ಣಾಟಕ ಸಂಘ'ವೆಂಬುದು ಸುಪರಿಚಿತವಾದ ಹೆಸರು. ಆಗ ಈ ಸಂಸ್ಥೆಗೆ ಏನು ಹೆಸರು ಇಡಬೇಕೆಂದೇ ನಾನು ಬಹುದಿನ ಯೋಚಿಸಿದೆ-ಸಾಹಿತ್ಯಸಮಾಜವೇ, ಕನ್ನಡಸಮಾಜವೇ, ಕರ್ಣಾಟಕ ಸಮಾಜವೇ ಇತ್ಯಾದಿ. ಆಗ್ಗೆ ಇಂಗ್ಲಿಷಿನಲ್ಲಿ ರೂಢಿಯಾಗಿದ್ದ 'ಸೊಸೈಟಿ' ಎಂಬ ಪದಕ್ಕೆ ಸಮಾನ ಪದವಾಗಿ 'ಸಮಾಜ'ವೇ ಮುಂದೆ ಬರುತ್ತಿತ್ತು. ಆದರೆ ಏಕೋ ಅದರಲ್ಲಿ ಸತ್ವವಿಲ್ಲವೆಂದು ಭಾಸವಾಗಿ ಕೊನೆಗೆ ಬಾಯಿತುಂಬ ಬರುವ, ಗಂಭೀರವಾಗಿ ಕೇಳುವ, 'ಕರ್ಣಾಟಕ ಸಂಘ' ಎಂಬುದನ್ನು ನಿಷ್ಕರ್ಷೆ ಮಾಡಿಯಾಯಿತು. ಈಗ ನಾನು ಬಿಟ್ಟರೂ ನನ್ನ ಕಂಬಳಿ ಬಿಡುವಂತಿರಲಿಲ್ಲ. ಸಂಘವು ಆರಂಭವಾಗಲೇ ಬೇಕಾಯಿತು. (ಆಗಸ್ಟ್ ೧೯೧೮) ಆಗ ಶ್ರೀಮಾನ್ ಬಿ. ವೆಂಕಟನಾರಣಪ್ಪನವರು ಕಾಲೇಜಿನಲ್ಲಿ ಭೌತಶಾಸ್ತ್ರದ ಅಧ್ಯಾಪಕರಾಗಿದ್ದರು. ೧೯೧೫ರಲ್ಲಿ ಆರಂಭವಾಗಿದ್ದ ಕನ್ನಡ ಸಾಹಿತ್ಯ

ಪರಿಷತ್ತಿನಲ್ಲಿ ಕೆಲಸಮಾಡಿ ಗೌರವವನ್ನು ಗಳಿಸಿದ್ದ ವ್ಯಕ್ತಿಗಳಾಗಿದ್ದರು. ಈ 'ಜ್ಞಾನವೃದ್ಧರೂ ವಯೋವೃದ್ಧರೂ' ಆದ ಮಹನೀಯರು ನಮ್ಮ ಸಂಘದ ಮೊದಲನೆಯ ಅಧ್ಯಕ್ಷರಾಗಬೇಕೆಂದು ನಾನು ಸೂಚಿಸಿದೆ. ನಾನೇ ಅಧ್ಯಕ್ಷ ನಾಗಬೇಕೆಂದು ಸೂಚನೆ ಬಂತು; ಆದರೆ ನಾನು ದೊಡ್ಡವರನ್ನು ಮುಂದಿಟ್ಟು ಕೊಂಡು ಕೆಲಸ ಮಾಡಬೇಕೆಂದೂ, 'ಕೆಲಸ ಮಾಡುವುದಕ್ಕೆ ಹಿಂದೇನು ಮುಂದೇನು?' ಎಂದೂ, ನಾನು ಉಪಾಧ್ಯಕ್ಷನಾಗಿರುತ್ತೇನೆಂದೂ ಹೇಳಿ ಎಲ್ಲರನ್ನೂ ಒಪ್ಪಿಸಿದೆ; ಜೊತೆಗೆ ಕಾರ್ಯದರ್ಶಿ ಮಾತ್ರ ವಿದ್ಯಾರ್ಥಿಯೇ ಆಗಿರ ಬೇಕೆಂದೂ ಸಂಘವು ವಿದ್ಯಾರ್ಥಿಗಳಿಗೆ ಒಂದು ಶಿಕ್ಷಣಕ್ಷೇತ್ರವಾಗಬೇಕೆಂದೂ ಖಂಡಿತವಾಗಿ ಹೇಳಿದೆ ಅದಕ್ಕೂ ಒಪ್ಪಿಗೆ ದೊರೆಯಿತು. ಹೀಗೆ ಮೊದಲನೆಯ ಕಾರ್ಯದರ್ಶಿಗಳಾಗಿ ನಿಯಮಿತರಾದ–ಚುನಾಯಿತರಲ್ಲ–ಶ್ರೀಮಾನ್ ಡಿ. ಗುರು-ರಾಯರು ಈಗಲೂ ನನ್ನಂತೆ ಉಪಾಧ್ಯಾಯರಾಗಿರುತ್ತ ಮೇಲೆ ನಾನು ಬರೆ-ದಿರುವುದರ ಸತ್ಯತೆಯನ್ನು ಸಮರ್ಥಿಸಲು ಸಿದ್ಧರಾಗಿರುತ್ತಾರೆ. ರಾವ್-ಬಹದ್ದೂರ್ ರಾ. ನರಸಿಂಹಾಚಾರ್ಯರು ಮೊದಲನೆಯ ವರ್ಷದ ಆರಂಭ ಭಾಷಣ ಮಾಡಿದರು. ಇಂಥ ಹಿರಿಯರಾದ ವಿದ್ವಾಂಸರೂ, ಮೇಧಾವಿಗಳಾದ ಉತ್ಸಾಹೀ ತರುಣರೂ ಸೇರಿದರೆ ಆಗದ ಕೆಲಸವೂ ಒಂದು ಉಂಟೆ? ಅದು ಆಗದೆ ಇರುತ್ತದೆಯೋ?–"ಅಹಂ ಕರೋಮೀತಿ ವೃಥಾಭಿಮಾನಃ!"

ನಾನು ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗ ನನ್ನ ಸ್ನೇಹಿತರೊಬ್ಬರು ಕೊಟ್ಟ ಸ್ವಾಮಿ ವಿವೇಕಾನಂದರ " ಕೊಲಂಬೋದಿಂದ ಆಲ್ಮೋರಾವರೆಗೆ " ಎಂಬ ಇಂಗ್ಲಿಷ್ ಉಪನ್ಯಾಸ ಗ್ರಂಥವನ್ನು ಓದಿ, ವಿವೇಕಾನಂದರಲ್ಲಿ ನನ-ಗೊಂದು ಗೌರವ ಬಂದಿತ್ತು. ಒಂದೆರಡು ವರ್ಷಗಳಲ್ಲಿ ಸ್ವಾಮಿ ಅಭೇದಾ-ನಂದರು ಮೈಸೂರು ಟವನ್‌ಹಾಲಿನಲ್ಲಿ ಕಿಕ್ಕಿರಿದ ಜನಸಂದಣಿಯ ಮಧ್ಯದಲ್ಲಿ ಹರಿಸಿದ ವಾಗ್ಝರಿಯನ್ನು ಕೇಳಿ ಆ ಗೌರವವು ಭಕ್ತಿಯಾಗಿ ಪರಿಣಮಿಸಿತ್ತು. ೧೯೧೫ರಲ್ಲಿ ಬೆಂಗಳೂರಿಗೆ ಬರುವ ಹೊತ್ತಿಗೆ ರಾಮಕೃಷ್ಣ ಮಠವನ್ನು ಕಂಡೇನೇ ಎಂಬ ತವಕ ಹುಟ್ಟಿತು. ಅಷ್ಟುಹೊತ್ತಿಗೆ ಶ್ರೀಮಾನ್ ವೆಂಕಣ್ಣಯ್ಯನವರೂ ಬೆಂಗಳೂರಿಗೆ ಬಂದು ನಾವಿಬ್ಬರೂ ಶ್ರೀ ರಾಮಕೃಷ್ಣ ಮಠಕ್ಕೆ ಹೋಗಿಬರಲು ಮೊದಲು ಮಾಡಿದೆವು. ಆಗ ಆ ಮಠದ ಅಧ್ಯಕ್ಷರಾಗಿದ್ದ ಶ್ರೀ ನಿರ್ಮಲಾನಂದ ಸ್ವಾಮಿಗಳು ಶ್ರೀ ರಾಮಕೃಷ್ಣ ಪರಮಹಂಸರ ಮೇಲೆ ನಾವು ಕನ್ನಡದಲ್ಲಿ ಒಂದು ಚಿಕ್ಕ ಪುಸ್ತಕವನ್ನು ಬರೆಯಬೇಕೆಂದು ಸೂಚಿಸಿ ಆದಕ್ಕೆ ಬೇಕಾದ

ಸಾಹಿತ್ಯವನ್ನೂ ಅದೇ ಮಠದಲ್ಲಿದ್ದ ಸ್ವಾಮಿ ವಿದೇಹಾನಂದರ ಸಹಾಯವನ್ನೂ ಒದಗಿಸಿಕೊಟ್ಟರು. ನಾವು ಆ ಕೆಲಸದಲ್ಲಿ ತೊಡಗಿದ್ದಾಗ ನಮಗೆ ಪರಸ್ಪರ ಗೌರವ ವಿಶ್ವಾಸಗಳು ಬೆಳೆದು, ಸ್ವಾಮಿಗಳು ಒಂದು ದಿನ "ನೀವು ಧಾರ್ಮಿಕ ವಿಚಾರಗಳನ್ನು ನಿಮ್ಮ ಜನಕ್ಕೆ ತಿಳಿಸಲು ಪ್ರಬುದ್ಧ ಕರ್ಣಾಟಕವೆಂಬ ಒಂದು ಪತ್ರಿಕೆಯನ್ನು ಏಕೆ ಹೊರಡಿಸಬಾರದು? ಪ್ರಬುದ್ಧ ಭಾರತವು ಇಂಗ್ಲಿಷಿ-ನಲ್ಲಿದೆ. ಆದರೆ ಆಯಾ ಪ್ರಾಂತದವರು ಆಯಾ ದೇಶಭಾಷೆಯಲ್ಲಿ ಬರೆಯದೆ ಹೋದರೆ ಅದು ಹೆಚ್ಚು ಜನಕ್ಕೆ ತಿಳಿಯುವದಿಲ್ಲ. ಈಗಾಗಲೇ 'ಪ್ರಬುದ್ಧ ಕೇರಳಂ' ಎಂಬ ಪತ್ರಿಕೆ ಹೊರಟು ನಡೆಯುತ್ತಿದೆ. ಮೈಸೂರು ಕೇರಳ ಕಿಂತ ದೊಡ್ಡದು" ಎಂದಿದ್ದರು. ಅಂಥ ಪತ್ರಿಕೆ ಹೊರಡಿಸುವದು ನಮ್ಮಿಂದ ಆಗದ್ದರಿಂದ ಆ ಮಾತು ಅಲ್ಲಿಗೇ ನಿಂತುಹೋಗಿತ್ತು. ಆದರೆ "ಪ್ರಬುದ್ಧ ಕರ್ಣಾಟಕ" ಎಂಬ ಹೆಸರು ಮಾತ್ರ ಮರೆತುಹೋಗಲಿಲ್ಲ; ಮನಸ್ಸಿನಲ್ಲಿ ಕಾಡಿತವಾಗುತ್ತಲೇ ಇತ್ತು. ೧೯೧೮ ರಲ್ಲಿ ಕರ್ಣಾಟಕದ ಸಂಘದ ಅಂಗವಾಗಿ ಒಂದು ಪತ್ರಿಕೆಯನ್ನು ಹೊರಡಿಸಬೇಕೆಂದು ನಿರ್ಧರವಾದಾಗ, ಅದು ವಿದ್ಯಾರ್ಥಿಗಳು ನಡೆಸುವ ಪತ್ರಿಕೆಯಾದ್ದರಿಂದ "ವಿದ್ಯಾರ್ಥಿ" ಎಂದು ಹೆಸರಿರ-ಬೇಕೆಂದು ನಾನು ಸೂಚಿಸಿದೆ; ಅದಕ್ಕೆ ಎಲ್ಲರೂ ಒಪ್ಪಿದ್ದರು. ಆದರೆ ಅಷ್ಟು ಹೊತ್ತಿಗೆ ಮಂಗಳೂರು ಪ್ರಾಂತದಲ್ಲಿ "ವಿದ್ಯಾರ್ಥಿ" ಎಂಬ ಹೆಸರಿನ ಪತ್ರಿಕೆ ಯೊಂದು ಆಗಲೇ ನಡೆಯುತ್ತಿತ್ತೆಂದು ತಿಳಿದುಬಂದದ್ದರಿಂದ ಬೇರೆ ಹೆಸರನ್ನು ಯೋಚಿಸಲು ತೊಡಗಿದೆ; ಆಗ ಮೊಟ್ಟಮೊದಲು ತೋರಿದ್ದು "ಪ್ರಬುದ್ಧ ಕರ್ಣಾಟಕ." ಅದನ್ನು ರಾಮಕೃಷ್ಣ ಮಠದಿಂದ ಹೊರಡಬಹುದಾದ ಧಾರ್ಮಿಕ ಪತ್ರಿಕೆಗೆ ಉಪಯೋಗಿಸದೆ ಸೆಂಟ್ರಲ್ ಕಾಲೇಜಿನಿಂದ ಹೊರಡುವ ಸಾಹಿತ್ಯ ಪತ್ರಿಕೆಗೆ ಉಪಯೋಗಿಸಿಕೊಳ್ಳಬಹುದೇ ಎಂದು ಮೊದಲು ಸ್ವಲ್ಪ ಶಂಕೆ ಯುಂಟಾದರೂ, ಅದು ಹೆಚ್ಚು ಹೊತ್ತು ಇರಲಿಲ್ಲ; ಬೇರೆ ಹೆಸರೂ ಸೂಚಿತ ವಾಗಲಿಲ್ಲ; ಹೊಳೆಯಲಿಲ್ಲ; ಆದ್ದರಿಂದ ಅದೇ ನಿಂತಿತು. ಕನ್ನಡ ನಾಡು ಎಚ್ಚತ್ತಿದೆ, ಯುವಕ ವಿದ್ಯಾರ್ಥಿಗಳ ಮನಸ್ಸು ವಿಕಸಿತವಾಗುತ್ತಿದೆ ಎಂಬ ಭಾವನೆಯಿದ್ದದ್ದರಿಂದ, ಆ ಮೇಲೆ ಅದೇ ಸರಿ ಎನ್ನಿಸಿತು. ನಮ್ಮ ಪತ್ರಿಕೆಯ ಮುಖಪತ್ರದ ಮೇಲೆ ಇಂದಿಗೂ ಇರುವ ಚಿತ್ರವೂ ಶ್ರೀರಾಮಕೃಷ್ಣಮಠದಿಂದಲೇ ಪ್ರೇರಿತವಾದದ್ದು; ಅವರ ಸಾಹಿತ್ಯದ ಪ್ರತೀಕವಾಗಿ, ರಾಜಯೋಗ, ಜ್ಞಾನ-ಯೋಗ, ಕರ್ಮಯೋಗ, ಭಕ್ತಿಯೋಗಗಳನ್ನು ಸೂಚಿಸುವ ಮುದ್ರೆಯನ್ನು

ಮನಸ್ಸಿನಲ್ಲಿಟ್ಟುಕೊಂಡು ಕನ್ನಡ ನಾಡಿನ ಸೂರ್ಯದೇವನ ಸನ್ನಿಧಿಯಲ್ಲಿ ಆಗಲೆ ಆರಳಿರುವ ಮತ್ತು ಇಂದು ಮೊಗ್ಗಾಗಿ ಮುಂದೆ ಆರಳಬೇಕಾಗಿರುವ ಹೃತ್ಕಮಲಗಳನ್ನು ಸೂಚಿಸಿ, ಒಂದು ಚಿತ್ರವನ್ನು ಬರೆದು ವಿದ್ಯಾರ್ಥಿಗಳಿಗೆ ತೋರಿಸಿದೆ. ಅದು ಸರ್ವಾನುಮತದಿಂದ ಒಪ್ಪಿಗೆಯನ್ನು ಪಡೆಯಿತು.

× × × ×

ಪ್ರಬುದ್ಧ ಕರ್ಣಾಟಕವು ಹುಟ್ಟಿದಾಗ ಅದು ಸಾಹಿತ್ಯಪತ್ರಿಕೆಯಾಗಿರ-ಬೇಕೆಂದೂ ಮುಖ್ಯವಾಗಿ ವಿಮರ್ಶಾತ್ಮಕವಾಗಿರಬೇಕೆಂದೂ ನಿರ್ಧರವಾಗಿತ್ತು. ಇದನ್ನು ಮೊದಲನೆಯ ಸಂಚಿಕೆಯ ಆರಂಭ-ಲೇಖನದಿಂದ ತೆಗೆದ ಮುಂದಿನ ವಾಕ್ಯಗಳು ತೋರಿಸುತ್ತವೆ:—

"ಸಾಹಿತ್ಯವು ಜನಗಳಿಗೆ ಬೇಕಿಲ್ಲವೆಂದು ನಾವು ನಂಬಲಾರೆವು; ಇದರಲ್ಲಿ ಅವರಿಗೆ ಇರುವ ಆಸಕ್ತಿಯಿಂದಲೇ ಉತ್ತಮವಾದ ಸಾಹಿತ್ಯಕ್ಕೆ ಶಾಶ್ವತವಾಗಿ ನಿಲ್ಲುವ ಸಾಮರ್ಥ್ಯ ಬಂದಿದೆ.... ನಮ್ಮ ಮುಖ್ಯ ಕೆಲಸವೆಂದರೆ ಕಾವ್ಯಸೃಷ್ಟಿಗೆ ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಡುವುದು.... ಸಾಹಿತ್ಯವನ್ನೆಲ್ಲ ತುಲನಪೂರ್ವಕವಾಗಿ ವಿಮರ್ಶೆ ಮಾಡಿ, ನಮ್ಮ ಕವಿಗಳಲ್ಲಿರುವ ಗುಣದೋಷಗಳೇನು, ಸತ್ಕಾವ್ಯದ ಲಕ್ಷಣಗಳೇನು ಎಂಬುದನ್ನು ನಿಷ್ಪಕ್ಷಪಾತ ಬುದ್ಧಿಯಿಂದ ವಿಚಾರ ಮಾಡಿ... ಒಟ್ಟಿನಲ್ಲಿ ಯಾವುದರಿಂದ ನಮ್ಮ ದೇಶವು ಉತ್ಸಾಹಗೊಂಡು ಜೀವಕಳೆಯಿಂದ ತುಂಬಬಹುದೋ ಯಾವುದರಿಂದ ಗ್ರಂಥಗಳ ರಸಾಸ್ವಾದನೆ ಮಾಡಿ ಆನಂದವನ್ನು ಪಡೆಯಬಹುದೋ, ಯಾವುದರಿಂದ ಕನ್ನಡ ಕಾವ್ಯಮಾಲೆಯು ಶ್ರೇಷ್ಠವಾದ ರೀತಿಯಲ್ಲಿ ಬೆಳೆಯಬಹುದೆಂದು ನಮಗೆ ದೃಢವಾದ ನಂಬಿಕೆಯಿದೆಯೋ ಅಂಥ ವಿಷಯಗಳನ್ನೇ ಕನ್ನಡಿಗರಿಗೆ ಕಾಣಿಕೆಯಾಗಿ ತಂದು ಒಪ್ಪಿಸುವ ಕೆಲಸವನ್ನು ಪ್ರಬುದ್ಧ ಕರ್ಣಾಟಕಕ್ಕೆ ಒಪ್ಪಿಸಿದ್ದೇವೆ."

ಈ ಲೇಖನಗಳು ಮುಖ್ಯವಾಗಿ ಮೂರು ಬಗೆಯವಾಗಿರಬೇಕೆಂದೂ, ಹಾಗಾದರೆ ಕಾಲಕಾಲಕ್ಕೆ ಸರಿಯಾದ ಸಾಮಗ್ರಿ ಒದಗುವುದೆಂದೂ ನಾನು ನಿರ್ಧರಿಸಿದೆ. (೧) ನಾನು ಗ್ರಂಥಗಳನ್ನು ಪಾಠ ಹೇಳಿ ಮುಗಿಸಿದ ಮೇಲೆ ಮಾಡುವ ವಿಮರ್ಶಾತ್ಮಕವಾದ ಉಪನ್ಯಾಸಗಳು. (೨) ನನ್ನ ವಿದ್ಯಾರ್ಥಿಗಳು ಬರೆಯುವ ಉತ್ತಮವಾದ ಪ್ರಬಂಧಗಳು— ಆವಶ್ಯಕವಿದ್ದರೆ ಬದಲಾವಣೆ ವಿಸ್ತರಣೆಗಳೊಡನೆ— (೩) ವಿದ್ವಾಂಸರನ್ನು ಕರೆಸಿ ಸಂಘದಲ್ಲಿ ಮಾಡಿಸುವ ಆರಂಭೋಪಸಂಹಾರಾದಿ ಭಾಷಣಗಳು. ನಾನು ಇಂಟರ್ ಮೀಡಿಯೆಟ್ ಮತ್ತು ಬಿ. ಎ. ತರಗತಿಗಳಲ್ಲಿದ್ದಾಗ, ಕನ್ನಡ ಪ್ರಬಂಧ, ಕನ್ನಡ ಸಾಹಿತ್ಯ ಇಂಗ್ಲಿಷ್ ಸಾಹಿತ್ಯಗಳಲ್ಲಿ ನನಗೆ ಆಚಾರ್ಯರಾಗಿದ್ದ ಶ್ರೀಮಾನ್ ಬಿ. ಎಂ.

ಶ್ರೀಕಂಠಯ್ಯನವರು ನಾನು ವಿದ್ಯಾರ್ಥಿಯಾಗಿ ಬರೆಯುತ್ತಿದ್ದ ಲೇಖನಗಳನ್ನೂ ಅವುಗಳ ಭಾವಗಳನ್ನೂ ಒಪ್ಪಿ, ಹೊಗಳಿ, ಕೈತುಂಬ ಅಂಕಗಳನ್ನು ಕೊಟ್ಟು ನನ್ನನ್ನು ಪ್ರೋತ್ಸಾಹಿಸಿದ್ದರಿಂದ ನನಗೆ ಒಂದು ಧೈರ್ಯ ಬಂದುಬಿಟ್ಟಿತ್ತು. ನಾನೂ ಏನಾದರೂ ಬರೆಯಬಲ್ಲೆನೆಂದೂ ಅದು ಅವಿವೇಕವಾಗಿರುವುದಿಲ್ಲ ವೆಂದೂ ಹತ್ತು ಜನ ಒಪ್ಪುವಂತಿರಬಹುದೆಂದೂ ನಂಬಿಕೆ ಬಂದಿತ್ತು. ನನಗೆ ಜ್ಞಾಪಕವಿರುವ ಮಟ್ಟಿಗೆ ಪ್ರಬುದ್ಧ ಕರ್ಣಾಟಕದಲ್ಲಿ ನಾನು ಬರೆದ ಲೇಖನದ ವಿಚಾರವಾಗಿ ಮೊಟ್ಟಮೊದಲನೆಯ ಮೆಚ್ಚುಗೆಯ ಮಾತು ಬಂದದ್ದು—ಬರೆದು ಬಂದದ್ದು – ಶ್ರೀಮಾನ್ ಶ್ರೀಕಂಠಯ್ಯನವರಿಂದಲೇ. ತರುಣ ಸಂಪಾದಕ ನಾಗಿದ್ದಾಗ ಸಾವಿರ ರೂಪಾಯಿ ಸಂಬಳ ಕೊಟ್ಟಿದ್ದರೂ ಇಷ್ಟು ಧೈರ್ಯ ಪ್ರೋತ್ಸಾಹಗಳು ನನಗೆ ಬರುತ್ತಿರಲಿಲ್ಲ.

× × × ×

ಪತ್ರಿಕೆಗಳಿಗೆ ಲೇಖನವನ್ನು ಒದಗಿಸಿಕೊಳ್ಳುವುದು ಬಹು ಕಷ್ಟ; ಆ ಕಷ್ಟ ವನ್ನು ಬಲ್ಲವರೇ ಬಲ್ಲರು. ಮದುವೆ ಮಾಡಿ ನೋಡು, ಮನೆ ಕಟ್ಟಿ ನೋಡು ಎಂಬ ಗಾದೆಗೆ ಪತ್ರಿಕೆ ನಡಸಿ ನೋಡು ಎಂದು ಮೂರನೆಯ ವಾಕ್ಯ ಒಂದನ್ನು ಸೇರಿಸಬೇಕೆಂದು ತೋರುತ್ತದೆ; ಆದ್ದರಿಂದ ನಾನು ಇಂಥ ಒಂದು ಪತ್ರಿಕೆಯನ್ನು ಆರಂಭಿಸಬೇಕೆಂದಿದ್ದೇನೆ ಎಂದು ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯ ರೊಡನೆ ಪ್ರಸ್ತಾಪಿಸಿದಾಗ, ಅದರ ಕಷ್ಟನಿಷ್ಠುರಗಳನ್ನು ಬಲ್ಲ ಅವರು "ಸ್ವಲ್ಪ ನಿಧಾನವಾಗಿ ಯೋಚಿಸಿ ಮಾಡುವುದು ಒಳ್ಳೆಯದು" ಎಂದರು. ಆದರೆ ಅಷ್ಟು ಹೊತ್ತಿಗೆ ನಾನು ಹಿಮ್ಮೆಟ್ಟಲಾರದಷ್ಟು ಮುಂದುವರಿದಿದ್ದೆ. ಅವರಿಗೂ ಸೆಂಟ್ರಲ್ ಕಾಲೇಜಿನಲ್ಲಿ ಅದೂವರೆಗೆ ಸಿದ್ಧವಾಗಿದ್ದ ಪಾಕದ ಪರಿಚಯವಿರಲಿಲ್ಲ. ಅಂತೂ ಪತ್ರಿಕೆಯೇನೋ ಹೊರಟುಬಿಟ್ಟಿತು. ಮೈಸೂರಿಗೆ ಅದರ ಮೊದಲ ನೆಯ ಸಂಚಿಕೆಯನ್ನು ತಂದು ನನ್ನ ಗುರುಗಳೂ ಆಗ ಕಾಲೇಜಿನ ಮುಖ್ಯೋ ಪಾಧ್ಯಾಯರೂ ಆಗಿದ್ದ ಶ್ರೀಮಾನ್ ಎನ್. ಎಸ್. ಸುಬ್ಬರಾಯರಿಗೆ ಅದರ ಒಂದು ಪ್ರತಿಯನ್ನು ಕೊಟ್ಟು ಅವರ ಆಶೀರ್ವಾದ ಬೇಡಿದೆ. ಅವರು ತಟ್ಟನೆ "ಏನು ಕೃಷ್ಣಶಾಸ್ತ್ರಿ! ಸಾಹಿತ್ಯ ಪರಿಷತ್ತಿನ ಕೈಯಲ್ಲಿ ಒಂದು ಒಳ್ಳೆಯ ಪತ್ರಿಕೆ ಯನ್ನು ನಡಸುವುದಕ್ಕಾಗಿಲ್ಲ, ನಿನ್ನ ಕೈಯಲ್ಲಾಗುತ್ತದೆಯೇ ?" ಎಂದರು. ನನಗೆ ನಿರುತ್ಸಾಹವೇನೋ ಆಯಿತು. ಆದರೆ ಅದನ್ನು ತೋರ್ಪಡಿಸಿಕೊಳ್ಳದೆ "ಏನೋ ಸ್ವಾಮಿ ಆರಂಭ ಮಾಡಿಬಿಟ್ಟಿದ್ದೇನೆ, ನನ್ನ ಕೈಲಾದಮಟ್ಟಿಗೆ

ಚೆನ್ನಾಗಿ ನಡೆಸಿಕೊಂಡು ಹೋಗಬೇಕೆಂದಿದ್ದೇನೆ" ಎಂದು ವಿನಯದಿಂದ ಉತ್ತರ ಕೊಟ್ಟಿ. ಇದಕ್ಕೆಲ್ಲ ಹಿಂದೆ ಇದ್ದದ್ದು ಒಂದು ಒರಟು ಧೈರ್ಯ— ನನ್ನ ವಿದ್ಯಾರ್ಥಿಗಳು ನನಗೆ ನೆರವಾಗುವರು, ಮೊದಲಿಂದ ಕೊನೆಯವರೆಗೆ ನಲವತ್ತು ಪುಟದಷ್ಟನ್ನು ಬರೆದು ಮುದ್ರಿಸಿ ಚಂದಾದಾರರನ್ನು ಸಂಪಾದಿಸಿ ಅದರ ಖರ್ಚನ್ನು ಎಬ್ಬಿಸುವದು ಸಾಧ್ಯವೆಂಬ ಧೈರ್ಯ; ನಿರ್ವಂಚನೆಯಿಂದ ಮಾಡಿದ ಒಳ್ಳೆಯ ಕೆಲಸಕ್ಕೆ ಬೆಂಬಲ ದೊರೆತೇ ದೊರೆಯುವದೆಂಬ ಧೈರ್ಯ. ಅದನ್ನು ಮೊದಲನೆಯ ಲೇಖದ ಕೊನೆಯಲ್ಲಿ ನೋಡಬಹುದು

"ನಮ್ಮಲ್ಲಿ ಬೆಳ್ಳಿಯಿಲ್ಲ, ಬಂಗಾರವಿಲ್ಲ; ಆದರೆ ಯಾವುದು ಇದೆಯೋ ಅದನ್ನು ನಿರ್ವಂಚನೆಯಾಗಿ ಕೊಡುತ್ತೇವೆ. ನಾವು ಮಾಡತಕ್ಕ ಕೆಲಸವನ್ನು ದೃಢಬಂದಲೂ ನಿರ್ವಂಚನೆಯಿಂದಲೂ ಮಾಡಿದರೆ ಸರಸ್ವತಿಯು ಲಕ್ಷ್ಮಿಯು ತಾವಾಗಿ ಸಹಾಯಕ್ಕೆ ಬಂದು ನಿಲ್ಲುವರೆಂದು ನಮಗೆ ಧೈರ್ಯವಿದೆ"

ಇಂದಿಗೂ "ಪ್ರಬುದ್ಧ ಕರ್ಣಾಟಕ"ಕ್ಕೆ ಬೆಳ್ಳಿಯಿಲ್ಲ ಬಂಗಾರವಿಲ್ಲ. ಆದರ ಲೇಖಕರಿಗೆ ಇಷ್ಟು ದಿನವಾದರೂ ಒಂದು ಬಿಡಿಗಾಸನ್ನೂ ಸಂಭಾವನೆಯಾಗಿ ಕೊಟ್ಟಿಲ್ಲ ಸಂಭಾವನೆಯನ್ನು ಕೊಟ್ಟು ನೋಡೋಣವೆಂಬ ಸಲಹೆ ಬಂದಿತ್ತು. ಇದರ ಪರಿಸ್ಥಿತಿ ಉತ್ತಮವಾಗದೆ ಬೇಡವಾದ ಲೇಖನ ಬಂದು ಅನಾವಶ್ಯಕವಾದ ವೈಮನಸ್ಯಗಳು ಉಂಟಾಗುವದೇ ಸಂಭವವಾದ್ದರಿಂದ ಆ ಯೋಚನೆಯನ್ನು ಬಿಟ್ಟದ್ದಾಯಿತು. ನಾವು ಕೊಟ್ಟರೆ ತಾನೆ ಎಷ್ಟು ಕೊಟ್ಟೇವು! ಅಭಿಮಾನದಿಂದ ಬರೆಯುವವರು ದುಡ್ಡಿಗೆ ಬರೆದಾರೆ! ಅದರಿಂದ ಅವರ ಹೊಟ್ಟೆ ತುಂಬೀತೆ! ಪ್ರಬುದ್ಧ ಕರ್ಣಾಟಕಕ್ಕೆ ಲೇಖನಗಳನ್ನು ಬರೆದುಕೊಟ್ಟ ಶ್ರೀಮಾನ್ ಬಿ. ಎಂ ಶ್ರೀಕಂಠಯ್ಯನವರು, ಮಾಸ್ತಿ ವೆಂಕಟೇಶಯ್ಯಂಗಾರರು, ಡಿ. ವಿ ಗುಂಡಪ್ಪನವರು ಅಭಿಮಾನದಿಂದ ಬರೆದಿರುವ ಲೇಖನಗಳನ್ನೂ ಕೊಟ್ಟಿರುವ ಗ್ರಂಥಗಳನ್ನೂ ಎಷ್ಟು ದುಡ್ಡು ಕೊಟ್ಟರೆ ತಾನೇ ಬರೆದು ಕೊಡುತ್ತಿದ್ದರು! ದುಡ್ಡಿಗೆ ದೊರಕುವದು "ಬಾಜಾರಿ ಮಾಲು!" ಇಂಥ ಜನ, ಇಂಥ ಲೇಖನ, ದುಡ್ಡಿಗೆ ದೊರೆತೀತೇ?

"ಬೆಲೆಯಿಂದಕ್ಕುಮೆ ಕೃತಿಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಳ್ಪಂ।
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ॥"

ನೇಮಿಚಂದ್ರ

ಬರೆವಣಿಗೆ ಬರೆಯಬಲ್ಲ ಕೀರ್ತಿಕಾಮಿಗಳಾದ ಕೆಲವರು ಕನ್ನಡದಲ್ಲಿ ಏಕೆ ಬರೆಯಬೇಕು! ಒರೆದರೆ ಯಾರು ನೋಡುತ್ತಾರೆ! ನಮಗೆ ಏನು ಬರುತ್ತದೆ! ಎಂದು ಇಂದಿಗೂ ಮೂಗುಮುರಿಯುತ್ತಾರೆ. ಇದು "ನಮ್ಮ ಬಡ ತಾಯಿ ತಂದೆಗಳ, ಮಕ್ಕಳು-ಮರಿಗಳ ಹೊಟ್ಟೆ ತುಂಬಿಸುವದರಲ್ಲಿಯೇ ನಮ್ಮ ಐಶ್ವರ್ಯ ವನ್ನು ಕಳೆದರೆ ನಮಗೆ ಬಿರುದು-ಬಾವಲಿಗಳು ಬರುವದು ಹೇಗೆ?" ಎಂದು ಕೇಳಿದಂತಾಗುತ್ತದೆ. ಅಂಥವರ ಮಾತು ಬೇಡ; ಬಂಗಾಳಿ, ಮರಾಠಿ ಮುಂತಾದ ಭಾಷೆಗಳು ಇಂಥವರಿಂದಲ್ಲ ಮುಂದೆ ಬಂದಿರುವದು.

ಮೊದಲಿನ ಎರಡು ವರ್ಷ "ನಾನು ಮತ್ತು ನನ್ನ ಕಣ್ಣಿನ ಬೊಂಬೆ" ಎಂಬಂತೆ ಪತ್ರಿಕೆಯಲ್ಲಿ ನನ್ನ ಮತ್ತು ನನ್ನ ಶಿಷ್ಯರ ಲೇಖನಗಳೇ ಬಂದುವು. ಬರಿಯ ಗದ್ಯ ಲೇಖನಗಳೇ ಬಂದುವು. ಆ ಮೇಲೆ ಪದ್ಯ ಬಂತು, ನಾಟಕ ಬಂತು, ಸಣ್ಣ ಕಥೆ ಬಂತು; ಪ್ರಚಲಿತ ರಾಜಕೀಯ ವಿಚಾರ ಒಂದು ಹೊರತು ಮಿಕ್ಕ ವಿಷಯುಗಳ ಮೇಲಣ ಲೇಖನಗಳೆಲ್ಲವೂ ಬಂದುವು.

× × × ×

ಪ್ರಬುದ್ಧ ಕರ್ಣಾಟಕದ ಲೇಖನಗಳು ಪುಡಿಪುಡಿಯಾಗಿರಬಾರದೆಂದೂ ಸಾರವತ್ತಾಗಿ ನಾಲ್ಕು ಕಾಲ ನಿಲ್ಲುವಂತಿರಬೇಕೆಂದೂ ಸಾಧ್ಯವಾದರೆ ಕೆಲವು ಸಂಚಿಕೆಗಳಲ್ಲಿ ಬಂದ ಲೇಖನಗಳನ್ನು ಸೇರಿಸಿ ಅಚ್ಚುಕಟ್ಟಾದ ಒಂದು ಪುಸ್ತಕ ಮಾಡುವಂತಿರಬೇಕೆಂದೂ ನಿರ್ಧರಿಸಿದ್ದೆವು. ಕರ್ಣಾಟಕ ಸಂಘವು ಪ್ರಕಟಿಸಿದ ಅನೇಕ ಗ್ರಂಥಗಳು ಇಂಥವು. ಇವಲ್ಲದೆ ಆಗಾಗ್ಗೆ ಸಂಘವು ಉಳಿತಾಯದ ಹಣದಿಂದ ಸ್ವತಂತ್ರ ಗ್ರಂಥಗಳನ್ನು ಪ್ರಕಟಿಸಿ ಅವನ್ನು ಪ್ರಬುದ್ಧ ಕರ್ಣಾಟಕದ ಚಂದಾದಾರರಿಗೆ ಉಚಿತವಾಗಿ ಹಂಚಿತು.

ಸಂಪಾದಕನಾಗಿ ನಾನು ಲೇಖನಗಳನ್ನು ಆರಿಸಿಕೊಳ್ಳುವುದರಲ್ಲಿಯೂ ಅವುಗಳಿಗೆ ರೂಪುಗೊಡುವುದರಲ್ಲಿಯೂ ನಿಷ್ಠುರವಾಗಿ ವ್ಯವಹರಿಸಿದ ಬಗ್ಗೆ ಒಂದು ಮಾತು ಬರೆಯುವುದು ಅವಶ್ಯಕ. ಈ ನಿಷ್ಠುರತೆಗಾಗಿ ನಾನು ಎಷ್ಟೋ ದುರ್ಜನನಾಗಿದ್ದೇನೆ; ದೂರಿಗೆ ಒಳಗಾಗಿದ್ದೇನೆ; ಆದರೆ ಎಂದೂ ಇಂದಿಗೂ ಕೂಡ ಪಶ್ಚಾತ್ತಾಪಪಟ್ಟಿಲ್ಲ. ಹುರುಳಿಲ್ಲದ ಲೇಖನಗಳನ್ನು ತಿರಸ್ಕರಿಸಿ ಹಿಂದಕ್ಕೆ ಕಳುಹಿಸುವ ಅಪ್ರಿಯವಾದ ಕೆಲಸವನ್ನು ನಾನು ನಿರ್ದಾಕ್ಷಿಣ್ಯವಾಗಿ ಮಾಡಿದ್ದೇನೆ. "ಕಾವ್ಯಗಳನ್ನು ನಮ್ಮದು ತಮ್ಮದೆಂಬ ಒಂದು ಸುಳ್ಳು ಅಭಿಮಾನವನ್ನಾಗಲಿ ಕನ್ನಡ ಕಾಡುಭಾಷೆ ಎಂಬ ಒಂದು ಕೀಳು ಬುದ್ಧಿ

ಯನ್ನಾಗಲಿ ಇಟ್ಟುಕೊಳ್ಳದೆ ನಿರ್ದಾಕ್ಷಿಣ್ಯವಾಗಿಯೂ ನಿಷ್ಪಕ್ಷಪಾತವಾಗಿಯೂ ವಿಚಾರ ಮಾಡಿ, ದೋಷಗಳನ್ನು ಕಿತ್ತುಒಗೆದು, ಗುಣಗಳನ್ನು ಗ್ರಹಿಸಿ, ಒಂದು ಕಡೆ ವಿಮರ್ಶೆಯನ್ನೂ ಮತ್ತೊಂದು ಕಡೆ ರಚನೆಯನ್ನೂ ಮಾಡಬೇಕೆಂಬುದು ನಮ್ಮ ಉದ್ದೇಶ." ಹಳೆಯದಕ್ಕೂ ಅದೇ ಸೂತ್ರ, ಹೊಸದಕ್ಕೂ ಅದೇ ಸೂತ್ರ. ಸಾಹಿತ್ಯದ ಮಟ್ಟ ಏರಬೇಕು, ಅಭಿರುಚಿಯ ಗುಣ ಉತ್ತಮಗೊಳ್ಳಬೇಕು, ಪತ್ರಿಕೆಗೆ ಗೌರವ ಬರಬೇಕು— ಇದು ನನ್ನ ಉದ್ದೇಶ. ಆದ್ದರಿಂದ ಹುಡುಗರ ಮಾತು ಹಾಗಿರಲಿ ದೊಡ್ಡವರಿಂದ ಬಂದ ಲೇಖನಗಳನ್ನೂ ಎಷ್ಟೋ ಸಾರೆ ಹಿಂತಿರುಗಿಸಿ, ತಿದ್ದಿ, ತಿದ್ದಹೋಗಿ ಬೈಗಳನ್ನೂ ತಿಂದಿದ್ದೇನೆ. ಇದರ ವಿವೇಕ ವನ್ನು ಒಪ್ಪಿದ ಒಬ್ಬ ಹಿರಿಯ ಮಿತ್ರರು ಇಂದಿಗೂ ನನ್ನನ್ನು ಪ್ರಶಂಸಿಸುತ್ತ ಇದ್ದಾರೆ. ಒಂದು ಸಾರೆ ಮೊದಲನೆಯ ಪುಟದಲ್ಲಿ ಹಾಕುತ್ತಿದ್ದ ಪ್ರಾರ್ಥನೆಯ ಪದ್ಯ ಬೇಕಾಯಿತು. ಅವರನ್ನು ಕೇಳಿಕೊಂಡೆ. ನನಗೆ ಇಲ್ಲವೆನ್ನಲಾರದೆ ಇದ್ದಷ್ಟು ಕಾವಿನಲ್ಲೇ— ಪ್ರಾಯಶಃ ಇಲ್ಲದ ಸ್ಫೂರ್ತಿಯನ್ನು ಒದಗಿಸಿಕೊಂಡು— ಒಂದು ಪದ್ಯ ಬರೆದುಕೊಟ್ಟರು. ಅದು ಎಂದಿನಂತೆ ಸರಳವಾಗಿ ಬರಲಿಲ್ಲ ಅದನ್ನು ಅವರೇ ಅರಿತು ಕೆಲವು ಮಾತುಗಳಿಗೆ ಅಡಿ ಟಿಪ್ಪಣಿಯಲ್ಲಿ ಅರ್ಥ ಬರೆದಿದ್ದರು ನನಗೆ ಅದು ಒಪ್ಪಿಗೆಯಾಗದೆ ಪದ್ಯವನ್ನು ತೆಗೆದುಕೊಂಡು ಹೋಗಿ ಹಿಂತಿರುಗಿ ಕೊಟ್ಟು, "ಏನು ಸ್ವಾಮಿ ನಿಮ್ಮಂಥವರೂ ಟೀಕೆ ಟಿಪ್ಪಣಿ ಗಳಿಂದ ಅರ್ಥಮಾಡಿಕೊಳ್ಳಬೇಕಾದ ಪದ್ಯವನ್ನು ಬರೆದುಬಿಟ್ಟರೆ ಗತಿ !" ಎಂದೆ. ಆ ಕ್ಷಣದಲ್ಲಿ ಅವರಿಗೆ ಸ್ವಲ್ಪ-ಅಸಮಾಧಾನವಾಯಿತು. ಆದರೆ ಒಂದೆರಡು ದಿನ ಬಿಟ್ಟುಕೊಂಡು ಬಂದು, ಅವರು ನಾನು ಮಾಡಿದ್ದೇ ಸರಿ ಎಂದರು. ಹೆತ್ತವರಿಗೆ ಹೆಗ್ಗಣ ಮುದ್ದು. ಆದರೆ ಸೃಷ್ಟಿಯಲ್ಲಿ ಕಳಪೆಗಳು ಜಳ್ಳುಗಳು ತೂರಿ ಹೋಗುತ್ತವೆ. ರಂಗಕ್ಕೆ ಬರಬೇಕಾದರೆ- ಯುದ್ಧರಂಗವಾಗಲಿ ನಾಟಕ ರಂಗವಾಗಲಿ— ನಿಷ್ಠುರವಾದ ಆಯ್ಕೆ ನಡೆಯುತ್ತದೆ. ಆದ್ದರಿಂದ ನಾನು ಲೇಖನಗಳನ್ನು ಆಯ್ದು ಆಯ್ದು ಹಾಕುತ್ತಿದ್ದೆ. "ಪ್ರಥಮ ಪ್ರಯತ್ನ" "ವಿದ್ಯಾರ್ಥಿ ಅಭ್ಯಾಸ" ಎಂಬ ಮಾತುಗಳಿಗೆ ಕಿವಿಗೊಡುತ್ತಿರಲಿಲ್ಲ. ಇಂಥವ ರಲ್ಲಿ ಯಾರಲ್ಲಾದರೂ ಯೋಗ್ಯತೆ ಇದೆ ಎಂದು ತೋರಿದರೆ ಅವರನ್ನು ಒಂದಕ್ಕೆ ಬದಲಾಗಿ ನಾಲ್ಕು ಲೇಖನಗಳನ್ನು— ಇದ್ದವುಗಳಲ್ಲಿ ಉತ್ತಮವಾದವುಗಳನ್ನು —ಕಳುಹಿಸಿಕೊಡಿ ಎಂದು ಪ್ರಾರ್ಥಿಸುತ್ತಿದ್ದೆ. ಬಂದವುಗಳಲ್ಲಿ ಉತ್ತಮ ವಾದದ್ದನ್ನು ಆರಿಸಿಕೊಂಡು ಪ್ರಕಟಿಸುತ್ತಿದ್ದೆ ನನ್ನ ವಿಮರ್ಶೆ ಬುದ್ಧಿ ಅಷ್ಟು

ಉತ್ತಮವಲ್ಲದಿರಬಹುದು; ಅಭಿರುಚಿ ಉದಾರವಲ್ಲದ್ದಿರಬಹುದು, ಆದರೆ ಜವಾಬುದಾರಿ ನನ್ನದಾಗಿತ್ತು; ಮತ್ತು ಅನೇಕ ವೇಳೆ ಇತರರ ವಿಮರ್ಶೆ ವಿವೇಚನೆಗಳು ನನ್ನವಕ್ಕಿಂತ ಉತ್ತಮವಾಗಿದ್ದುವೆನ್ನಿಸುತ್ತಿರಲಿಲ್ಲ. ಒಟ್ಟಿನ ಮೇಲೆ ಲೇಖಕರು ಯಾರೂ, ನನ್ನ ಉಳಿಯ ಏಟುಗಳಿಂದ ಕತ್ತರಿಯ ಪ್ರಯೋಗಗಳಿಂದ ತಮ್ಮ ಲೇಖನಗಳು ವಿರೂಪಗೊಂಡುವು ಎಂದು ಇಂದಿಗೂ ಆಕ್ಷೇಪಿಸಿಲ್ಲ........ಕಾಲಕ್ರಮದಲ್ಲಿ ತರುಣ ಲೇಖಕರು ಪ್ರಬುದ್ಧ ಕರ್ಣಾಟಕ ದಲ್ಲಿ ತಮ್ಮ ಲೇಖನವನ್ನು ಪ್ರಕಾಶಪಡಿಸಬೇಕೆಂದು ಅಪೇಕ್ಷಿಸುವುದೂ ಅದರ ಸಂಪಾದಕರು ಹಾಕುತ್ತಾರೋ ಇಲ್ಲವೋ ಎಂದು ಶಂಕಿಸುವುದೂ, ಹಾಕಿದರೆ ಹೆಮ್ಮೆಪಡುವುದೂ ಸಾಮಾನ್ಯವಾಯಿತು; ಮತ್ತು ಉಚ್ಚ ತರಗತಿಯ ಲೇಖನ ಗಳೇ ಅಭ್ಯಾಸವಾಗಿ ಪ್ರಬುದ್ಧ ಕರ್ಣಾಟಕದ ದೊಡ್ಡಸ್ತಿಕೆಯನ್ನು ದೂರು ತ್ತಿದ್ದ ಜನರೇ ಅದೂ ಸ್ವಲ್ಪ ಕೀಳು ಮಟ್ಟಕ್ಕೆ ಇಳಿದರೆ ಸಪ್ಪೆಯಾಯಿತೆಂದು ಆಕ್ಷೇಪಿಸುವಂತಾದರು. ಈ ಇಪ್ಪತ್ತೈದು ವರ್ಷಗಳಿಂದ ಹೊಸಗನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಎಷ್ಟೋ ಉತ್ತಮವಾದ ವ್ಯವಸಾಯ ನಡೆದಿದೆ. ಪ್ರಬುದ್ಧ ಕರ್ಣಾಟಕವು ಅದು ನಡೆಯುವಂತೆ ಸ್ವಲ್ಪವಾದರೂ ಸಾಧನವಾಗಿ ಕಾಡು ಕಡಿದು, ಭೂಮಿಯನ್ನು ಉತ್ತು, ನೆಲ ಹದಮಾಡಿ, ಬೇಲಿಹಾಕಿ, ಅಷ್ಟೋ ಇಷ್ಟೋ ನೀರು ಬೀಜ ಗೊಬ್ಬರಗಳನ್ನು ಒದಗಿಸಿಕೊಟ್ಟಿದೆ ಎಂದು ನಂಬಿದ್ದೇನೆ. ಆದರೆ ಬರಿಯ ನೆಲ ನೇಗಿಲುಗಳಿಂದ ಆಗುವುದು ಏನು? ಫಲ ತೆಗೆಯಲು "ನೇಗಿಲಯೋಗಿ"ಗಳು ಬೇಕು. ಅವರನ್ನು ಆರಿಸಿ ಕಳುಹಿಸಿ ಕೊಡುವುದು ಭಗವಂತನ ದಯೆ, ನಾಡಿನ ಪುಣ್ಯ!

×　　×　　×　　×

ಪತ್ರಿಕೆಯು ಆರಂಭವಾದಂದಿನಿಂದ ಹದಿನೂರು ವರುಷ ನಾನೇ ಸಂಪಾದಕನಾಗಿದ್ದೆ. ಆದರೆ ಮೊದಲ ಒಂದೆರಡು ಸಂಪುಟಗಳಲ್ಲಿ ಹೊರತು ನನ್ನ ಹೆಸರು ಸಂಪಾದಕನೆಂದು ಎಲ್ಲಿಯೂ ಕಂಡುಬರುವುದಿಲ್ಲ. ×× ನನ್ನ ಹೆಸರಿಗಿಂತಲೂ ಸಂಘದ ಹೆಸರು ಮುಂದೆ ಬರಬೇಕೆಂಬುದು ನನ್ನ ಉದ್ದೇಶ-ವಾಗಿದ್ದುದರಿಂದಲೂ 'ಲೇಖನದಲ್ಲಿ ತಿರುಳಿದ್ದರೆ ಅದರಿಂದ ಪತ್ರಿಕೆಗೆ ಹೆಸರು ಬರುತ್ತದೆಯೇ ಹೊರತು ಸಂಪಾದಕನ ಹೆಸರು ಅಧಿಕಾರ ಶ್ರೀಮಂತಿಕೆಗಳಿಂದ ಅಲ್ಲವೆಂಬ ಒಂದು ದೃಢವಿಶ್ವಾಸವಿದ್ದುದರಿಂದಲೂ ನನ್ನ ಹೆಸರನ್ನು ನಾನು ಪ್ರಕಟಿಸುತ್ತಿರಲಿಲ್ಲ. ಹೆಸರಿಲ್ಲದೆ ಅಥವಾ ಬೇರೆ ಹೆಸರಿನಿಂದ ನಾನು ಪ್ರಬುದ್ಧ

ಕರ್ಣಾಟಕಕ್ಕೆ ಎಷ್ಟೋ ಸಣ್ಣ ದೊಡ್ಡ ಲೇಖನಗಳನ್ನು ಬರೆದಿದ್ದೇನೆ; ಆದರೆ ಜವಾಬುದಾರಿ ಹೊರಬೇಕಾದಾಗ ನನ್ನ ಹೆಸರನ್ನು ಹಾಕುವದಕ್ಕೆ ಎಂದೂ ಹಿಂತೆಗೆದಿಲ್ಲ.

ಮೊದಲು ಕೆಲವು ವರ್ಷ ಪತ್ರಿಕೆ ನಡೆಯಲು ಮೈಸೂರಲ್ಲಿ ನಾನೂ ಬೆಂಗಳೂರಿನಲ್ಲಿ ವೆಂಕಣ್ಣಯ್ಯನವರೂ ತುಂಬ ಶ್ರಮಬಡಬೇಕಾಯಿತು ಸಂಚಿಕೆಗಳನ್ನು ಮನೆಮನೆಗೆ ತೆಗೆದುಕೊಂಡು ಹೋಗಿ ಕೊಟ್ಟು ವರ್ಷವೆಲ್ಲಾ ಕಾದು ಕೊನೆಗೆ ಚಂದಾ ಕೇಳಿ ಆಗ ಬಾ ಈಗ ಬಾ ಎನಿಸಿಕೊಂಡು ಮಾರವಾರಿ, ನಕ್ಷತ್ರಿಕ ಎನ್ನಿಸಿಕೊಂಡು ದುಡ್ಡು ಸಂಪಾದನೆ ಮಾಡಿಯಾಯಿತು. ಉತ್ಸಾಹಕ್ಕೆ ತಕ್ಕಷ್ಟು ಅನುಭವವಿರಲಿಲ್ಲ. ಅಭಿಮಾನವೇನೋ ಬೇಕಾದಷ್ಟಿತ್ತು. ಈ ಅಭಿಮಾನದಿಂದಲೇ ಕಾಲೇಜಿನ ವಿದ್ಯಾರ್ಥಿಗಳು ನಮ್ಮ ಜೊತೆಗೂ ದುಡಿದು ದುಡ್ಡು ತಂದುಕೊಟ್ಟು, ಪತ್ರಿಕೆಯನ್ನು ಬದುಕಿಸಿದರು. ಆಗ್ಗೆ ಕನ್ನಡದ ಅಭಿಮಾನ ಇನ್ನೂ ಹೊಸದು; ಬೇರೆ ಪ್ರಬಲ ಭಾಷೆಗಳೊಡನೆ ಅದಕ್ಕೆ ಪೈಪೋಟಿ ಇರಲಿಲ್ಲ. ರಾಜಕೀಯ ಚಳುವಳಿ ಇರಲಿಲ್ಲ. ಜನರೂ ಇದೊಂದು ವಿದ್ಯಾರ್ಥಿಗಳ ಸಾಹಸ ಎಂದು ಮೆಚ್ಚಿಗೆಯಿಂದಲೂ ಸಂತೋಷದಿಂದಲೂ ಪ್ರೋತ್ಸಾಹಿಸುತ್ತಿದ್ದರು............

ಎಲ್ಲ ಕೆಲಸವನ್ನು ಬದಿಗಿಟ್ಟು ದೇಹವನ್ನು ತೇಯ್ದಾಯಿತು ಆದರೆ ಇಷ್ಟು ವರ್ಷವಾದರೂ ಪತ್ರಿಕೆಯನ್ನು ಎಷ್ಟೆಷ್ಟು ಪುಷ್ಟಿಗೊಳಿಸಿ, ಸುಂದರಗೊಳಿಸಿದರೂ ಆದರ ಚಂದಾದಾರರು ಎಂಟು ನೂರಕ್ಕೆ ಹೆಚ್ಚಾಗಲಿಲ್ಲ........ ಆದ್ದರಿಂದ ನಮ್ಮ ಜನದಲ್ಲಿ ಇಂಥ ವಸ್ತುವನ್ನು ಉಪಯೋಗಿಸಿಕೊಳ್ಳುವವರ ಪ್ರಮಾಣವೇ ಇಷ್ಟು; ಅಗ್ಗವಾಗಿ ಕೊಟ್ಟರೂ ಇಷ್ಟೇ ಬಿಟ್ಟಿಕೊಟ್ಟರೂ ಇಷ್ಟೇ ಎಂದು ಒಂದು ವಿಧವಾದ ಸಮಾಧಾನವನ್ನು ತಂದುಕೊಂಡೆ ಆದರೂ ಮನಸ್ಸಿಗೆ ನಿರುತ್ಸಾಹವೇನೋ ತುಂಬ ಇತ್ತು. ಇನ್ನೊಂದು ವರ್ಷ ಆದಷ್ಟು ಚೆನ್ನಾಗಿ ನಡೆಸಿ, ಸಾಕಾದಷ್ಟು ಪ್ರೋತ್ಸಾಹ ದೊರೆಯದ್ದರಿಂದ ಇದನ್ನು ನಿಲ್ಲಿಸಿದ್ದೇನೆಂದು ಪ್ರಕಟಿಸಿ, ಪತ್ರಿಕೆಯನ್ನು ಕೈಬಿಡೋಣವೆಂದುಕೊಂಡಿದ್ದೆ. ಆದರೂ ಅಭಿಮಾನ ಹೋಗಿರಲಿಲ್ಲ. ಪತ್ರಿಕೆಯ ಆಯುಸ್ಸು ಇನ್ನು ತುಂಬ ಇತ್ತು. ಒಂದು ದಿನ ಸಂಘದ ಅಧ್ಯಕ್ಷರಾಗಿದ್ದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಲ್ಲಿ ಪತ್ರಿಕೆಯ ಪ್ರಸ್ತಾಪವನ್ನೆತ್ತಿ ಇದನ್ನು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿ ಸರಕಾರದ

ಪತ್ರಿಕೆಯಾಗಿ ಮಾಡಿದರೆ ಅಂಚೆವೆಚ್ಚ ಉಳಿಯುವದೆಂದು ಸೂಚಿಸಿದೆ. ವಿಶ್ವವಿದ್ಯಾನಿಲಯವು ೧೯೩೨ರಲ್ಲಿ ಪತ್ರಿಕೆಯನ್ನು ತನ್ನ ಆಡಳಿತಕ್ಕೆ ತೆಗೆದು ಕೊಂಡಾಗ ಕೂಡ ಸಹಸಂಪಾದಕನಾಗುವ ಪ್ರಸಂಗ ಬಂದಿತು ಸಂಪಾದಕ ಸಮಿತಿಯಲ್ಲಿ ಎಷ್ಟೇ ಜನವೇ ಇರಲಿ; ಆದರ ಅಧ್ಯಕ್ಷರು ಯಾರೇ ಇರಲಿ ಪತ್ರಿಕೆಯ ಜವಾಬುದಾರಿಯು ಸಂಪಾದಕನದು ಅದಕ್ಕೆ ಸಂಪಾದಕನು ತನ್ನ ದೇಹವನ್ನೂ, ಜೀವವನ್ನೂ ತೆಯ್ಯಬೇಕು, ಇಲ್ಲದಿದ್ದರೆ ಅದು ಸೊರಗಿ ಹೋಗುವುದು ಇದು ನನ್ನ ಕಟುವಾದ ಅನುಭವ. × × × × ವೆಂಕಣ್ಣಯ್ಯನವರಿಗೆ ಆವರ ಸುತ್ತ ಉತ್ಸಾಹಿಗಳೂ ಸಮರ್ಥರೂ ಆದ ತರುಣರು ಸಹಾಯಕ್ಕೆ ಇದ್ದರೆಂಬ ಧೈರ್ಯದಿಂದಲೂ ಸಂಸ್ಕೃತ ನಾಟಕ ಬರೆಯುವ ಕೆಲಸ ವಹಿಸಿಕೊಂಡದ್ದರಿಂದಲೂ ಪತ್ರಿಕೆಯ ಕೆಲಸವನ್ನು ಒಂದೇ ಸಮನಾಗಿ ಹದಿಮೂರು ವರ್ಷ ನಡಸಿ ತಲೆಚಿಟ್ಟುಹಿಡಿದು ಹೋಗಿದ್ದದ್ದರಿಂದಲೂ ಈ ಕಾಲದಲ್ಲಿ ನಾನು ಸಹಸಂಪಾದಕನಾಗಿ ಅವರಿಗೆ ಎಷ್ಟು ಸಹಕಾರ ಕೊಡಬೇಕಾಗಿತ್ತೋ ಅಷ್ಟನ್ನು ಕೊಡಲಿಲ್ಲ .

ದೇವರು ಆ ಕಾಲದಲ್ಲಿ ನನಗೆ ಸ್ವಲ್ಪ ಬಿಡುವು ಕೊಟ್ಟು ಬೇರೆ ಕೆಲಸ ಮಾಡಿಸಿದ; ಆದರೆ ಆ ಬಿಡುವು ಇದ್ದದ್ದು ಕೆಲವು ವರ್ಷ ಮಾತ್ರ; "ಸಂಸ್ಕೃತ ನಾಟಕ" ಬರೆದು ಮುಗಿಯುವ ವರೆಗೆ. ಈ ಮಧ್ಯೆ ಪರಿಷತ್ ಪತ್ರಿಕೆಯ ಸಂಪಾದಕತ್ವ ಒದಗಿತು; ಅದನ್ನು ಉತ್ತಮಗೊಳಿಸಬೇಕೆಂಬ ಆದರ್ಶವಾದಿ ಗಳ ಮಧ್ಯದಲ್ಲಿ ದುಡಿಯಬೇಕಾಯಿತು; ಇಷ್ಟು ಹೊತ್ತಿಗೆ ಶ್ರೀಮಾನ್ ವೆಂಕಣ್ಣಯ್ಯನವರು ಅನಿರೀಕ್ಷಿತವಾಗಿ ೧೯೩೯ರಲ್ಲಿ ಸ್ವರ್ಗಸ್ಥರಾಗಲು ನನ್ನ ಮಗುವನ್ನು ನಾನು ನೋಡಿಕೊಳ್ಳಬೇಕಾಯಿತು.

ನಾನು ಮೈಸೂರಿಗೆ ಪ್ರೊಫೆಸರಾಗಿ ಮತ್ತು ಪತ್ರಿಕೆಯ ಸಂಪಾದಕನಾಗಿ ಬಂದ ಕೂಡಲೇ ಆಗ ಸ್ಥಾನಪತಿಗಳಾಗಿದ್ದ ಶ್ರೀಮಾನ್ ಎನ್. ಎಸ್. ಸುಬ್ಬರಾಯರು ನನ್ನನ್ನು ಕರೆದು "ಕೃಷ್ಣಶಾಸ್ತ್ರೀ, ಪ್ರಬುದ್ಧ ಕರ್ಣಾಟಕದ ಸಂಪಾದಕನಾಗಿ ಈಗ ನೀನು ಮೂರು ಕೆಲಸಗಳನ್ನು ಮಾಡಬೇಕು:— (೧) ಪತ್ರಿಕೆಯನ್ನು ಕಾಲಕಾಲಕ್ಕೆ ತಡವಿಲ್ಲದೆ ಹೊರಡಿಸುವದು. (೨) ಅದರಲ್ಲಿ ಸಾಹಿತ್ಯಮಾತ್ರವಲ್ಲದೆ ಶಾಸ್ತ್ರವಿಚಾರಗಳನ್ನೂ ಪ್ರಕಟಿಸುವದು (೩) ಮೈಸೂರಿ ನಿಂದ ಹೊರಗೆ ಇರುವ ಕರ್ಣಾಟಕರ ಸಹಾಯ ಸಹಾನುಭೂತಿಗಳನ್ನು ಹೆಚ್ಚು

ಹೆಚ್ಚಾಗಿ ಪಡೆಯುವದು. ಇವಿಷ್ಟನ್ನೂ ಮನಸ್ಸಿನಲ್ಲಿಟ್ಟುಕೊಂಡು ಪತ್ರಿಕೆಯನ್ನು ಉತ್ತಮಗೊಳಿಸು, ಉತ್ತಮೋತ್ತಮವಾದದ್ದನ್ನಾಗಿ ಮಾಡು; ಅದಕ್ಕೆ ಬೇಕಾದ ದ್ರವ್ಯವನ್ನು ಒದಗಿಸುವದು ನನ್ನ ಭಾರ." ಎಂದರು. ಕೈಬಿಡ-ಬೇಕೆಂದಿದ್ದ ಪತ್ರಿಕೆಯನ್ನು ವಿಶ್ವವಿದ್ಯಾನಿಲಯದ ಕೊರಳಿಗೆ ಕಟ್ಟಿ, ಅದು ನರಳುತ್ತಿದ್ದರೂ ನೋಡುತ್ತ ನಿರ್ಮಮತೆಯನ್ನು ಅಭ್ಯಾಸಮಾಡುತ್ತಿದ್ದ ನನಗೆ ಈ ಪ್ರಲೋಭನ ಒದಗಿತು. "ಈ ನವೆಯುತ್ತಿರುವ ನಂದಾದೀಪಕ್ಕೆ ಎಣ್ಣೆ ಕೊಡುತ್ತಾರಂತೆ ನೋಡೋಣ, ಬತ್ತಿ ಸರಿ ಮಾಡಿ ದೀಪ ದೊಡ್ಡದು ಮಾಡೋಣ; ಹೆಚ್ಚು ಬೆಳಕು ಬಂದರೆ ಬರಲಿ, ವ್ಯೈಮಸಿಯಾದರೆ ಕೈ ಜಿಡ್ಡಾದರೆ ಚಿಂತೆಯಿಲ್ಲ" ಎಂದು ಮತ್ತೆ ದೀಪದ ಮುಂದೆ ಕುಳಿತೆ. ಆ ಪೂಜಾಫಲವೇ ೨೧ ರಿಂದ ೨೪ ವರ್ಷ ಪೂರ್ತಿಯ ನಾಲ್ಕು ಸಂಪುಟಗಳು.

.... .... ....೧೯೪೨ ರಲ್ಲಿ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ-ನವರು ಅಧಿಕಾರದಿಂದ ವಿಶ್ರಾಂತರಾದರು. ಆದ್ದರಿಂದ ಕನ್ನಡ ಗ್ರಂಥ ಪ್ರಕಾಶನ ಸಮಿತಿಯ ಅಧ್ಯಕ್ಷತೆಯು ನನ್ನ ಪಾಲಿಗೆ ಬಂತು ಅದು ಹೇಗಾದರೂ ಇರಲಿ, ಶ್ರೀಮಾನ್ ವೆಂಕಣ್ಣಯ್ಯನವರು ಜೀವಂತರಾಗಿದ್ದು ಶ್ರೀಮಾನ್ ಶ್ರೀಕಂಠಯ್ಯನವರು ಅಧಿಕಾರದಲ್ಲಿದ್ದಾಗ ವಿಶ್ವವಿದ್ಯಾಲಯ ಮತ್ತು ವಿದ್ಯಾಇಲಾಖೆ ಇವುಗಳಿಗೆ ಸಂಬಂಧಪಟ್ಟ ಹಲವು ಕನ್ನಡ ಕೆಲಸಗಳನ್ನು ನಾವು ಮೂರು ಜನವೂ ಹಂಚಿಕೊಂಡು ಮಾಡುತ್ತಿದ್ದೆವು. ಆದರೆ ಈಗ ಅದೆಲ್ಲವೂ ನನ್ನ ಮೇಲೆ ಬಿತ್ತು. ಅದಷ್ಟೂ ದೊಡ್ಡ ಹೊರೆಯಾದ್ದರಿಂದ ವಿಶ್ವವಿದ್ಯಾ-ನಿಲಯದ ಕೆಲಸವನ್ನು ಮುಖ್ಯವಾಗಿ ಇಟ್ಟುಕೊಂಡು ಮಿಕ್ಕದ್ದನ್ನು ಬಿಡಬೇಕಾಗಿ ಬಂತು; ಅದರಲ್ಲಿಯೂ ಗ್ರಂಥಪ್ರಕಾಶನ ಸಮಿತಿಯ ಅಧ್ಯಕ್ಷತೆ ಬಂದಮೇಲೆ ಅದರ ಜೊತೆಗೆ ಪ್ರಬುದ್ಧ ಕರ್ಣಾಟಕವನ್ನು ನೋಡಿಕೊಳ್ಳುವದು ಸಾಧ್ಯವಿಲ್ಲವೆಂದೂ, ಈ ಕೆಲಸವನ್ನು ಮತ್ತಾರಿಗಾದರೂ ವಹಿಸಿಕೊಡಬೇಕೆಂದೂ ಅಧಿಕಾರಿಗಳೊಡನೆ ಪತ್ರವ್ಯವಹಾರ ನಡಸುತ್ತಿದ್ದೆ. ಅದು ಒಂದು ರೂಪಕ್ಕೆ ಬಂದು ತೀರ್ಮಾನವಾಗುವ ತನಕ ಎರಡೂ ಕೆಲಸಗಳನ್ನು ನಾನೇ ನಡಸು-ತ್ತಿದ್ದೆ. ನನ್ನ ಸಂಪಾದಕತ್ವದ ಮತ್ತು ಅಧ್ಯಕ್ಷತೆಯ ಅವಧಿಯಲ್ಲಿ ನನಗೆ ನೆರವಾದ ನನ್ನ ಮಿತ್ರರೆಲ್ಲರಿಗೂ ನನ್ನ ಕೃತಜ್ಞತೆಯನ್ನರ್ಪಿಸುತ್ತೇನೆ.

ಎ. ಆರ್. ಕೃಷ್ಣಶಾಸ್ತ್ರಿ

## ಸಾಹಿತ್ಯ ಮತ್ತು ಸಾರ್ಥಕತೆ ++ ++ ++

ಸಾಹಿತ್ಯ ಸೇವೆಯು ಯಾವ ಪುರುಷಾರ್ಥದಲ್ಲಿ ಸೇರುವದೋ ನನಗೆ ಗೊತ್ತಿಲ್ಲ. ಅದರಿಂದಾಗುವ ಅರ್ಥಪ್ರಾಪ್ತಿ ಗೊತ್ತೇ ಇದೆ. ಆದರೂ ಆ ಆ ಕಾಲದ ಜನಕ್ಕೆ ಸರಿಯಾಗಿ ವ್ಯವಹಾರದ ಬೆಲೆ ಇದೆ ಅದು ಒಂದು ಕಾಮ ವ್ಯಾಪಾರ ಎಂದು ಹೇಳಬಹುದಾದರೂ ಅದು ನಿರ್ವಿಷಯವಾದುದು. ಆದರೂ ಅದು ಜನಪ್ರೀತಿಯನ್ನು ಸಂಪಾದಿಸುತ್ತದೆ. ಆ ಪ್ರೀತಿ ಹದಗೆಟ್ಟಾಗ ವಿರೋಧ ವನ್ನೂ ತರುತ್ತದೆ ಕವಿ-ಮನೋಧರ್ಮಕ್ಕೆ ಕಾವ್ಯ-ಕರ್ಮ ಸಹಜ ಎಂದು ಹೇಳಬಹುದು. ಭಾವ-ವಿಕಾರಗಳನ್ನು ಹೊಡೆದು ರಸ-ಧರ್ಮವನ್ನು ಸ್ಥಾಪಿಸು-ವುದು ಸಾಹಿತ್ಯದ ಸ್ವಭಾವ. ಸಾಹಿತ್ಯದಲ್ಲಿ ಕರ್ಮದಿಂದಂತೂ ಮುಕ್ತಿಯಿಲ್ಲ; ಕರ್ಮದಲ್ಲಿಯೇ ಒಂದು ಮುಕ್ತ ಸ್ವಚ್ಛಂದ ಆನಂದವಿದೆ. ಇಂಥ ವೃತ್ತಿಗೆ ಕೆಲವರು ನಿರಂಕುಶವೃತ್ತಿಯೆಂದೂ, ಒಮ್ಮೊಮ್ಮೆ ನಿರ್ಲಜ್ಜವೃತ್ತಿಯೆಂದೂ ಕೂಡ ತಿಳಿಯುವದುಂಟು. ಸಾಹಿತ್ಯವು ಅಂತು ಯಾವದೋ ಒಂದು ಪಂಚಮ-ಪುರುಷಾರ್ಥಪ್ರದವಾಗಿರಬೇಕು. ಪ್ರೇಮದಂತೆಯೇ "ಕಾಲೇನಾವ ರಣಾತ್ಯಯಾತ್ ಪರಿಣಮತೇ ಯತ್ ಸ್ನೇಹ ಸಾರೇ ಸ್ಥಿತಂ ಭದ್ರಂ" ಎಂದು ಭವಭೂತಿಯಂತೆ ಸಾಹಿತ್ಯದ ಸಫಲತೆಯಿದೆ ಎಂದು ತಿಳಿಯಬೇಕು. ಸಾಹಿತ್ಯವು ಸಫಲವಾಗದ ಪುಷ್ಪವೇನೂ ಅಲ್ಲ.

ನನ್ನ ಸಾಹಿತ್ಯಸೇವೆಯು ನನಗೆ ಅನೇಕ ಗೆಳೆಯರನ್ನು ದೊರಕಿಸಿ ಕೊಟ್ಟಿದೆ ಸಾಹಿತ್ಯ ಸಮ್ಮೇಲನದ ಅಧ್ಯಕ್ಷಪದವಿಯ ಬಹುಮಾನವೂ, ಅದಕ್ಕೂ ಹೆಚ್ಚಾಗಿ ನನ್ನ ೫೦ ನೆಯ ಹುಟ್ಟಿದ ದಿನದ ನಿಮಿತ್ತವಾಗಿ ಸಾಹಿತ್ಯ ಸೇವೆಗೆ ಮೆಚ್ಚಿದ ಜನತೆ ನನಗೆ ಅರ್ಪಿಸಿದ ದಕ್ಷಿಣೆಯೂ, ಸಾಹಿತ್ಯದ ಹಾಗು ಜನರ ರಸಿಕತೆಯ ಕುರುಹಾಗಿ ನಾನು ಕಂಡಿರುವಾಗ ಇದು ನಿಷ್ಫಲ ಎಂದು ಹೇಗೆ ಹೇಳಬೇಕು ?

ಸಾಹಿತ್ಯಪ್ರೀತಿ ನನ್ನಲ್ಲಿ ತಲೆದೋರಿದುದು ನನ್ನ ಹಾಯಸ್ಕೂಲ ಶಿಕ್ಷಣದ ಕಾಲದಲ್ಲಿಯೇ. ಆದರೂ ಅದು ನಿಜವಾಗಿ ಚಿಗುರಿಕೊಂಡುದು ನಾನು ಫರ್ಗ್ಯುಸನ್ ಕಾಲೇಜಿನಲ್ಲಿ ಕಲಿಯುವಾಗ. ಕನ್ನಡಭಾಷೆ, ಆದರ ಕಾವ್ಯ, ಸಾಹಿತ್ಯ, ಇಂಗ್ಲಿಷ, ಸಂಸ್ಕೃತ, ಮರಾಠಿ, ಕಾವ್ಯ ಸಾಹಿತ್ಯಗಳಿಗೆ ಸರಿಮೇಲಾಗ-ಬೇಕೆಂಬ ಯಾವದೋ ಒಂದು ಪ್ರೇರಣೆ ನನ್ನನ್ನು ಕಾವ್ಯಕ್ಕೆ ಕೈಯಿಕ್ಕಿಸಿತು. ಲಕ್ಷ್ಮೀಶ-ಸರ್ವಜ್ಞರು ನನಗೆ ಕನ್ನಡದ ಕಾವ್ಯಗುರುಗಳಾದರು ಶೆಲಿ-ಕೀಟ್ಸರ ಕಾವ್ಯಗಳು ಉದ್ದೀಪಕಗಳಾಗಿದ್ದವು. ಕಾಲಿದಾಸ, ಜಗನ್ನಾಥಪಂಡಿತ, ಜಯದೇವ ಮತ್ತು ಶಂಕರಾಚಾರ್ಯರ ಭಕ್ತಿಗೀತಗಳು ಆಮೊದಲೇ ನನ್ನ ಮನ-ದಲ್ಲಿ ನಿನದಿಸುತ್ತಿದ್ದವು. ರವೀಂದ್ರರ ಆಂಗ್ಲಗೀತಗಳು, ಶ್ರೀ ಅರವಿಂದರ ಭವಿಷ್ಯತ್ ಕಾವ್ಯ ಎಂಬ ಉಪನ್ಯಾಸಮಾಲೆ, ಇಮರ್ಸನ್ನನ ನಿಬಂಧಾವಲಿ ಇವುಗಳೊಳಗಿನ ಕಾವ್ಯಸೂತ್ರಗಳು ನನ್ನ ಮನದ ಹೆಣಿಗೆಯನ್ನು ಹಾಕಿದುವು. ವಚನಗಳು, ಏ. ಈ. ಯ ದೃಷ್ಟಾಂತದೀಪಿಕೆ, ಮೊರಿಸ ಮೇಟರಲಿಂಕನ ಹೃದಯಂಗಮವಾದ ಯುಕ್ತಿವಾದ ನನ್ನನ್ನು ಮುಂದೆಳೆದವು.

೧೯೧೮ರಲ್ಲಿ ನಾನು ಧಾರವಾಡಕ್ಕೆ ಬಂದಾಗ "ಸದ್ಬೋಧಚಂದ್ರಿಕೆ"ಯ ಯುಗ ಮುಗಿದು "ಸಚಿತ್ರ ಭಾರತ"ದ ವೈಭವವು "ಶುಭೋದಯ"ದಲ್ಲಿ ಅಡಗುತ್ತಿತ್ತು. ಶಾಂತಕವಿಗಳು, ಕಾವ್ಯಾನಂದ ಪುಣೇಕರ ಅವರು—ಅವರ ಜಾನಪದ ಒಲವಿನ ಮೂಲಕವಾಗಿಯೂ ರಾಷ್ಟ್ರೀಯ ವೃತ್ತಿಯ ಮೂಲಕ ವಾಗಿಯೂ ಆತ್ಮೀಯರಾಗಿ ತೋರುತ್ತಿದ್ದರು. ಶ್ರೀ ಆಲೂರ ವೆಂಕಟರಾಯರ, ಶ್ರೀ ರಾಜಪುರೋಹಿತರ, ಶ್ರೀ ನಾರಾಯಣಶರ್ಮರ, ಶ್ರೀ ಜಠಾರ ಬಳವಂತ ರಾಯರ ಪ್ರೋತ್ಸಾಹನ, ವಿಮರ್ಶೆ, ಸಹೃದಯ ಮಾತುಗಳು ಈ ವೃತ್ತಿಗೆ ಪೋಷಕಗಳಾದವು. ಧಾರವಾಡದಲ್ಲಾದ ನಾಲ್ಕನೆಯ ಸಾಹಿತ್ಯಸಮ್ಮೇಲನದಲ್ಲಿ ನನ್ನ ಚಿಗುರುಗವಿತೆಗಳಿಗೆ ಬಂದ ಖ್ಯಾತಿ ನನ್ನನ್ನು ವಿಕ್ಟೋರಿಯಾ ಹಾಯ-ಸ್ಕೂಲಿಗೆಳೆಯಿತು. ಆ ಸಾಲೆಯಲ್ಲಿ ನನ್ನನ್ನು ಸುತ್ತುಮುತ್ತಿದ ಚಿದಂಬರ, ಬ್ಯಾಳಿ, ಶಾಂತಗಿರಿ, ಬಾಗಲವಾಡಿ, ಕರಮರಕರ, ತಿವಾರಿ, ಅಭ್ಯಂಕರ, ನರೆಗಲ್ಲ, ಕಲ್ಲೂರ, ಚುಳಕಿ, ಜೋಶಿ, ಶಾಸ್ತ್ರಿ, ಕುಲಕರಣಿ, ಮೊದಲಾದವರ ಬಾಲ್ಯಸ್ನೇಹವು ಕಾವ್ಯದ ಹೃದಯವನ್ನು ಗೆಳೆತನದ ಮೂರ್ತಿಯಲ್ಲಿ ಕಾಣಬೇಕು ಎಂಬ ಹಂಬಲಕ್ಕೆ ಪುಟಗೊಟ್ಟವು. ಬಾಲ್ಯದಲ್ಲಿಯ ಸ್ನೇಹಿತರಾಗಿ ಸಾಗಿ ಬಂದ ಖಾನೋಲಕರ, ಭಾತಖಂಡೇ, ಖಾಡಿಲಕರ, ಜಮಖಂಡಿ,

ಅವರಂತೆಯೇ ಬುರ್ಲಿ, ಮಳಿಯೇ, ಶಂ. ಬಾ. ಜೋಶಿ, ಬೆಟಗೇರಿ, ಸಾಲಿ, ಮೊದಲಾದ ಸುಮ-ಸಮಾರು ಸಮವಯಸ್ಕರಾದ ನೂತನ ಮಿತ್ರರ ಆವರಣ ದಿಂದ ಗೆಳೆತನದ ಕ್ಷೇತ್ರವು ನಾಡಿನಾಕಾರವನ್ನು ತಾಳುವಂತೆ ತೋರಿತು. ರಾಷ್ಟ್ರೀಯ ಶಾಲೆಯ ವಾತಾವರಣದಲ್ಲಿ ನಾಡಿನ ಪ್ರತಿಮೆಗೆ ರಾಷ್ಟ್ರೀಯತೆ ಪ್ರಭಾವಳಿ ಸೇರಿತು. ಮನೆಯಲ್ಲಿ ನನಗೆ ತಾಯಿ ಹೇಳುತ್ತಿದ್ದ ಅಭಂಗ-ದಾಸರ ಪದಗಳು, ಊರಲ್ಲಿ ವರ್ಷತುಂಬ ಕೇಳುತ್ತಿದ್ದ ಲಾವಣಿ-ಅನುಭವ ಪದಗಳು, ಮಧ್ವಾಚಾರ್ಯ ಕಟ್ಟಿಯವರೊಡನೆ ಆಗುತ್ತಿದ್ದ ತತ್ತ್ವಚರ್ಚೆ ಮತ್ತು ಅನುಭವ ಸಲ್ಲಾಪ ಇವುಗಳ ಮುಪ್ಪುರಿ ನನ್ನ ಕಾವ್ಯದಲ್ಲಿ ಕುಸುರು ಹುಟ್ಟಿಸಿತು. ಸಿದ್ದವ್ವನಹಳ್ಳಿ ಕೃಷ್ಣಶರ್ಮ, ಬೆಳಗಾಂವಿ ರಾಮಚಂದ್ರರಾಯ, ಹಲಸಂಗಿಯ ಚೆನ್ನಮಲ್ಲಪ್ಪ, ಕೊಣ್ಣೂರ ಹನುಮಂತರಾಯರು, ಮನೋಹರರಾವ ದೇಶ-ಪಾಂಡೆ ಮತ್ತು ಬ್ರೇದ್ರೆ ಲಕ್ಷ್ಮಣರಾಯರು ಇವರೊಡನೆ ವಿವಿಧವಾಗಿ ಕೂಡಿ ಕೊಂಡದ್ದರಿಂದ ನಮ್ಮ ನಾಡಹಬ್ಬದ ಹಂದರ ದೃಢವಾಗಿ ಕಂಗೊಳಿಸಲಾರಂ-ಭಿಸಿತು. ವಾಗ್ಭೂಷಣ, ಜಯಕರ್ನಾಟಕ, ಸ್ವಧರ್ಮಗಳು ನಾಡಿನ ಜೀವನ ವನ್ನು ಹಬ್ಬವನ್ನಾಗಿ ಮಾರ್ಪಡಿಸಿಕೊಳ್ಳುವ ಯೋಗದಲ್ಲಿ ಮೆಟ್ಟುಗಳಾದವು ಅನೇಕ ಹಿರಿ-ಕಿರಿಯರೊಡನೆ ನನ್ನ ಜೀವ ಸೇರಿಕೊಂಡಿತು. ಗೆಯರ ಗುಂಪು ಒಂದು ಸ್ವಾಭಾವಿಕ ಬೆಳವಣಿಗೆಯಲ್ಲಿತ್ತು. ಅದು ಹೊರಗಣ್ಣಿಗೆ ಗುಂಪಾಗಿಯೂ ಒಳಗಣ್ಣಿಗೆ ಮೂರ್ತಿಶಿಲ್ಪ ಶಾಲೆಯಾಗಿಯೂ ರೂಪುಗೊಳ್ಳುತ್ತಿತ್ತು. ಗೋಕಾಕ, ಮುಗಳಿ, ಮಕ್ತಾಲಿ, ಆಕ್ಕಿ, ಪದ್ಮರಾಜ, ಧೂಲಾ, ರೇವಪ್ಪ, ಶಾಸ್ತ್ರಿ ಸಹೋದರರು, ಲಿಂಗಣ್ಣ, ಅಡ್ಡಣಗಿ, ರುದ್ರಾಪುರದ ದೇಸಾಯಿ ಮೊದಲಾದವರ ವಿವಿಧ ಎಳೆಗಳು ಈ ನೇಯ್ಗೆಯ ಪಟದಲ್ಲಿ ಹಾಸು-ಹೊಕ್ಕಾಗಿ ಬೆಳೆದವು. ಗೆಳೆಯರು ನಾಡಹಬ್ಬ, ಕವಿಪುಣ್ಯತಿಥಿಗಳು, ರಾಷ್ಟ್ರೀಯ ಪುರುಷರ ಪುಣ್ಯದಿನ ಇವುಗಳನ್ನು ಪ್ರಾರಂಭಿಸಿದರು ಎನ್ನುವದಕ್ಕಿಂತ ಅವುಗಳ ಪ್ರಾರಂಭಕ್ಕೆ ಕಾರಣವಾದ ಕೈಯೇ ಗೆಳೆಯರನ್ನು ನೂರುದಿಕ್ಕಿಗೆ ದೂಡುತ್ತಿತ್ತು. ಈ ಕಾಲದಲ್ಲಿ ಎಳೆ ಗೆಳೆಯರು ಕೆಲವರು ಶಾಂತಿನಿಕೇತನದಲ್ಲಿ ವಿದ್ಯೆಗಳಿಸಿ ಕೊಂಡು ಬಂದರು. ಹೊಸ ಗೆಳೆಯರನ್ನೂ ತಂದರು. 'ಸ್ಟ್ಯಾಂಡರ್ಡ ಬೆರರ'ದ ವಾಚನದಿಂದ ಮತ್ತೊಂದು ಗೆಳೆಯರ ತಂಡ ಆಧ್ಯಾತ್ಮಿಕ ಒಲವನ್ನು ಹುರಿ-ಗೊಳಿಸುತ್ತಿತ್ತು. ರಾಷ್ಟ್ರೀಯ ಚಳವಳಿಯಿಂದಲೂ, ಗಾಂಧೀ ತತ್ತ್ವದಿಂದಲೂ ಹುರಿಗೊಂಡ ಇನ್ನೊಂದು ಮಿತ್ರಸಮೂಹ ಜೀವನ ಪ್ರಯೋಗಗಳನ್ನು

ನಡೆಸಿತ್ತು. ಗೆಳೆಯರೊಡನೆ ಮಿತ್ರಭಾವದಿಂದ ನಡೆಯುವ ಮತ್ತೆ ಬೇರೆ ಗೆಳೆಯರಿದ್ದರು. ಕಾಲೇಜು-ವಿದ್ಯಾಲಯಗಳ ಸ್ವಾಭಾವಿಕವಾದ ಸಾಹಿತ್ಯ-ಸಂಸ್ಕೃತಿ ಪ್ರೇಮವು ಹೊಸ ಉತ್ಸಾಹದಲ್ಲಿ ಹೊಸ ರೂಪದಲ್ಲಿ ತೆರೆದ ಧಾರವಾಡ ನಾಡಿನ ಪ್ರಕೃತಿ ಸೌಂದರ್ಯವೂ ಜನಜೀವನವೂ ಈ ಜೀವನದಲ್ಲಿ ಹೊಸ ಬಣ್ಣವನ್ನು ತಂದಿತು. ಒಂದು ಮಹಾವಸ್ತ್ರದ ಎಳೆಯನ್ನು ಎಣಿಸಿ ಹೇಳಬಹುದು, ಜೀವನದ ಎಳೆಗಳನ್ನು ಎಷ್ಟೆಂದು ಹೇಳಬೇಕು ? ೧೯೨೪ ರೊಳಗಾಗಿ ಮಾತೃವಿರಹ, ಭ್ರಾತೃವಿರಹ, ಪುತ್ರವಿರಹ, ದೇಶತ್ಯಾಗ, ವೃತ್ತಿಚ್ಛೇದ, ಆದರ್ಶಗಳ ಸತ್ವಪರೀಕ್ಷೆ-ತ್ಯಾಗ-ಭೋಗ-ಯೋಗ ಎಲ್ಲದರ ಕಷಾಯವನ್ನು ಕುಡಿಸಿತು ೧೯೩೦ ರ ವರೆಗೆ ನಾಡಿನ ನಾಡಿನಾಡಿಯನ್ನು ನಾವು ಹೊಕ್ಕೆವು. ಆದೂ ನಮ್ಮ ನಾಡಿನಾಡಿಯನ್ನೂ ಹೊಕ್ಕಿತು. ಜಯಕರ್ನಾಟಕದ ಮೂರು ವರೆ ಗಳಿಗೆಯ ಆಟವು ದೀಪದಂತೆ ಭಗ್ಗನೆ ಹೊತ್ತಿ ಆರಿ ಬೇರೆ ಆಟಕ್ಕೆ ಬಯಲು ಮಾಡಿತು. ೧೯೪೦ ರ ವರೆಗಿನ ಕಾಲ ಮನದ ವನವಾಸದಲ್ಲಿ ನಿರ್ವ್ಯಾಜ ಪ್ರೇಮದ ಆವಿಷ್ಕಾರವನ್ನು ತೋರಿತು. ಇತ್ತೀಚಿನ ಆರು ವರ್ಷಗಳಲ್ಲಿ ಮತ್ತೆ ಸುಖದುಃಖ ತೆಕ್ಕೆಮುಕ್ಕ ಬಿದ್ದು ಬಂದಿವೆ. ೨೫ ವರ್ಷಗಳ ಚಿಂತನದ ಚಿತೆಯಲ್ಲಿ ಸತಿಯಂತೆ ಕೈಯೆತ್ತಿ ನಿಂತ ಶ್ರದ್ಧೆಯು ಶಂಕರಗೌಡರು, ಮಧುರಚೆನ್ನ, ಪಂಡಿತ, ಮೊದಲಾದವರ ಸ್ನೇಹದ ಸಹಾಯದಿಂದ ಒಂದು ನಿಷ್ಠೆಯ ಮಟ್ಟಕ್ಕೆ ಬಂದಿದೆ. ಈ ಜೀವನವು ನನ್ನ ಸಾಹಿತ್ಯ ಕಾವ್ಯಗಳಿಗೆ ಹಿನ್ನಲೆಯಾಗಿ ಇದೆ ಎಂದು ಹೇಳಿದರೆ ಆದರ ಆಗವ್ಯತೆಗೆ ಅರ್ಥ ಅರ್ಥ-ವಾದೀತು.

ನಾನು ಎಂದರೆ ಏನು ಎಂಬುದಕ್ಕೆ ಯಾವಾಗಲೂ ಅರ್ಥಮಾಡಿ ಕೊಳ್ಳುತ್ತೇನೆ. ಬೇಂದ್ರೆ ಎಂಬ ನಾನು ಎಲ್ಲ ವ್ಯವಹಾರಕ್ಕೂ ನಿಶ್ಚಯವಾದ ನಾನು. ಆದರೆ ಒಂದು ತಾಯಿ ಜೀವದಿಂದ ವರ್ಧಿತವಾದ, ಉದ್ದೀಪಿತ-ವಾದ ಸ್ವಭಾವವು, ಕನ್ನಡ ಮಾತಿನ ಮೂಲಕ ಆ ನಾಡಿನ, ನುಡಿಯ, ಜನದ ಅರ್ಥವನ್ನು ಮಾಡಿಕೊಂಡು ಇನ್ನೊಂದು ವ್ಯಾಪಕ ಭಾವನನ್ನು ಪಡೆದು, ಕನ್ನಡನಾಡು ಭರತಭೂಮಿಯ ಒಂದು ಜೀವಂತವಾದ ಅಂಗ ಎಂದು ಅನುಭವವಾದಾಗ ಮಹಾಭಾರತದಂತೆ ಒಂದು ವೈಶಾಲ್ಯವನ್ನು ಪಡೆದು ಸಂಸ್ಕೃತಿಗಳ ಸಂಗಮದಿಂದ ಅವುಗಳ ಉಗಮದತ್ತ ಹೊರಟಾಗ ಭಾರತ ಭಾವವು 'ವಸುಧೈವ ಕುಟುಂಬಿಕ' ಭಾವದಲ್ಲಿ ಪರಿಣತವಾಗದಿದ್ದರೆ ತಾನು

ತಾನಲ್ಲ, ಎಂಬ ಅರಿವು ಮೂಡಿ ಇಂಥ ಈ ವೈಶಾಲ್ಯವು ಅಗಣಿತ ಸೂರ್ಯ-ರಿಂದ ತುಂಬಿದ ಈ ವಿಶ್ವಸಂಸ್ಥೆಯಲ್ಲಿ ಯಾವ ಗಿಡದ ತೊಪ್ಪಲು ? ಎಂಬ ಅನುಭಾವವೂ ಅಂತೆಯೇ ಒಂದು ಮಹತ್ವದ ಭಾವವೂ ಸ್ಪಂದಿಸಿದಾಗ ನಾನೆಂದರೆ ವಿರಾಟ್‌ಪುರುಷನ ಒಂದು ನರ-ನಾಡಿ ಎಂಬ ಭಾವ ಸಹಜ-ವಾಗುವದು. ಈ ಸಹಜಭಾವವು ಬೇಂದ್ರೆಯ ಸ್ವಾಭಾವಿಕಭಾವಗಳಲ್ಲಿ ಕೂಡಿ ಹರ್ಷ-ಖೇದಗಳ ಅಲ್ಲೋಲ-ಕಲ್ಲೋಲಗಳನ್ನೆಬ್ಬಿಸುವುದು. ನಾನು ಚಿಕ್ಕ ನಾಟಕಗಳನ್ನೂ, ಸಣ್ಣಕತೆಗಳನ್ನೂ ಪ್ರಕಟಿಸಿದ್ದರೂ ನನ್ನ ವೈಚಾರಿಕ ನಿಬಂಧ, ವಿಮರ್ಶಕ ಪ್ರಬಂಧ, ಮತ್ತು ಕವನಗಳ ಸ್ವಚ್ಛಂದ ಇವುಗಳಲ್ಲಿ ಹೆಚ್ಚು ಬೆಳಕು ಕಂಡಿದ್ದೇನೆ. ನನ್ನ ಪ್ರಬಂಧ-ನಿಬಂಧಗಳಿಗಿಂತ ನನ್ನ ಮಾತು-ಉಪನ್ಯಾಸ ಗಳು, ನನ್ನ ಬರೆದ ಕಾವ್ಯಕ್ಕಿಂತ ನಾನು ಹೇಳಿದ ಹಾಡುಗಳು ಹೃದಯಂಗಮ-ವಾಗುವವೆಂದು ಅನೇಕ ಗೆಳೆಯರೂ ಇತರರೂ ತಿಳಿಸಿದ್ದಾರೆ. ಶ್ರವಣಕ್ಕಿಂತ ವಾಚನದಿಂದ ಅರ್ಥಮಾಡಿಕೊಳ್ಳುವದಕ್ಕೆ ಜನರಲ್ಲಿ ವಿದ್ಯಾಸಂಸ್ಕಾರವು ಹೆಚ್ಚು ಇರಬೇಕಾಗುವದೆಂಬದು ಸುಳ್ಳಲ್ಲ. ನನ್ನಂತೆಯೇ ವಿಶಾಲ ಜೀವದೊಡನೆ ತನ್ಮಯರಾಗುವ ಪ್ರಕೃತಿಯುಳ್ಳವರಿಗೆ ನನ್ನ ಕಾವ್ಯಸಾಹಿತ್ಯವು ಇನ್ನು ಕೆಲವು ವರ್ಷಗಳಲ್ಲಿ ಮನೆಮಾತಿನಂತೆ ಸ್ವಾಭಾವಿಕವೆನಿಸೀತು ಎಂದು ತೋರುತ್ತದೆ.

ಯಾವ ಸೃಷ್ಟಿಯೂ ಹೃದಯಸ್ಥವಾಗಿ ನಿಲ್ಲಲು ಅದರಲ್ಲಿ ಆಕರ್ಷಕತೆ ಬೇಕು. ಆಕರ್ಷಣವಾದ ಮೇಲೂ ಅದು ಬಹಳ ದಿನ ತಡೆದು ಬಾಳಲು ಅದರಲ್ಲಿ ಅಂಥ ಮಹಾಸತ್ವ ಬೇಕು. ಅದೂ ನಿರಂತರವಾಗಿ ರಮ್ಯವಾಗ-ಬೇಕಾದರೆ ಆ ಸತ್ವದಲ್ಲಿ ವಿವಿಧ ಮುಖವಾದ ಸೌಂದರ್ಯಬೇಕು. ಅಂತು, ನಿಜವಾದ ಕಾವ್ಯವು ಆಕರ್ಷಕತೆಯಿಂದ ಹೃದಯವನ್ನು ಸೇರಿ, ತನ್ನ ಸತ್ವ ದಿಂದ ಬಾಳಿ, ತನ್ನ ಸೌಂದರ್ಯದಿಂದ ಬೆಳೆದು, ದೃಶ್ಯವಾಗಿ ಬಂದು, ದರ್ಶನ ವಾಗಿ ಬೆಳೆದು, ದೃಷ್ಟಿಯಲ್ಲಿ ಲೀನವಾಗಿ ಕವಿಯಂತೆ ರಸಿಕನನ್ನೂ ಒಬ್ಬ ದರ್ಶನಕಾರನನ್ನಾಗಿ ಮಾಡದಿದ್ದರೆ ಆ ಕಾವ್ಯಕ್ಕೆ ಸಂಪೂರ್ಣ ಸಾಫಲ್ಯವಿಲ್ಲ ಎಂದು ನಾನು ನಂಬಿ ನಡೆದಿದ್ದೇನೆ. ಹಾಡು, ಸಖೀಗೀತ, ಕರುಳಿನ ವಚನ,-ಗೆ, ಮೊದಲಾದ ಕವನಗಳ ವ್ಯಕ್ತಿಯಿಂದ ಸಮಸ್ತದಲ್ಲಿ ಲೀನವಾಗಲು ಹವಣಿಸಿದರೆ ಲೋಕಸಾಮಾನ್ಯವಾದ ಜೀವನವು ಸಹಾನುಭೂತಿಯ ದ್ವಾರದಿಂದ ಸ್ವಾನು-ಭೂತಿಯನ್ನೇ ಹಿಗ್ಗಿಸುವದು. ಸ್ವಾನುಭೂತಿ-ಸಹಾನುಭೂತಿಗಳು ಕಾವ್ಯ-ಜೀವನದ ಶ್ವಾಸೋಚ್ಛ್ವಸಗಳು. ಮಹಾಪ್ರಾಣದ ಛಂದ ಅದರಲ್ಲಿದೆ.

ಅವು ಪರಸ್ಪರರ ಸ್ಥಾಯೀ ಸಂಚಾರಿಗಳು. ನನ್ನ ಜಾನಪದ ಗೀತೆಗಳಲ್ಲಿ ನೆಲದೆರೆಯ ತಾಯಿಬೇರಿನ ಒಂದು ಸಂಚಲನವನ್ನು ಅನುಭವಿಸಿದರೆ ನನ್ನ ಅಷ್ಟಷಟ್ಪದಿ, ಸೀಸಪದ್ಯಗಳಲ್ಲಿಯೂ, ತಜ್ಜಾತಿಯ ಇತರ ಪದ್ಯಗಳಲ್ಲಿಯೂ ಊರ್ಧ್ವಮೂಲವಾದ ಅಧಃಶಾಖೆಯುಳ್ಳ ಯಾವುದೋ ಪ್ರಕೃತಿ ತನ್ನ ಸೂತ್ರ-ದಿಂದ ನನ್ನ ಎದೆಯನ್ನು ಅಲ್ಲಾಡಿಸುವದು ಎಂಬಂತೆ ತೋರುತ್ತದೆ. ಒಂದು ಬಗೆಯಲ್ಲಿ ನನಗೆ ಸಾಹಿತ್ಯವು ಶಾಸ್ತ್ರವಾಗಿಯೂ, ಧರ್ಮವಾಗಿಯೂ, ಯೋಗ-ವಾಗಿಯೂ— ಜೀವನವೇ ಆಗಿಯೇ ಪರಿಣಮಿಸಿದೆ ಮೂರ್ತಿ-ಕಾಮುಕಸ್ಫೂರ್ತಿಗಳು ಎರಡು ಪರಸ್ಪರ ವಿರುದ್ಧ ಜಾತಿಗೆ ಸೇರಿದ್ದರೂ ತಮ್ಮ ಸಂಕೇತ-ಸಾಧಾರಣತೆಯಿಂದ ವಿಶ್ವಕವನಗಳಾಗುತ್ತವೆ ನನ್ನ ಹೃದಯದಲ್ಲಿ. ಕುಣಿ-ಯೋಣು ಬಾರ, ಹಕ್ಕಿ ಹಾರುತಿದೆ, ಗಂಗಾವತರಣ, ಭಾವಗೀತ, ಪಾತರಗಿತ್ತಿ ಪಕ್ರ, ಬೆಳಕು ಮೊದಲಾದವುಗಳು ಹೇಳಿದ ಸಲಕ್ಕೊಮ್ಮೆ, ಜನರಿಗೆ ಕೊಡುವ ಆನಂದವನ್ನೇ ನನಗೂ ಕೊಡುತ್ತವೆ.

ವಿಮರ್ಶಕರೆಂಬವರ ಟೀಕೆಗಿಂತ ರಸಿಕರ ಮಿಮರ್ಶೆ ಯಾವ ಕವಿ-ಯಂತೆಯೂ ನನಗೂ ಪ್ರೇರಣೆ–ಉದ್ದೀಪನಗಳನ್ನು ಕೊಟ್ಟಿವೆ ಶಾಸ್ತ್ರಿ, ವೀ. ಸೀ., ತೀ. ನಂ, ಗೋಕಾಕರಂತೆಯೇ ಪಾಟೀಲ ಪುಟ್ಟಪ್ಪ, ಈಶ್ವರನ್, ಮಿರ್ಜಿ ಅಣ್ಣಾರಾವ, ಲಿಂಗಣ್ಣ, ಜೋಶಿ- ಗಲಗಲಿ, ಶ್ರೀಧರ ಇವರ ಲೇಖನಗಳೂ ಒಂದು ಧೈರ್ಯವನ್ನು ಕೊಟ್ಟಿವೆ. ವಿಮರ್ಶೆಯಲ್ಲಿ ನನಗೂ ಒಂದು ಸ್ವಾಭಾವಿಕ ಪ್ರೀತಿಯಿರುವುದರಿಂದ ಕೆಲವರ ಟೀಕೆ–ಪ್ರತಿಟೀಕೆಯೂ ನನಗೆ ಎಚ್ಚರ ಕೊಟ್ಟಿದೆ. ಪದಾರ್ಥಕ್ಕೆ ಉಚಿತವಾದ ಹೆಸರಿಡುವದರಲ್ಲಿಯೇ ಕಾವ್ಯದ ಜನ್ಮವಿದೆ ಆಗ ವಿಷಯವು ಬಹಿರ್ಗತವಾಗಿದ್ದರೂ ಸರಿಯೇ. ಪುಷ್ಪ— ಫ್ಲೋವರ— ಫೂಲ— ಅರಳು ಇವುಗಳಿಗಿಂತ “ಹೂ” ಎಂಬ ನಾಮದ ನಯ-ನಾಜೂಕು ಪದಾರ್ಥಕ್ಕೆ ಸರಿತೂಕ ಹಚ್ಚುತ್ತದೆ ವಸ್ತುವನ್ನು ಕಂಡ ಕಣ್ಣು ಹೃದಯದಲ್ಲಿ ಪಡೆದ ಆನಂದವನ್ನು ನಾಲಿಗೆಯಿಂದ ಈ ನುಡಿಯನ್ನು ನುಡಿಸಿ ಹಿಗ್ಗನ್ನು ಪಡೆಯುವದರಲ್ಲಿಯೇ ಅದನ್ನು ಪಡೆಯುತ್ತದೆ ಸತ್ವಾಧಿಷ್ಠಿತವಲ್ಲದ ಕ್ರಿಯೆಯಿಲ್ಲ; ಭಾವಪರಿಣತಿ ಹೊಂದದ ಸತ್ವವಿಲ್ಲ. ಸೃಷ್ಟಿಯಲ್ಲಿ ಈ ಸತ್ವ ಭಾವ, ಕ್ರಿಯೆಗಳ ಆಟವು ವಾಚ್ಯದಲ್ಲಿ ವಾಕ್ಯವಾದರೆ ಧ್ವನಿಯಲ್ಲಿ ಕಾವ್ಯ-ವಾಗುತ್ತದೆ. ಅಕ್ಕನಿಗೆ ಅಕ್ಕರತೆಯಿಂದರೆ, ತಂಗಿಗೆ ಬಂಗಾರ ಎಂದು ಕರೆದರೆ, ಮಗಳಿಗೆ ಎದೆಮುಗುಳೆ ಎಂದು ಭಾವಿಸಿದರೆ ಆ ಕ್ರಿಯೆಯಲ್ಲಿ, ಆ ಭಾವದಲ್ಲಿ

ಒಂದು ಕಾವ್ಯದ ಪಾಕ ನಡೆದದ್ದು ಅನುಭವಕ್ಕೆ ಬರುವದು. ಹೀಗೆ ಎಲ್ಲರ ಸತ್ವವು ಸಕಲ ಸತ್ವಗಳೊಡನೆ ಒಂದುಕ್ರಿಯಾ ಪರಂಪರೆಯಿಂದ ಭಾವಪರಿಣತಿಯನ್ನೂ, ಪರಿಪುಷ್ಟಿಯನ್ನೂ ಪಡೆಯುತ್ತದೆ. ಈ ಭಾವಪರಿಪುಷ್ಟಿಯು ನಮ್ಮ ದೈಹಿಕ, ಪ್ರಾಣಿಕ, ಮಾನಸಿಕ ವ್ಯಾಪಾರಗಳನ್ನೆಲ್ಲ ಹೀಗೆ ದಿವ್ಯಭಾವಗಳಲ್ಲಿ ಪರಿಣತಿಗೊಳಿಸಬಹುದಾದರೆ ಆ ಭಾವದ ಭಾಷೆಯು ಕಾವ್ಯದ ಭಾಷೆಯಾಗಿ ಮಾತ್ರ ರೂಪವಾಗುವದು. ಇಂಥ ಪರಿಣತಿ ತನ್ನ ಭಾವಕ್ಕೆ ಬರಬೇಕು, ಎಂಬ ಯಾವದೋ ಉತ್ಸಾಹವು ನನ್ನ ಕವನಗಳಿಗೆ ಪ್ರೇರಕವಾಗಿದೆ. ಈ ಅರ್ಥದಲ್ಲಿ ನೋಡಿದಾಗ ನನ್ನ ಸಾಹಿತ್ಯದಲ್ಲಿ ಇನ್ನೂ ನಾನು ಮೌಲಿಕವಾದ ಸಾರ್ಥಕತೆಯನ್ನು ಕಂಡಿಲ್ಲ ಎಂಬ ಭಾವ ನನ್ನನ್ನು ಪ್ರಚೋದಿಸುತ್ತಲಿದೆ. ಕಾಶೀಯಾತ್ರೆಯತ್ತ ಹೊರಟ ಒಂದೊಂದು ಹೆಜ್ಜೆಯೂ ಅದೇ ಹಾದಿಯಲ್ಲಿದ್ದರೂ ಹೆಜ್ಜೆಗೊಂದು ಕಾಶಿಯಿಲ್ಲ. ಆದರೂ ಹೆಜ್ಜೆಗೊಂದು ಕಾಶಿಯಿದ್ದಂತೆ ನಮ್ಮ ಜೀವನ-ನೃತ್ಯ ಸಾಗದಿದ್ದರೆ ಯಾವ ಕಾಶಿಯೂ ನಮಗೆ ಭವ-ನಾಶಿಯಾಗಲಾರದು. ಈ ಆತ್ಮಶೋಧನೆಯನ್ನು ನಾನು ಮಾಡಿಕೊಳ್ಳುತ್ತಿದ್ದೇನೆ. ಅದರಲ್ಲಿ ಕಂಡುದನ್ನು ಹೇಳಲು ಪ್ರಯತ್ನಿಸುತ್ತಿದ್ದೇನೆ; ಹಾಡಲು ಪ್ರವರ್ತಿಸುತ್ತಿದ್ದೇನೆ. ಅದರ ಕಥೆ ನಾಟಕವನ್ನೂ ಹೇಳುವ ಆಶೆಯಿದೆ. ಅದು ಹೇಗೆ ಫಲಿಸುವದೋ ನೋಡಬೇಕು.

ನಾನು ಕವನ ಪ್ರಾರಂಭಿಸಿದಾಗ ಹೊಸಕನ್ನಡ ಭಾಷೆಯ ಕಾವ್ಯರೂಪುಗೊಂಡಿರಲಿಲ್ಲ. ಅದರ ಧಾಟಿ ತಡವರಿಸುತ್ತಿತ್ತು. ಇಂದು ಶ್ರೀಧರ, ಅಡಿಗ, ದೀಕ್ಷಿತ, ಈಶ್ವರನ್, ಪುಟ್ಟಪ್ಪ, ಕರ್ಕಿ, ಅರ್ಚಕ, ಭಟ್ಟ, ಎಚ್. ಬಿ. ಕುಲಕರ್ಣಿ, ನರಸಿಂಹಮೂರ್ತಿ-ಇವರೇ ಮೊದಲಾದವರ ಕವನದ ಧಾಟಿ ಹುಟ್ಟುತ್ತಲೇ ಪ್ರಾಯದ ಲಕ್ಷಣವನ್ನು ತೋರಿಸುತ್ತದೆ. ರಸಿಕತೆಯ ಪ್ರಾಚುರ್ಯದಿಂದ ನವಕಾವ್ಯಶೈಲಿಯ ಪರಿಪಾಕದಿಂದ ಸಾರ್ಥಕತೆಯನ್ನು ಅಳೆಯಬಹುದಾದರೆ ನನ್ನ ಕಾಲ ಒಂದು ಹೆಜ್ಜೆ ಮುಂದೆ ಇಟ್ಟದೆ ಎಂದು ನಾನು ನಿಜವಾಗಿ ನಂಬಿದ್ದೇನೆ.

ತ್ರಿದೋಷಗಳ ವೈಷಮ್ಯದಿಂದ ಆರೋಗ್ಯ ಕೆಡುವಂತೆ, ತ್ರಿಗುಣಗಳ ವೈಷಮ್ಯದಿಂದ ಶಾಂತಿಗೆ ನೆಲೆಯಿಲ್ಲದಾಗುತ್ತದೆ. ಹಾಗೆಯೇ ಶಕ್ತಿಗಳ ವೈಷಮ್ಯದಿಂದ ಕರ್ತೃತ್ವವು ನಷ್ಟವಾಗಿ ವಿಶ್ವಜೀವನದಂತೆ ವ್ಯಕ್ತಿಜೀವನ

ದಲ್ಲಿಯೂ ಕಾರ್ಯ-ಕಾರಣಭಾವವು ತಿಳಿಯುದಾಗುತ್ತದೆ. ಹೊಸ ಸೃಷ್ಟಿಗೆ ಹೊಸ ಕ್ರಿಯೆ ಬೇಕು. ಹೊಸ ಕ್ರಿಯೆಯ ಬೆಂಬಲಕ್ಕೆ ಶುದ್ಧಿ ಸಿದ್ಧವಾದ ಪರಿಣತಭಾವವೂ ಸಾರ್ವಭೌಮಿಕ ಪ್ರಜ್ಞೆಯುಳ್ಳ ಜ್ಞಾನವೂ ಬೇಕು. ಕರ್ನಾಟಕವು ಹೊಸ ಹೆಜ್ಜೆಯನ್ನಿಡುವಾಗ ತನ್ನ ರಾಜಕೀಯ ಮತ್ತು ಕೌಟುಂಬಿಕ ಅನುಭೂತಿಯೊಡನೆ ತನ್ನ ಪಂಚ ಮತಾಚಾರ್ಯರು ಉಸುರಿದ ಅನುಭವವನ್ನೂ ಅಳವಡಿಸಿಕೊಳ್ಳಬೇಕು. ಹೀಗೆ ಮಾಡುವಾಗ ಸಂಚಾರಿ ಭಾವದಂತೆ ಅದರಲ್ಲಿ ಸೇರಿ ನೆಲೆಯಾಗಿರುವ ಕ್ರೈಸ್ತ, ಮುಹಮ್ಮದೀಯ ರಂತೆಯೇ ಅಭಿನವ ಲೋಕಾಯತಿಕ ದೃಷ್ಟಿಯನ್ನೂ ಅವಿರೋಧವಾಗದಂತೆ ಒಳಗೊಳ್ಳಬೇಕು. ಈ ಜ್ಞಾನವು ನಮ್ಮ ಮನವನ್ನು ಹೊಸಯಿಸಿದ್ದಾದರೆ ಅದಕ್ಕೆ ಸರಿಯಾದ ಪರಿಪಾಕವು ನಮ್ಮ ಭಾವದಲ್ಲಿಯೂ ಬೇಕು. ಸಮರ್ಥವಾದ ಸಜ್ಜನಿಕೆಯು ಸೌಂದರ್ಯವನ್ನು ಕಾಣುವ ಆನಂದವು ಸತ್ಯವನ್ನೇ ಎತ್ತಿ ಹಿಡಿಯುವ ಪ್ರೀತಿಯು ನಮ್ಮಪ್ರಾಣದಲ್ಲಿ ಹೊಸ ಚೈತನ್ಯವನ್ನು ತುಂಬಬೇಕು. ಆಗ ನಮ್ಮ ಸಾಮಾಜಿಕ ಕ್ರಿಯೆಯ ರೂಪವೇ ಬದಲಾಗಿ ಜೀವನದಲ್ಲಿ ಒಂದು ನವಜನ್ಮದ ಆನಂದವು ಸುಳಿಯುವುದು. ಇಂಥ ಶಕ್ತಿಸಾಮರಸ್ಯದ ಯೋಗ ವನ್ನು ಮೈಗೊಂಡ ಮೂರ್ತಿಯು ಗುರುಸ್ಥಾನದಲ್ಲಿ ನಿಂತು ಮುಂದಿನ ಜೀವನ ವನ್ನೂ ಜೀವಿಗಳನ್ನೂ ದಿಗ್ದರ್ಶಿಸದಿದ್ದರೆ ನಮ್ಮ ಜ್ಞಾನದ ವಿವೇಕವೆಲ್ಲ ವಿವಾದ ವಾಗಿ ಪರಿಣಮಿಸೀತು. ಭಾವದ ಆವೇಶ ದೈವಕ್ಕೆಳಸೀತು. ಕ್ರಿಯೆ ನಿಷ್ಕ್ರಿಯತೆಗಿಂತ ಭಯಂಕರವಾದೀತು. ಆದರೆ ಈ ಸಂಶಯದ ಸಂಭವ ಕಡಿಮೆಯದೆ. ಶ್ರೀ ಅರವಿಂದರ ಯೋಗಸಿದ್ಧಿಯಲ್ಲಿಯೂ, ಶ್ರೀ ಮಹಾತಾಯಿ ಯವರ ಪ್ರವರ್ತನೆಯಲ್ಲಿಯೂ ಜೀವನವೆಲ್ಲ ಯೋಗಶಾಲೆಯಾಗಲಿದೆ. ಮರಣ ಒಂದು ಶುದ್ಧಿಯಾಗಿ ಜೀವನ ಒಂದು ಸಿದ್ಧಿಯಾಗಲಿದೆ. ಆ ಹಾದಿಯಲ್ಲಿ ಹೆಜ್ಜೆಯಿಡಬೇಕಾಗಿದೆ ಸಾಹಿತ್ಯ ತನ್ನ ಸಾರ್ಥಕತೆಗೆ. ಯಾವಾಗಲೂ ಸಾಹಿತ್ಯವು ಜೀವನದ ಪದಾರ್ಥ.

ದ. ರಾ. ಬೇಂದ್ರೆ

# ಎರಡಿಲ್ಲದ ಬಾಳಿ ಪೂರ್ಣ 'ಕೃತಿ' ++ ++ ++

ವರಹಾಡವೇ ಪ್ರಥಮ ಮಹಾರಾಷ್ಟ್ರವೆಂದು ಡಾ. ಭಂಡಾರಕರ ಮೊದಲಾದವರು ಬರೆದುದನ್ನು ನಾನು ಓದಿದ್ದೆ. ಕವಿರಾಜ ಮಾರ್ಗದೊಳಗಿನ 'ಕಾವೇರಿಯಿಂದಮಾ ಗೋದಾವರಿವರಂ ಇರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ' ಎಂಬ ಸುಪ್ರಸಿದ್ಧ ಉಲ್ಲೇಖವನ್ನು ಕುರಿತು ವಿಚಾರ ಮಾಡುವಾಗ ನನಗೆ ಆಗಾಗ ಒಂದು ಸಂದೇಹವು ತಲೆದೋರುತ್ತಿತ್ತು : ದಕ್ಷಿಣಾ ಪಥವು ನರ್ಮದೆಯಿಂದ ಆರಂಭವಾಗುತ್ತದೆ. 'ಆರಿಯರು' ಎನಿಸಿಕೊಳ್ಳುವ ಮರ್ಹಾಟರಂತೂ ದಕ್ಷಿಣಾ ಪಥದವರಾಗಿರಲಾರರು. ಹಾಗಾದರೆ, ನರ್ಮದೆಯ ದಕ್ಷಿಣಕ್ಕೆ, ವಿದರ್ಭದೇಶದಲ್ಲಿ ಮಹಾರಾಷ್ಟ್ರವು ಬೇರು ಹಿಡಿಯುವ ಮೊದಲು ಅದು ಯಾರ ನಾಡಾಗಿರಬೇಕು ? ಗೋದೆಯಿಂದ ನರ್ಮದೆಯ ವರೆಗಣ ಈ ಪ್ರದೇಶವೂ ಒಂದು ಕಾಲಕ್ಕೆ—ಎಂದರೆ ಅಲ್ಲಿ ಮರ್ಹಾಟರ ವಸಾಹತು ವ್ಯಾಪಿಸಿ ಕೊಳ್ಳುವ ವರೆಗೂ....ಕರ್ನಾಟಕರದೇ ಆಗಿರುವ ಸಂಭವವಿಲ್ಲವೆ ?

ಈ ದಿಕ್ಕಿನಲ್ಲಿ ನಡಸಿದ ಅಭ್ಯಾಸವೆ ನನ್ನ ಮುಂದಿನ ಲೇಖನದ ಮಹತ್ವದ ಭಾಗವನ್ನು ಆವರಿಸಿಕೊಂಡಿದೆ. 'ಇದನ್ನು ಬರೆಯುವುದರ ಮುಖ್ಯೋದ್ದೇಶವು ಯಾವ ನನ್ನದೊಂದು ಸಿದ್ಧಾಂತ-ಸ್ಥಾಪನೆಯಲ್ಲ; ಕೇವಲ ಸತ್ಯಸಂಶೋಧನೆ.' 'ಸಂಶೋಧಕನೆಂದು ನಾನಿದನ್ನು ಕೈಕೊಂಡವನಲ್ಲ; ಏಕೆಂದರೆ ನನಗೆ ಆ ಅಧಿಕಾರವಿಲ್ಲ. ಅಲ್ಲದೆ ಇತಿಹಾಸ ಸಂಶೋಧನವು ನನ್ನ ಕ್ಷೇತ್ರವೂ ಅಲ್ಲ;' ಎಂದು ಈ ವಿಷಯಕವಾದ ಮೊದಲ ಪ್ರಕಟನೆಯಲ್ಲಿಯೇ ('ಕಣ್ಮರೆಯಾದ ಕನ್ನಡ'ದ ಮುನ್ನುಡಿಯಲ್ಲಿ) ನಾನು ಬರೆದುದುಂಟು. (೧೯೩೩)

ನಾಡಿಗಾಗಿ ಏನಾದರೂ ಮಾಡಬೇಕು; ನಿಜವನರಿತು ಬಾಳಬೇಕು ಎಂಬುದೇ ನನ್ನ ಜೀವನದ ಮೂಲ ಸಂಕಲ್ಪ. ಬಹಳ ಚಿಕ್ಕಂದಿನಲ್ಲಿಯೆ ತಂದೆ

ಯನ್ನು ಕಳೆದುಕೊಂಡು ಅನಾಥನ ದೈನ್ಯಾವಸ್ಥೆಯ ಬವಣೆಗಳನ್ನೆಲ್ಲ ಅನುಭವಿಸುತ್ತ ಅಲೆಯುವುದರಲ್ಲಿಯೆ ವಯಸ್ಸಿನ ೧೫ ವರುಷಗಳು ಕಳೆದುಹೋದುವು. ಬಡತನದ ಬೇಗೆಯಲ್ಲಿ ನನ್ನ ಪೂರ್ವ ವಯಸ್ಸಿನ ಭಾವನೆಗಳೆಲ್ಲ ಕಮರಿ, ಪರಗೃಹವಾಸದ ದಾರುಣಯಾತನೆಯಲ್ಲಿ ನಾನು ಅದೆಷ್ಟೋ ಬಾರಿ, ಸೀತೆಗೆ ಭೂದೇವಿಯು ತನ್ನ ಒಡಲಲ್ಲಿ ಎಡೆಗೊಟ್ಟ ಕತೆಯನ್ನು (ಆಗ ಅದನ್ನು ಶಬ್ದಶಃ ಸತ್ಯವೆಂದು ನಂಬುತ್ತಿದ್ದೆನಾದ್ದರಿಂದ) ನೆನೆನೆನೆದು ಕಣ್ಣೀರು ಮಿಡಿದಿದ್ದೇನೆ. ಆದರೆ ಭೂದೇವಿ ಹಾಗೆ ನನ್ನನ್ನು ತನ್ನಲ್ಲಿ ಸ್ವೀಕರಿಸುತ್ತಿದ್ದಿಲ್ಲವೆಂಬುದಕ್ಕೆ ದುಃಖಿಸಿದ್ದೇನೆ. ಈ ಕಾಲವಲ್ಲಿ ಮನೆಯಲ್ಲಿ ನಾನು ಬೆಪ್ಪ; ಅವರಾಡಿದ ಮಾತುಗಳ ಅರ್ಥವೂ ತಿಳಿಯದಷ್ಟು ನಾನು ಮೊದ್ದನಾಗಿ ಕಂಗೆಟ್ಟು ನಿಂತ ನೆನಪುಗಳಿವೆ. ಆದರೆ ಶಾಲೆಯಲ್ಲಿ ಪ್ರಾಥಮಿಕ ೨ನೆಯ ಇಯತ್ತೆಯಲ್ಲಿ ಇದ್ದಾಗ ಆ ಇಯತ್ತೆಗೆ ಒಬ್ಬ ಅಯ್ಯನವರು ಶಿಕ್ಷಕರಾಗಿದ್ದರು. ಅವರು ನನಗೆ ಮೆಚ್ಚಿ ಮಾತನಾಡಿ, ಬುದ್ಧಿವಂತ ಹುಡುಗರಲ್ಲಿ ಎಣಿಸುತ್ತಿದ್ದರು. ನನ್ನ ಆತ್ಮವಿಶ್ವಾಸವು ಅಂಕುರಿಸಿದುದು ಅದೇ ಮೊದಲು. ಕಮರುತ್ತಿದ್ದ ನನ್ನ ಜೀವಕ್ಕೆ ಮೊದಲ ನವಜೀವನವನ್ನೆರೆದ ಅವರನ್ನು ನನ್ನ ಅಂತರಾಳದಲ್ಲಿ ಈಗಲೂ ಆದರದಿಂದ ನಮಸ್ಕರಿಸುತ್ತಿರುತ್ತೇನೆ. ಮುಂದೆ ಕೆಲ ವರುಷ ಇದೇ ಹಾಡು.

ಮನೆತನದ ಆರ್ಥಿಕ ಪರಿಸ್ಥಿತಿಯು ಅನುಕೂಲವಿಲ್ಲದುದರಿಂದ ವಿದ್ಯಾಲಯದಲ್ಲಿ ಗುರುಮುಖದಿಂದ ಹೆಚ್ಚಿನ ವಿದ್ಯೆಗಳಿಸುವ ಭಾಗ್ಯವು ನನ್ನ ಹಣೆಯ ಬರೆಹದಲ್ಲಿ ಇಲ್ಲವೆಂದು ತಿಳಿದ ಬಳಿಕ, ಪ್ರಾಥಮಿಕ ಶಿಕ್ಷಕರ ಶಿಕ್ಷಣಾಲಯವನ್ನು ಸೇರುವುದರ ಹೊರತು ಬೇರೆ ದಾರಿಯೆ ಇದ್ದಿಲ್ಲ. ಆದರೂ ಲೋಕಮಾನ್ಯ ಟಿಳಕರ ಚರಿತೆಯಿಂದ, ಆಯುಷ್ಯವನ್ನು ದೇಶಕ್ಕಾಗಿ ಮೀಸಲಾಗಿರಿಸುವುದರಲ್ಲಿಯೆ ಜೀವನಸಾರ್ಥಕ್ಯವಿದೆಯೆಂಬ ಒಂದು ಸ್ಫೂರ್ತಿದಾಯಕ ಮಾತು, 'ನನ್ನಂತಹ ಕಿರುಕುಳರು ಬದುಕಿ ಏನು ಪ್ರಯೋಜನ ? ಕೂಳಿಗೆ ಕಾಳರು,' ಎಂಬ ಒಳಗಣ ನೋವಿಗೆ ಶಾಂತಿಯನ್ನು ಕೊಡುತ್ತಲಿತ್ತು. ಟ್ರೇನಿಂಗ ಕಾಲೇಜಿನಲ್ಲಿ, ನನ್ನ ಸಂಗಡಿಗರಲ್ಲಿ ದೇಶಾಭಿಮಾನವನ್ನು ತುಂಬುವುದು ಆಗಿನ ನನ್ನ ಒಂದು ಹುಚ್ಚು. ನಾನು ಆಗ ಈ ಬಗೆಯ ಒಂದು ಭಾವನೆಯ ಮಬ್ಬಿನಲ್ಲಿ ಇಲ್ಲವಾಗಿದ್ದರೆ, ಮತ್ತೆ ಹಿಂದಿನ ಆ 'ಭೂಮಾತೆಯೆ ! ಒಡಲಲ್ಲಿ ಎಡೆಕೊಡು' ಎಂಬ ಒಳಗಿನ ಮಿಡಿತವು ತಲೆಯೆತ್ತಿ ಆತ್ಮಹತ್ಯೆಯು ನನ್ನಿಂದ ಸಂಭವಿಸಬಹುದಾಗಿದ್ದಿತೇನೋ ಎಂದು ಈಗ ಹೆದರಿಕೆಯಾಗುತ್ತದೆ.

ಶ್ರೀ ಅಗರಕರರಂತಹ ತಿರಿದು ತಿನ್ನಬೇಕಾಗಿದ್ದ ಮನೆತನದ ತರುಣರ ಉದಾಹರಣವು ನನ್ನಲ್ಲಿ ಬಡತನ ಭೀತಿಯನ್ನು ದೂರಮಾಡಿತು. ಬಡತನವನ್ನು ಆಜನ್ಮ ಸ್ವೀಕರಿಸಲು ಮನಸು ಸಿದ್ಧವಾಯ್ತು; ಆದರೆ 'ದೇಶ ಸೇವೆ ಮಾಡುವುದು ಎಂದರೇನು ?' ಎಂಬುದೆ ಬಗೆಹರಿಯದ ಸಮಸ್ಯೆಯಾಗಿದ್ದಿತು. ಅದಕ್ಕಾಗಿ ಹೆಚ್ಚಿನ ಜ್ಞಾನವು ಆವಶ್ಯಕವೆಂದು ನನಗೆ ತಿಳಿದ ಬಳಿಕ ಪುಸ್ತಕ ಪಿಶಾಚ ಬಡಿದುಕೊಂಡಿತು. ವಯಸ್ಸಿನ ೧೮ ವರುಷಗಳು ಹೇಗೋ ಹೋಗಿವೆ. ೧೯೨೦ ನೆಯ ವರುಷಕ್ಕೆ ಇಂಗ್ರೇಜಿ ಎ, ಬಿ, ಸಿ, ಆರಂಭಿಸಿದೆ. ನನ್ನ ಈ ನಿಶ್ಚಯದ ಸಾಧನೆಯ ಉಗ್ರತೆಯಲ್ಲಿ ಮೊದಲೆ ಸರಿಯಾದ ಪೋಷಣೆಯಿಲ್ಲದ ದೇಹ ಇನ್ನೂ ತೊಂದರೆಗೆ ಈಡಾಗಬೇಕಾಯಿತು. 'ಮುದಿ ವಿದ್ಯಾರ್ಥಿ' ಯಾದ ನಾನು ಯಾರಿಂದ ಏನು ಕಲಿಯಲು ದೊರೆತರೂ ಕಲಿಯಲು ಮನಸ್ಸು ಅಣಿಮಾಡಿದೆ. ಈ ಅವಧಿಯಲ್ಲಿ ದೈಹಿಕ ಸುಖದ ಅಪೇಕ್ಷೆಯಂತೆ ಮಾನ ಮರ್ಯಾದೆಯ ಕಲ್ಪನೆಗಳ ಗಂಟನ್ನೂ ಕಟ್ಟಿ ಒಂದು ಮೂಲೆಯಲ್ಲಿ ತೂಗ ಹಾಗಿದೆ. ನನ್ನಲ್ಲಿ ಅವಶ್ಯಕತೆಯಷ್ಟು ಹೆಮ್ಮೆ ಈಗ ಸಹ ಒಮ್ಮೊಮ್ಮೆ ಕಾಣಿಸಿ ಕೊಳ್ಳದೆ ಇರಲು ಇದೇ ಕಾರಣ. ಇದರಿಂದ ಕೆಲವೊಂದು ಹಾನಿಯಾಗಿರು ವಂತೆ ಲಾಭವೂ ಇಲ್ಲದೆ ಇಲ್ಲ. ಒಳ್ಳೆಯದೆಂದು ಮನವರಿಕೆಯಾದ ಯಾವುದೇ ಒಂದು ಕೆಲಸವನ್ನು ಕೈಕೊಂಡಾಗ ಅದರ ಸಲುವಾಗಿ ಮಾನಾಪಮಾನಗಳ ಎಣಿಕೆ, ಎಗ್ಗು ಇಲ್ಲದೆ ನಾನು ದುಡಿಯಬಲ್ಲೆ; ದುಡಿದಿದ್ದೇನೆ. ಆದರೆ ಇದರ ಲಾಭ ಪಡೆದು ಯಾರಾದರೂ ಬುದ್ಧಿಪೂರ್ವಕವಾಗಿ ನನ್ನನ್ನು ಹತ್ತಿಕ್ಕಿ ಹಿಂದಿಡುತ್ತಿರುವರೆಂದು ತಿಳಿದಾಗ ಅದನ್ನು ಸಹಿಸದೆ ವಿರೋಧಿಸುವುದನ್ನೂ ಎಷ್ಟೋ ಕಟು ಅನುಭವಗಳ ನಂತರ ಕಲಿತಿದ್ದೇನೆ.

೧೯೨೦ ರಲ್ಲಿ ಅಸಹಕಾರದ ಆಂದೋಲನವು ಬಂದಿತು ನನ್ನ ಗೆಳೆಯ ರಾದ ಶ್ರೀ ಬುರ್ಲಿಯವರು ನಾಗಪುರ ಕಾಂಗ್ರೆಸ್ಸಿನ ಸಂದೇಶವನ್ನು ಹರಡಲು ತಮ್ಮ ನೌಕರಿಯನ್ನು ತೊರೆದು ವಿಜಾಪೂರ ಜಿಲ್ಹೆಯಲ್ಲಿ ಬಿರುಗಾಳಿಯಂತೆ ಸಂಚರಿಸಲಾರಂಭಿಸಿದರು. ಅವರು ಧಾರವಾಡಕ್ಕೆ ಬಂದು 'ಇನ್ನೂ ನೀನು ಮಾತೃಭೂಮಿಯ ಕರೆಗೆ ಓಗುಡುವುದು ಎಂದು? ದೇಶದಲ್ಲಿ ಇಂತಹ ಕ್ರಾಂತಿ ಹಬ್ಬಿರಲು ಈಗಲೂ ಮೀನ-ಮೇಷವೆ ?' ಎಂದು ನನಗೆ ಚಿಕ್ಕೋಡಿಗೆ ಕಾಗದ ಬರೆದರು. ಅಷ್ಟರಲ್ಲಿ ಚಿಕ್ಕೋಡಿಯೊಳಗಣ ನನ್ನ ಚಟುವಟಿಕೆಗಳಿಗಾಗಿ ಪೋಲೀಸರ ಉಪಟಳಕ್ಕೆ ಆರಂಭವಾಗಿದ್ದಿತು. ದೇಶದ ಸಲುವಾಗಿ ತಾನು

ಯಾವ ಬಗೆಯ ಅಳಿಲು ಸೇವೆಯನ್ನು ಸಲ್ಲಿಸಬಲ್ಲೆ ಎಂಬ ಬಗೆಗೆ ಎಡೆಬಿಡದೆ ನನ್ನನ್ನು ನಾನು ತೂಗಿ ನೋಡಿಕೊಳ್ಳುತ್ತಲಿದ್ದೆ. ಧಾರವಾಡಕ್ಕೆ ೪-೬ ಬಾರಿ ಬಂದು ಇಲ್ಲಿ ಎಲ್ಲಿಯಾದರೂ ನಿಲ್ಲಲು . ಒಂದಡಿ ನೆಲ ದೊರೆಯುಬಲ್ಲುದೆ ? ಎಂದು ವಿಚಾರಿಸಿಯೂ ಹೋಗಿದ್ದೆ. ನಾನೂ ಶ್ರೀ ಬರ್ಲಿಯವರೂ ಅಂದಿನ ತರುಣರ ಮುಂದಾಳುಗಳಾದ ದೇ. ಭ. ದಿವಾಕರ ರಂಗರಾಯರನ್ನು ಕೋಟೆ ಯಲ್ಲಿ ಅವರು ನಡೆಸಿದ್ದ ರಾಷ್ಟ್ರೀಯ ವಿದ್ಯಾಲಯದಲ್ಲಿ ಒಮ್ಮೆ ಕಂಡು ಅವರಿಂದ ಏನಾದರೂ ನೆರವು ದೊರೆಯುಬಹುದೆ ಎಂದು ಮಾತನಾಡಿಸಿದ್ದಾಯಿತು. ಮಹಾತ್ಮಾಜೀಯವರ ಉಪದೇಶದಿಂದ ಸ್ಫೂರ್ತಿಗೊಂಡು ನಾಡಿನ ನಾಲ್ಕು ಮೂಲೆಗಳಿಂದ ಸಾವಿರಾರು ತರುಣರು ಮುನ್ನುಗ್ಗಿ ದೇಶಕ್ಕಾಗಿ ದುಡಿಯಲು ಬರುತ್ತಿರುವಾಗ ಮುಂದಾಳುಗಳು ಯಾರಿಗೆ, ಎಷ್ಟೆಂದು ಸಹಾಯ ಕೊಡುವುದು ಸಾಧ್ಯ ? ಸಹಾನುಭೂತಿಯನ್ನು ತೋರಿದರು. ಅದಕ್ಕಾಗಿ ನಮ್ಮ ಕೃತಜ್ಞತೆ ಸೂಚಿಸಿ ಮರಳಿದೆವು.

ತಮ್ಮ ನಾಡಿನ ಬಂಧವಿಮೋಚನಕ್ಕಾಗಿ ದುಡಿದ ದೇಶವಿದೇಶದ ಹಲವು ಮಹಾವಿಭೂತಿಗಳ ಚರಿತೆಗಳನ್ನು ಓದಿದ್ದೆ. ಲೋಕಮಾನ್ಯ ತಿಲಕರಿಂದ ಪಡೆದ ಸ್ಫೂರ್ತಿಯಂತೂ ಸರಿ. ನನ್ನ ಓದಿನಲ್ಲಿ ಮ್ಯಾಝಿನಿ ಮತ್ತು ಅರವಿಂದ ಘೋಷರು ನನಗೆ ಹೆಚ್ಚು ಮೆಚ್ಚಿಕೆಯವರಾದರು. ಶ್ರೀ ಅವಿರಂದರ ಚರಿತ್ರ ಲೇಖಕನೆಂದೇ ಧಾರವಾಡದಲ್ಲಿ ನಾನು ಮೊದಲು ಕಾಲಿಟ್ಟೆ. ಮ್ಯಾಝಿನಿ ಮೊದಲಾದ ಮಹಾಪುರುಷರ ಚರಿತೆಗಳನ್ನು ಬರೆದು ಪ್ರಕಟಿಸಬೇಕೆಂಬುದೂ ಅಂದಿನ ಒಂದು ನಿಶ್ಚಯವಾಗಿತ್ತು. ಮತ್ತು ಈ ಪ್ರಕಟನೆಗಳ ಮೂಲಕ ಉಪ ಜೀವನವು ಸಾಗಲು ಸಾಧ್ಯವೇ ನೋಡಬೇಕೆಂದು ನಿರ್ಧರಿಸಿ ಧಾರವಾಡಕ್ಕೆ ಅಂದು ಬಂದುದಾಯಿತು.

ಮನುಷ್ಯ ಸ್ವಭಾವದ ಪ್ರತ್ಯಕ್ಷ ಪರಿಚಯವು ಅಷ್ಟಕಷ್ಟೇ. ಲೋಕವನ್ನು ಕಂಡುದೆಲ್ಲ ಪುಸ್ತಕಗಳ ಮುಖಾಂತರವಾಗಿಯೆ ಹೆಚ್ಚಾಗಿ. ದೇಶದ ಸ್ವಾತಂತ್ರ್ಯ ಕ್ಕಾಗಿ ಒಂದು ಮಹಾಕಾರ್ಯವು ಆರಂಭವಾಗಿದೆ; ಅದರಲ್ಲಿ ತಾನೂ ಅಂಶತಃ ಪಾಲುಗಾರನಾಗಿ ಕೃತಾರ್ಥನಾಗಬೇಕೆಂಬ ಒಂದು ಹಂಬಲವಲ್ಲದೆ ಬೇರೆ ಭಾವನೆಗಳ ಅರಿವಿಲ್ಲ. ಹೊಟ್ಟೆಯ ಮಟ್ಟಿಗೆ ಎಲ್ಲಿಯಾದರೂ ಒಂದು ಅನುಕೂಲ ದೊರೆತರಾಯಿತು. ಮುಂದಿನ ಕಾರ್ಯಗಳೆಲ್ಲ ಸುಸೂತ್ರವಾಗಿ ತನ್ನ ತಾನೆ

ನಡೆಯುವುವು ಎಂಬ ನಂಬಿಗೆಯು ನನ್ನನ್ನು ಮುನ್ನೂಕುತ್ತಲಿತ್ತು. ಧಾರವಾಡಕ್ಕೆ ಬಂದ ಬಳಿಕ ದೇಶಸೇವೆಯ ವಿವಿಧ ಕ್ಷೇತ್ರಗಳ ಸ್ಪಷ್ಟವಾದ ಕಲ್ಪನೆಯು ಬರಲಾರಂಭಿಸಿತು. ಇನ್ನು, ಆ ಹಲವು ಕ್ಷೇತ್ರಗಳಲ್ಲಿ ನಾನು ಯಾವುದರಲ್ಲಿ ಸರಿಯಾಗಿ ಪ್ರಾಮಾಣಿಕವಾಗಿ ಕೆಲಸ ಮಾಡಬಲ್ಲೆನೆಂಬ ಬಗೆಗೆ ಮನಸಿನಲ್ಲಿ ಬೇಗನೆ ಯಾವ ನಿರ್ಣಯವೂ ಆಗದಾಯಿತು.

ಆದರ್ಶವಾದಿಗಳಾದ ಹಲವು ಹಿರಿಯರ, ತರುಣರ ಪರಿಚಯವಾಯಿತು. ಸಾಧ್ಯವಾದರೆ ಪತ್ರಿಕಾವ್ಯವಸಾಯದಲ್ಲಿ ಸೇರಬೇಕೆಂಬುದು ನನ್ನ ಬಲವಾದ ಆಕಾಂಕ್ಷೆ. ಧಾರವಾಡದ ಗೋಳೀಬಾರಿನ ಗಲಾಟೆಯ ಕಾಲವದು. ಶ್ರೀ ಮುದವೀಡು ಕೃಷ್ಣರಾಯರು, ಶ್ರೀ ದಿವಾಕರ ರಂಗರಾಯರು ಮೊದಲಾದ ಮುಂದಾಳುಗಳೆಲ್ಲ ದೊಂಬಿ, ಲೂಟಿಗಳ ಆರೋಪಿತರಾಗಿ ಸೆರೆಮನೆಯಲ್ಲಿ ಸಿಕ್ಕು ಬಿದ್ದಿದ್ದರು. ಶ್ರೀ ಮುದವೀಡರು ನಡಸುತ್ತಿದ್ದ 'ಕರ್ನಾಟಕವೃತ್ತ ಮತ್ತು ಧನಂಜಯ'ವೆಂಬ ವಾರಪತ್ರಿಕೆಯು ಬರೆಯುವವರಿಲ್ಲದುದಕ್ಕೆ ನಿಲ್ಲುವುದೆಂದು ತಿಳಿಯಿತು. ನನ್ನ ಮಿತ್ರರಾದ ಶ್ರೀ ಬುರ್ಲಿಯವರೂ ನಾನೂ ಅದರಲ್ಲಿ ತೀರ ಹುಮ್ಮಸದಿಂದ ಆವೇಶಯುಕ್ತ ಲೇಖನಗಳನ್ನು ಬರೆಯುತ್ತಿದ್ದೆವು. ಏನು ಬರೆಯುತ್ತಿದ್ದೆನೊ ನಾನರಿಯೆ. ಇಂದು ಅವನ್ನೋದಿ ನನಗೇ ಏನು ಎನಿಸ ಬಹುದೊ ಹೇಳಲಾರೆ. ಆ ಎಲ್ಲ ಬರೆಹಗಳ ಪಲ್ಲವಿಯೊಂದು ಮಾತ್ರ ನೆನಪಿದೆ. 'ಏಳಿರಿ; ನಾಡಿಗಾಗಿ ಮಡಿಯಲು ಸಿದ್ಧರಾಗಿರಿ.' 'ಏನು ಮಾಡುತ್ತ ಮಡಿಯ ಬೇಕು, ಎಂದರೆ ದೇಶಕ್ಕೆ ಸಹಾಯ ಮಾಡಿದಂತಾಗುವುದು ?' ಎಂದು ಅಂದು ಯಾರಾದರೂ ಕೇಳಿದ್ದರೆ ಮಹಾತ್ಮಾಜೀಯವರು ಕಲಿಸಿದ್ದ 'ಖಾದೀ, ಅಸ್ಪೃಶ್ಯೋದ್ಧಾರ, ಗ್ರಾಮೋದ್ಧಾರ....' ಎಂಬ ಈ ಪಾಠವನ್ನೆ ನಾನು ಒಪ್ಪಿಸಿ ಬಿಡಬಹುದಾಗಿತ್ತು.

'ಕರ್ನಾಟಕವೃತ್ತ'ದ ಆರ್ಥಿಕಸ್ಥಿತಿಯು ತೀರ ಅಸಮಾಧಾನಕರ ವಾಗಿದ್ದಿತೆಂದು ಗೊತ್ತು. ಮುಖ್ಯ ಸಂಪಾದಕರಾದ ಶ್ರೀ ಮುದವೀಡರು ಸೆರೆ ಮನೆಯಲ್ಲಿ ಬೇರೆ. ನನ್ನ ಅವರ ಪರಿಚಯ ಕೂಡ ಇರಲಿಲ್ಲ. ಶ್ರೀ ಬುರ್ಲಿ ಯವರಿಗೂ ಆ ಪತ್ರಿಕೆಯ ಆಗಿನ ವ್ಯವಸ್ಥಾಪಕರಿಗೂ ಆಪ್ತಬಾಂಧವ್ಯ. ಅಲ್ಲಿ ನಾನು ಹೋಗುತ್ತಿದ್ದುದು ಶ್ರೀ ಬುರ್ಲಿಯವರ ಸ್ನೇಹದ ಮೂಲಕ. ಎಲ್ಲಿಯೋ ನಾಲ್ಕು ತುತ್ತು ತಿಂದು, ಈ ವಾರಪತ್ರಿಕೆಗೆ ಹೀಗೆಯೆ ಬರೆಯುತ್ತ, ದೇಶಸೇವೆ

ಮಾಡುತ್ತಲಿದ್ದೇನೆಂಬ ಭ್ರಾಂತಿಯಲ್ಲಿರುವುದಕ್ಕೆ ನನ್ನ ಇನ್ನೊಂದು ಮನಸು ಒಪ್ಪದಾಯಿತು.

ಈ ಅವಧಿಯಲ್ಲಿ ಶ್ರೀ ಸತ್ಯವಂತರಾವ ಮಳಿಬೆನ್ನೂರೆಂಬ ತೀವ್ರ ವಿಚಾರಿ ತರುಣರ ಭೆಟ್ಟಿಯಾಯಿತು. ನಮ್ಮ ನಾಡಿನಲ್ಲಿ ರಾಜಕೀಯ ಕ್ರಾಂತಿಯೊಡನೆ ಸಾಮಾಜಿಕ ಕ್ರಾಂತಿಯೂ ಆಗಲೇಬೇಕೆಂಬ ತೀವ್ರ ಆವೇಗದ ಉದ್ವೇಗದ ವಿಚಾರಗಳನ್ನು ಅವರು ಸಂಧಿದೊರೆತಾಗಲೆಲ್ಲ ಪ್ರತಿಪಾದಿಸುತ್ತಲಿದ್ದರು. ಅವರ ಆ ತಳಮಳ-ಕಳವಳವು ನನ್ನನ್ನು ಅನವರತ್ತ ಸೆಳೆದಿತು. ಸಾಮಾಜಿಕ ಕ್ರಾಂತಿ, ಅದರಲ್ಲೂ ಸ್ತ್ರೀಯರ ಆಚಾರ ವಿಚಾರಗಳಲ್ಲಿ ಕ್ರಾಂತಿಯನ್ನು ಮಾಡಬೇಕೆಂದು ಅವರು ತಮ್ಮ ಜೀವನದ ನಿಶ್ಚಿತವಾದ ಗುರಿಯನ್ನಿಟ್ಟುಕೊಂಡಿದ್ದರು. ಮಹಿಲಾ ವಿದ್ಯಾಲಯವನ್ನು ಸ್ಥಾಪಿಸಿ ಅದರ ಮುಖಾಂತರವಾಗಿ ಅವರು ತಮ್ಮ ಅಣ್ಣಂದಿರೊಡನೆ ಈ ಕೆಲಸಕ್ಕೆ ಆರಂಭಿಸಿಯೂ ಆಗಿತ್ತು.

ಶ್ರೀ ಸತ್ಯವಂತರಾಯರ ವಿಚಾರಗಳೊಳಗಿನ ಎಷ್ಟೋ ಭಾಗವು ನನಗೂ ಇಷ್ಟವಾದುದೇ ಆಗಿತ್ತು. ತಮ್ಮ ಮಹಿಲಾ ವಿದ್ಯಾಲಯದಲ್ಲಿ ಕೆಲಸಕ್ಕೆ ಕರೆದರು. ನಾನೂ ಒಪ್ಪಿದೆ. ಆದರೆ ಒಂದು ವರ್ಷದ ಒಳಗಾಗಿಯೆ ಶ್ರೀ ಮಳಿಬೆನ್ನೂರ ಬಂಧುಗಳ ತತ್ವಜ್ಞಾನವೆಲ್ಲ ನನಗೆ ಪಚನವಾಗುವುದು ಸಾಧ್ಯವಿಲ್ಲವೆಂದು ಕಂಡುಬಂದಿತು.

ಉಪಜೀವನಕ್ಕೆ ಸ್ವಲ್ಪ ಅನುಕೂಲತೆ ದೊರೆತಿತೆಂದು ಹೆಂಡತಿಯನ್ನು ಕರೆಯಿಸಿದ್ದೆ. ಮದುವೆಯಾಗಿ ಎರಡು ವರುಷಗಳಾಗುತ್ತ ಬಂದಿದ್ದರೂ ಇನ್ನೂ ಒಂದೆಡೆಗೆ ನೆಲೆಯಾಗಿ ನಿಲ್ಲಲು ಆಗಿರಲಿಲ್ಲ. ಸಂಸಾರಿಗನ ಹೊಣೆಗಾರಿಕೆ ಏನೆಂಬುದರ ಸರಿಯಾದ ಕಲ್ಪನೆಯೂ ಇದ್ದಿಲ್ಲ. ನಾವೇನೊ ಗಂಡಸರು ತತ್ವ, ಆದರ್ಶಗಳೆಂದು ಹೊರಟರೂ ಮನೆಯವರು ಅದಕ್ಕೆ ಸಹಕಾರಿಗಳಾಗಿ ಸಂತೋಷದಿಂದ ತಮ್ಮ ಸಮ್ಮತಿಯನ್ನು ಕೊಡದೆ ಇದ್ದರೆ ಜೀವನವೆಲ್ಲ ಆಭಾಸ, ದುಃಖಮಯವಾಗುವುದೆಂಬ ಮಾತು ಸ್ಪಷ್ಟವಾಗಿ ಕಾಣಿಸತೊಡಗಿತು. ಅದಕ್ಕಾಗಿ ನಾನೂ ಹೆಂಡತಿಯೂ ಕೂಡಿಯೆ ಜ್ಞಾನ ಜಿಜ್ಞಾಸೆಗಳಿಗಾಗಿ ಕೆಲವೊಂದು ಅಭ್ಯಾಸ, ವಿಚಾರವಿನಿಮಯಕ್ಕೆ ತೊಡಗಿದೆವು. ಎಷ್ಟೋ ಸಂಗತಿಗಳಲ್ಲಿ 'ಹೇಳದೆ ವಿದ್ಯವ ಕಲಿಸುವ ಗುರುವು' ಅವಳು ನನಗೆ. ಅಭ್ಯಾಸ, ವಿಚಾರ, ಅನುಭವಗಳ ತಿಳಿಬೆಳಕಿನಲ್ಲಿ ರೂಢಿ, ಸಂಪ್ರದಾಯಗಳೊಳಗಿನ

ಒಳ್ಳೆಯ ಭಾಗವು ಯಾವುದೊ ಅದನ್ನು ಅರಿತು ಆಚರಿಸಿ, ನಮ್ಮ ಸಂಸ್ಕೃತಿಯ ಮಟ್ಟವನ್ನು ಇನ್ನೂ ಹೆಚ್ಚಿಸಿಕೊಳ್ಳಬೇಕೆಂಬ ದೃಷ್ಟಿಯಿಂದ ನಾವಿಬ್ಬರೂ ನಮ್ಮ ಇರುವನ್ನು ರೂಪಿಸಿಕೊಳ್ಳಲಾರಂಭಿಸಿದೆವು. ಇದರಲ್ಲಿ ನಾವು ಬಹು ಮಟ್ಟಿಗೆ ಯಶಸ್ವಿಯಾಗಿದ್ದೇವೆಂದು ಹೇಳಲು ನನಗೆ ಸಂತೋಷವಾಗುತ್ತಿದೆ. ತಿಳಿವಿನ ಬೆಳಕಿನಲ್ಲಿ ನಿತ್ಯಜೀವನವನ್ನು ನಡಸಿದಾಗ ಮುಂದೆ ಸಾಗುವಾಗ ಯಾವ ಅಡೆತಡೆ, ನಾಚಿಕೆ, ಸಂಕೋಚಗಳಿಗೂ ಜಗ್ಗದೆ ನಮ್ಮ ಹಾದಿಯಲ್ಲಿ ನಾವು ನಡೆಯಬೇಕೆಂಬ ನಿಶ್ಚಯಕ್ಕೆ ಅವಳಿಂದ ವಿಶೇಷವಾದ ಆತಂಕವುಂಟಾದ ಪ್ರಸಂಗವೇ ನನಗೆ ಗೊತ್ತಿಲ್ಲ. ತೊಂದರೆಗಳು ಬೇಕಾದಷ್ಟು ಬಂದಿವೆ. ಆದರೆ ಇಬ್ಬರೂ ವಿಚಾರದಿಂದ ಬಗೆಹರಿಸಿಕೊಂಡಿದ್ದೇವೆ. ನಮ್ಮ ಗುರಿಯಿಂದ ಕದಲಲಿಲ್ಲ.

ಬಡತನವನ್ನು ಎದುರಿಸಲು ಅವಳು ಎಂದೂ ಹಿಂಜರಿಯಲಿಲ್ಲ. ಮಹಿಳಾ ವಿದ್ಯಾಲಯದ ಕೆಲಸ ಬಿಟ್ಟು, ನಾಳೆ ಏನು ? ಎಂಬ ಮಧ್ಯಾಹ್ನದ ಚಿಂತೆ ಎದುರು ನಿಂತು ಹೆದರಿಸುತ್ತಿದ್ದರೂ ಇದ್ದುದನ್ನು ಒಪ್ಪತ್ತು ತಿಂದೇ ಸಮಾಧಾನ ದಿಂದ ಇರುವ ಎದೆಗಾರಿಕೆಯನ್ನು ತೋರಿದ್ದಾಳೆ. ಮಕ್ಕಳಿಗೆ ಕಂನುಡಿಯನ್ನು ಕಲಿಸುವದನ್ನು ಕಂಡು ಬಳಗದವರು ಹೀಯಾಳಿಸಿ ಕುಚೇಷ್ಟೆ ಮಾಡಿದರೂ ಅವಳು ತನ್ನ ಮನಸ್ಸನ್ನು ತಿದ್ದಿಕೊಂಡು ನನಗೇ ಬೆಂಬಲವಾಗಿ ನಿಂತಿದ್ದಾಳೆ. ಅತಿಥಿ ಸತ್ಕಾರದಲ್ಲಿ ನಮಗೆ ಇಬ್ಬರಿಗೂ ಒಂದು ಬಗೆಯ ಸಂತೋಷ ಆರ್ಥಿಕ ಸ್ಥಿತಿಯನ್ನು ನೆನೆದು ಜಿಪುಣರಂತೆ ಲೆಕ್ಕಹಾಕುವದು ನಮ್ಮ ಪಾಲಿಗೆ ಬಂದಿದ್ದಿಲ್ಲ ವಾದರೆ, ನಾವು ಈ ಆನಂದವನ್ನು ಇನ್ನೂ ಎಷ್ಟೋ ಅನುಭವಿಸಬಹುದಾಗಿ-ದ್ದಿತಲ್ಲ, ಎಂದುಕೊಂಡು ನಾವು ಮಿಡುಕುತ್ತಿರುತ್ತೇವೆ. ಗುಣವಂತರು, ಧೀಮಂತರು, ಸಾಧುಜೀವಿಗಳು, ಸಜ್ಜನರು ಮನೆಗೆ ಬರಬೇಕು; ಅವರನ್ನು ಉಪಚರಿಸುವ ಸುಸಂಧಿ ನಮಗೆ ದೊರೆಯಬೇಕು—ಎಂದು ಯಾವಾಗಲೂ ನಮ್ಮ ಹಾರಯಿಕೆ. ನಮ್ಮ ಜೀವನದೊಳಗಿನ ರಸನಿಮಿಷಗಳಿವು. ಬಂದ ಅತಿಥಿ-ಗಳು ಯಾವ ಬಗೆಯವರಿರಲಿ, ನಮ್ಮಲ್ಲಿ ಭಿನ್ನಪಂಕ್ತಿಯಿಲ್ಲ. ನನ್ನ ಸಂಗಾತಿಯ ಒಪ್ಪಿಗೆಯೂ ಕ್ರಮವಾಗಿ ದೊರೆತುದು ಒಂದು ವಿಶೇಷ ಸಮಾಧಾನದ ಸಂಗತಿ. ಈ ವಿಷಯದಲ್ಲಿ ನಾನು ತುಂಬಾ ಸುದೈವಿ. ಸುಶೀಲೆಯಾದ ಹೆಂಡತಿ, ಸುವಿಚಾರಿಗಳಾದ ಮಕ್ಕಳನ್ನು ಪಡೆದ ಭಾಗ್ಯಶಾಲಿ.

ಬಂದವರನ್ನು ಸರಸ ವಿನೋದದ ಹಾಸ್ಯಲಹರಿಗಳಲ್ಲಿ ಓಲಾಡಿಸಿ ಆನಂದಗೊಳಿಸುವ ಕಲೆಗೆ, ನನ್ನ ಪೂರ್ವ ಸಂಸ್ಕಾರಗಳ ಮೂಲಕ ನಾನು ಆಜನ್ಮ ಎರವಾಗಿದ್ದಕ್ಕಾಗಿ ನನಗೆ ಇಂತಹ ಸಂದರ್ಭಗಳಲ್ಲಿ ಬಹಳ ಬೇಸರ ವಾಗುತ್ತದೆ. ಈ ವಿಷಯದಲ್ಲಿ ಶ್ರೀ ಬೇಂದ್ರೆಯವರ ಚಾತುರ್ಯವು ತುಂಬ ಕೊಂಡಾಡುವಂತಹದು. ಅವರ ಈ ಆಕರ್ಷಕ ಗುಣವೇ ನನ್ನ ಅವರ ಸ್ನೇಹಕ್ಕೆ ಕಾರಣವಾಯಿತು. ಅಲ್ಲದೆ ಅವರಲ್ಲಿರುವ ಜ್ಞಾನಜಿಜ್ಞಾಸೆ ಬಹಳ ಸ್ವಲ್ಪ ಜನರಲ್ಲಿ ಕಾಣಲಿಕ್ಕೆ ಸಿಗುತ್ತದೆ. ಈ ವಿಷಯದಲ್ಲಿ ನನಗೊಬ್ಬ ಸಮಾನ ಧರ್ಮನು ದೊರೆತ ಸಂತೋಷ ಬೇರೆ. ನನ್ನ ಮಾತು ಯಾವಾಗಲೂ ವೇದಾಭ್ಯಾಸ ಜಡರಂತಹರ ವರ್ಗಕ್ಕೆ ಸೇರಿದ ಭಾರವಾದ ಬಗೆಯದು; ನೀರಸ. ಆದುದರಿಂದ ಆಡುವದಕ್ಕಿಂತ ಕೇಳುವದರಲ್ಲಿಯೆ ನನಗೆ ಹೆಚ್ಚು ಆನಂದ. ನನ್ನದು ವಾಗ್ಮಿಯ ವೈಖರಿಯಲ್ಲ; ಅಥವಾ ವಾದಿಯ ಸಂಭಾಷಣ ಚಾತುರ್ಯವೂ ಅಲ್ಲ; ಒಂದು ವಿಷಯವನ್ನು ಕುರಿತು ನನ್ನಲ್ಲಿ ಉಂಟಾದ ಭಾವನೆಯ ಕಳವಳದ ಉಸಿರು. ಮಿಗಿಲಾದ ಶ್ರದ್ಧೆಯ ಬೆಂಬಲವಿರುವ ವರೆಗೂ ಅದು ನಿಟ್ಟುಸಿರಾಗಲಾರದೆಂದು ನನ್ನ ನಂಬುಗೆ.

ಮಹಿಲಾವಿದ್ಯಾಲಯವನ್ನು ಬಿಟ್ಟಬಳಿಕ ಕೆಲದಿನಗಳ ತರುವಾಯ 'ಕರ್ಮವೀರ' ವಾರಪತ್ರಿಕೆಯಲ್ಲಿ ಕೆಲಸಕ್ಕೆ ನಿಂತೆ. ದೇ. ಭ. ದಿವಾಕರರು ಸೆರೆಮನೆಯಲ್ಲಿದ್ದರು. ಅವರು ಮರಳಿ ಬರುವ ವರೆಗೆ ಅದನ್ನು ನಡಸಿಕೊಂಡು ಹೋಗುವ ಹೊಣೆಯನ್ನು ಶ್ರೀ ಆಲೂರ ವೆಂಕಟರಾಯರು ವಹಿಸಿಕೊಂಡಿದ್ದರು. ಅವರಿಗೆ ನೆರವಿಗನಾಗಿ ನಾನು ಕೆಲಸ ಮಾಡುತ್ತಿದ್ದೆ. ಆಗ ಕರ್ಮವೀರದಲ್ಲಿ ಬಂದ ಒಂದು ಲೇಖನವನ್ನೋದಿ ಶ್ರೀ ಗಳಗನಾಥರು ಶ್ರೀ ಆಲೂರರವರಿಗೆ ಬಹಳ ಹೊಗಳಿ ಕಾಗದ ಬರೆದಿದ್ದರು. ಆ ಲೇಖನವು ನನ್ನದಾಗಿದ್ದುದರಿಂದ ಶ್ರೀ ಆಲೂರರವರಿಗೆ ನನ್ನ ವಿಷಯದಲ್ಲಿ ಅನುಕೂಲ ಅಭಿಪ್ರಾಯವಾಗಲು ಸಹಾಯಕವಾಯಿತೆಂದು ನಾನು ಬಗೆದಿದ್ದೇನೆ. ಉಡುಪಿಯಲ್ಲಿ ಆಗ "ಸತ್ಯಾಗ್ರಹಿ" ಎಂಬ ವಾರಪತ್ರಿಕೆ ಹೊರಡುತ್ತಿತ್ತು. ಶ್ರೀ. ವ್ಹಿ. ಎಸ್. ಕುಡ್ವರು ಕೆಲದಿನ ಅದರ ಸಂಪಾದಕರಾಗಿದ್ದರು. "ಬೆಂಕಿಯು ಆರಿತೆ? " ಎಂಬಿವೆ ಮೊದಲಾದ ನನ್ನ ಕೆಲವು ಬಿಡಿಬರಹಗಳನ್ನು ಎತ್ತಿ ತಮ್ಮ ಪತ್ರಿಕೆಯಲ್ಲಿ ಮುದ್ರಿಸುತ್ತಿದ್ದುದು ನನ್ನ ಲೇಖನ ವ್ಯವಸಾಯಕ್ಕೆ ಉತ್ತೇಜನವನ್ನಿತ್ತಿತು. ಹೊರಗಿನ ಜಗತ್ತಿಗೆ ನನ್ನ ಪರಿಚಯವು ಸ್ವಲ್ಪವೂ ಇದ್ದಿಲ್ಲ. ಆದರೂ ನನ್ನ

ಬರೆವಣಿಗೆಯೊಳಗಿನ ಯಾವುದೋ ಒಂದು ಅಂಶವು ಜನರನ್ನು ಹೋಗಿ ಮುಟ್ಟುತ್ತದೆ, ತಟ್ಟುತ್ತದೆ, ಎಂಬುದು ನನಗೆ ಆಗ ಕಂಡುಬಂದಿತು.

ಶ್ರೀ ದಿವಾಕರ ರಂಗರಾಯರು ಸೆರೆಮನೆಯಿಂದ ಮರಳಿ ಬಂದರು. ಅವರ ಸಹಕಾರಿಯಾಗಿ ಕೆಲಸ ಮಾಡುವ ಯೋಗವು ನನಗೆ ಇನ್ನು ದೊರೆತಿತೆಂದು ಸಂತೋಷಪಡುವಷ್ಟರಲ್ಲಿಯೆ ಮತ್ತೊಮ್ಮೆ ಅವರನ್ನು ಪೋಲೀಸರು ಸೆರೆಮನೆಗೆ ಅಟ್ಟಿದರು. ಕರ್ಮವೀರದ ಸಂಪಾದಕೀಯ ಎಲ್ಲ ಕೆಲಸವೂ ನನ್ನ ಪಾಲಿಗೆ ಬಂದಿತು. ಅದನ್ನು ನನಗೆ ತಿಳಿದ ರೀತಿಯಲ್ಲಿ ನಾನು ನಡಸಿಕೊಂಡು ಹೋದೆ. ಶ್ರೀ. ದಿವಾಕರರ ಸಹಕಾರಿಗಳಾದ ಶ್ರೀಮಾನ್ ಹುಕ್ಕೇರಿಕರ ರಾಮರಾಯರು ಸೆರೆಮನೆಯಿಂದ ಮರಳಿ ಬಂದ ಬಳಿಕ ಕರ್ಮವೀರದ ಸಂಚಾಲಕರಾಗಿದ್ದರು. ಸಂಪಾದಕತ್ವವು ಶ್ರೀ ಮಿರ್ಜಿ ವೆಂಕಟರಾಯರ ಕಡೆಗೆ ಹೋಯಿತು. ಕರ್ಮವೀರದಿಂದ ಬಿಡುಗಡೆ ಹೊಂದಬೇಕಾಯಿತು. ಮತ್ತೆ ಮಧ್ಯಾಹ್ನದ ಚಿಂತೆ ಬೆಂಬತ್ತಿತು.

ನನಗೆ ಲೇಖನದ ವ್ಯವಸಾಯದಲ್ಲಿ ಕೃಷಿಮಾಡಲು ಮೊದಲು ಇಂಬು ದೊರೆತ 'ಕರ್ಮವೀರ' ಪತ್ರಿಕೆಯ ವಿಷಯದಲ್ಲಿ ನನ್ನ ಆತ್ಮೀಯತೆಯು ಎಂದೂ ಕಡಿಮೆಯಾಗಲಿಲ್ಲ. ಶ್ರೀ ದಿವಾಕರರು ಬಂದಿವಾಸದಿಂದ ಮರಳಿ ಕಾರ್ಯರಂಗಕ್ಕೆ ಬಂದಬಳಿಕ ನನ್ನನ್ನು ತಮ್ಮೊಡನೆ ಕೆಲಸಕ್ಕೆ ಬರಲು ಕೇಳಿದ್ದರು. ಎಂದಿನಿಂದಲೂ ನಾನು ಅದರ ಲೇಖಕರ ಬಳಗದಲ್ಲಿ ಒಬ್ಬನಾಗಿರುವೆನು.

ಮೊದಲನೆಯ ಮಹಾಯುದ್ಧ ಕಾಲದಲ್ಲಾಯ್ತು; ಮತ್ತು ಮುಂದೆ ನಾಡಿನ ನಿಃಶಸ್ತ್ರ-ಪ್ರತಿಕಾರದ ಹೋರಾಟಕಾಲದಲ್ಲಾಯ್ತು; 'ಸತ್ಯಕ್ಕೆ ಸಾವಿಲ್ಲ,' 'ಸತ್ಯಮೇವ ಜಯತೇ' ಎಂಬ ಮಾತು ಅಡಿಗಡಿಗೆ ಕೇಳಬರುತ್ತಲಿತ್ತು. ಆದರೆ ನಾನು ಆ ಮಾತನ್ನು ಹೇಳುವಾಗ ನನಗೆ ಒಳಗಣಿಂದ ತಡೆಯುಂಟಾಗಿ 'ನೀನಿದರಲ್ಲಿ ನಿಜವಾಗಿ ನಂಬುವೆಯಾ ? ' ಎಂಬ ಪ್ರಶ್ನೆಯು ಕೇಳಬರುತ್ತಲಿತ್ತು. ಅಂದಿನಿಂದಲೂ ಸತ್ಯವೆಂದರೇನು ? ಸತ್ಯಕ್ಕೆ ಜಯವೆಂದರೇನು ? ಎಂಬುದನ್ನು ಸರಿಯಾಗಿ ಅರಿತುಕೊಳ್ಳುವ ಕುತೂಹಲ ನನಗೆ

ರಾಜಕೀಯ ರಂಗದೊಳಗಿನ ದಿನಕ್ಕೊಂದು ಬಗೆಯಾಗಿ ಬದಲಾಗುವ ವಾತಾವರಣಕ್ಕೆ ಮನಸ್ಸನ್ನು ಕೂಡಲೆ ಸರಿಹೊಂದಿಸಿಕೊಳ್ಳುವ ಮನಃಸ್ಥಿತಿಯು ನನ್ನಲ್ಲಿ ಇಲ್ಲದುದರಿಂದ, ಈ ಮೊದಲು ಹಲವು ಬಾರಿ ನಾನು ನನ್ನೊಡನೆಯೆ ತೀವ್ರವಾದ ಹೋರಾಟವನ್ನು ನಡಸಬೇಕಾದುದರ ಅನುಭವವು ಈಗ ಮತ್ತೆ

ವೃತ್ತಪತ್ರಿಕೆಯೇ ಮುಖ್ಯವಾದ ನನ್ನ ವ್ಯವಸಾಯವಾಗುವದಕ್ಕೆ ಅಡ್ಡ ಬಂದಿತು. ಆದರೆ ನಾಡಿನ ಬಿಡುಗಡೆಗಾಗಿ ನಡೆದ ಆಂದೋಲನದಿಂದ ಅಲಿಪ್ತನಾಗಿ ದೂರವಿರುವದೂ ನನ್ನಿಂದ ಸಾಧ್ಯವಿಲ್ಲ. ನನಗೆ ನೀಗಿದಷ್ಟು ಕೆಲಸವನ್ನು ಮಾಡುತ್ತ ಬಂದಿದ್ದೇನೆ. ಅದಕ್ಕಾಗಿ ಪೋಲೀಸರ ಪೀಡೆಗೂ ಗುರಿಯಾಗಿದ್ದೇನೆ. ಸೆರೆಮನೆಯ ಹೊಸತಿಲವರೆಗೂ ಹೋಗಿಬಂದಿದ್ದೇನೆ ಆವರು ಏಕೊ ಒಳಗೆ ಬೀಗ ಹಾಕಿಡಲಿಲ್ಲ; ಹೊರಗೆಯೆ ದಿಗ್ಬಂಧನದಲ್ಲಿರಿಸಿದ್ದರು.

ಗೆಳೆಯರು ಹಲವರು ಸೇರಿ ಆದರ್ಶ ಸಾಮೂಹಿಕ ಜೀವನದ ಒಂದು ಪ್ರಯೋಗ ನಡಸಬೇಕು, ಅದಕ್ಕಾಗಿ ಒಂದೆಡೆಗೆ ಎಲ್ಲರೂ ಸೇರಿ ಇರುವದಕ್ಕೆ ಭೂಮಿಯನ್ನು ಕೊಳ್ಳಬೇಕು; ತಮ್ಮದೆ ಆದ ಒಂದು ಮಾಸಪತ್ರಿಕೆ, ಒಂದು ಶಿಕ್ಷಣಸಂಸ್ಥೆ ಅದಕ್ಕೆ ಆವಶ್ಯ; ಎಂಬಿವೇ ಮೊದಲಾದ ಹೊಂಗನಸಿನ ಕನವರಿಕೆ ಯಲ್ಲಿ ಈ ಮಧ್ಯೆ ಕೆಲದಿನಗಳು ಉರುಳಿದವು. ಆ ದಿಕ್ಕಿನಲ್ಲಿ ಒಂದೆರಡು ಹೆಜ್ಜೆ ನಡೆದುದೂ ಆಯಿತು. ಆದರೆ ಆದರ್ಶ ಮತ್ತು ವ್ಯವಹಾರಗಳನ್ನು ಜೊತೆಗೂಡಿಸುವದಕ್ಕೆ ಅವಶ್ಯಕವಾದ ವಾತಾವರಣವನ್ನು ನಿರ್ಮಿಸುವದು ನನ್ನಿಂದಾಗಲಿ, ಇನ್ನುಳಿದವರಿಂದಾಗಲಿ ಅಸಾಧ್ಯವೆಂದು ಮನವರಿಕೆಯಾದೊಡನೆ ನಾನು ಅಂದಿನಿಂದ ನನಗೆ ನೀಗಬಹುದಾದ—ನನ್ನ ಅಂತಃಕರಣಕ್ಕೆ ಪ್ರಿಯ ವಾದ ಕೆಲಸಗಳಲ್ಲಿ ತೊಡಗಿದೆ (೧೯೩೦). ಮುಂದೆ ಎರಡು ಮೂರು ವರುಷ ಗಳಲ್ಲಿ ಉಳಿದವರಿಗೂ ಇದೇ ಅನುಭವವು ಬಂದುದು ಕಂಡುಬಂದಿತು.

ನಾನೊಬ್ಬ ಸಂಸ್ಕೃತಿಯ ಅಭ್ಯಾಸಿ. ಸಂಸ್ಕೃತಿಯ ಉಗಮ, ವಿಕಾಸದ ಇತಿಹಾಸವನ್ನರಿತುಕೊಂಡು ಆದರ ಬೆಳಕಿನಲ್ಲಿ ನಮ್ಮ ನಾಡಿನ ಇಂದಿನ ಜೀವನವು ಬೆಳೆಯಬೇಕೆಂಬ ಹಂಬಲವು ನನಗೆ. ಅದಕ್ಕಾಗಿ ಅವಶ್ಯಕವಾದ ಅಭ್ಯಾಸ, ಆಚಾರಗಳು ನನಗೆ ಇಷ್ಟ.

ಈ ದೃಷ್ಟಿಯಿಂದಲೇ ಕರ್ಮವೀರದಲ್ಲಿ ನಾನು ಹಲವು ಲೇಖನಗಳನ್ನು ಬರೆದಿದ್ದೇನೆ. ಕಂನಾಡಿನ ಜನಗಳ ನಡೆ-ನುಡಿಗಳ ಅಭ್ಯಾಸದಲ್ಲಿ ನನಗೆ ಕಂಡ ಕೆಲವು ಮಾತುಗಳನ್ನು ಅಲ್ಲಿ ವಿಮರ್ಶಿಸಿದ್ದೇನೆ. ೧೯೨೪ರ 'ಬೆಳಗಾವಿ ಕಾಂಗ್ರೆಸ್ಸಿನಲ್ಲಿ ಕಂನಾಡ ವೈಶಿಷ್ಟ್ಯಕ್ಕೆ ಪ್ರಾಶಸ್ತ್ಯವಿರಬೇಕೆಂಬ ಚಳವಳಿ ಯನ್ನು ಯಶಸ್ವಿಯಾಗಿಸಲು ಕರ್ಮವೀರವು ಆಗ ತುಂಬ ನೆರವಾಗಿದೆ. ಕರ್ನಾಟಕದ ಏಕೀಕರಣವಾಗದೆ ನಮ್ಮ ಸಂಸ್ಕೃತಿಯು ಉಳಿಯಲಾರದೆಂಬ ಮನವರಿಕೆಯಾಗಿ, ಬೆಳಗಾವಿಯ ಕಾಂಗ್ರೆಸ್ಸಿನ ಕಾಲಕ್ಕೇ ಕರ್ನಾಟ ಏಕೀಕರಣ

ಸಮ್ಮೇಳನವನ್ನೂ ನೇರವೇರಿಸಬೇಕೆಂದು ಆಗಿನ ಇಲ್ಲಿಯ ಮುಖಂಡರಾದ ಶ್ರೀ ಕಡಪಾ ರಾಘವೇಂದ್ರರಾಯರು, ಶ್ರೀ ಆಲೂರ ವೆಂಕಟರಾಯರು, ಶ್ರೀ ನರಗುಂದ ರಾಮರಾಯರುಗಳೊಡನೆ ಚರ್ಚಿಸಿ ನಿರ್ಧರಿಸುವಲ್ಲಿ ಆ ಸಭೆಗಳ ಆಮಂತ್ರಕನ ಹೊಣೆಯನ್ನು ನಾನು ಹೊತ್ತುಕೊಂಡಿದ್ದೆ. ಮುಂದೆ ಬೆಳಗಾವಿಯಲ್ಲಿ ಜರುಗಿದ ಮೊದಲನೆಯ ಕರ್ಣಾಟ ಏಕೀಕರಣ ಸಮ್ಮೇಲನಕ್ಕೆ ನಾನೂ ಶ್ರೀ ಮಂಗಳವೀಡು ಶ್ರೀನಿವಾಸರಾಯರೂ ಕಾರ್ಯದರ್ಶಿಗಳಾಗಿದ್ದೆವು. ಬೆಳಗಾವಿಯಲ್ಲಿ ಈ ಸಮ್ಮೇಲನಕ್ಕೆ ಬೇಕಾದ ಜನಸಹಾಯವನ್ನು ದೊರಕಿಸುವಲ್ಲಿ ಶ್ರೀ ಮಂಗಳವೀಡರು ತುಂಬ ಪರಿಶ್ರಮಪಟ್ಟರು. ಏಕೀಕರಣದಲ್ಲಿ ವಿಶ್ವಾಸವಿಲ್ಲದಿದ್ದರೂ ಸಮಾಜದಲ್ಲಿ ಉಳಿದ ದೃಷ್ಟಿಯಿಂದ ಗಣ್ಯರಾದ ಕೆಲವರನ್ನು ಸಮ್ಮೇಲನಕ್ಕೆ ಬರಲು, ಅದರಲ್ಲಿ ಕೆಲವು ಅಧಿಕಾರ ಸ್ಥಾನಗಳಿಗೆ ಹೆಸರು ಕೊಡಲು ಪ್ರಾರ್ಥಿಸಿಕೊಳ್ಳುವಲ್ಲಿಯೆ ನಮ್ಮ ಉತ್ಸಾಹ-ಶಕ್ತಿಗಳು ಎಷ್ಟು ಸುಮ್ಮನೆ ವೆಚ್ಚವಾಗುವುವೆಂದು ಮನವರಿಕೆಯಾಗಿ ನನಗೆ ಈ ಬಗೆಯ ಸಾರ್ವಜನಿಕ ಕಾರ್ಯದಲ್ಲಿ ಮೊದಲಿನಷ್ಟು ಹುರುಪು ಉಳಿಯಲಿಲ್ಲ.

ಆದರೂ, ಬೆಳಗಾವಿಯಲ್ಲಿ ೧೯೪೦ರಲ್ಲಿ ಮಹಾರಾಷ್ಟ್ರ ಸಾಹಿತ್ಯ ಸಮ್ಮೇಲನವು ನೇರುವ ನಿರ್ಣಯವಾದಾಗ ಅಲ್ಲಿ ಕರ್ಣಾಟ ಸಂಸ್ಕೃತಿಯ ಪ್ರಭಾವವನ್ನು ಬೆಳಗಿ ತೋರಿಸಬೇಕೆಂದು ಹಲವು ಸಮ್ಮೇಲನಗಳನ್ನು ಹೂಡುವುದಕ್ಕೆ ಮತ್ತೆ ಅಣಿಯಾದೆ. ಶ್ರೀಮಾನ್ ಕೌಜಲಗಿ ಹನುಮಂತರಾಯರ ಸಹಾನುಭೂತಿ, ಬೆಂಬಲದಿಂದಲೂ ಶ್ರೀ ಅರವಿಂದ ಜೋಶಿಯವರ ಅವಿಶ್ರಾಂತ ಪರಿಶ್ರಮದಿಂದಲೂ ಆ ಮಹಾಕಾರ್ಯವು ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಇದರಲ್ಲಿ ಮೊದಲಿನಿಂದ ಕೊನೆಯವರೆಗೆ ಎಲ್ಲವನ್ನೂ ಮುಖ್ಯವಾಗಿ ದುಡಿದವರು ನಾವೇ ಆಗಿದ್ದರೂ ನಮ್ಮ ಹೆಸರುಗಳನ್ನು ಹೊರಗೆ ಅರಿತವರು ವಿರಳ.

ಯಾವುದೆ ಪವಿತ್ರ ಕೆಲಸವಿರಲಿ; ಅದು ಒಂದು ದಂದುಗ (ಧಂದೆ) ಆದರೆ ಅದರ ಬೆಲೆ ೫೦%ರಷ್ಟು ಕಡಿಮೆಯಾಗುವುದೆಂದು ನನ್ನ ಮತ. ಹೆಣ ಹೊರುವುದರಿಂದ ಖಾದೀ ಮಾರುವ ವರೆಗಿನ ಎಲ್ಲ ಕೆಲಸಗಳನ್ನೂ ಸಾರ್ವಜನಿಕ ಸೇವೆಯೆಂದು ಮಾಡುವದರಲ್ಲಿ ನಾನು ಆನಂದಪಟ್ಟಿದ್ದೇನೆ. ಆದರೆ ಅದು ದಿನದ ಉದ್ಯೋಗವಾದರೆ ಅದರೊಳಗಿನ ಸಾತ್ವಿಕ ಆನಂದದ ಭಾಗವು ಬಹುಮಟ್ಟಿಗೆ ನಷ್ಟವಾಗುವುದೆಂದು ನನ್ನ ಅನುಭವ. ಈಗ ನಾನು ಖಾಸಗಿ ಹ್ಯಾಸ್ಕೂಲಿನಲ್ಲಿ ಶಿಕ್ಷಕನು, ಶಿಕ್ಷಕನ ಕೆಲಸವು ಪವಿತ್ರವೆಂದು ಹೇಳಿಕೊಂಡು

ಆತ್ಮವಂಚನೆ ಮಾಡಿಕೊಳ್ಳಲು ನಾನಂತೂ ಸಿದ್ಧನಿಲ್ಲ. ಅದು ಪವಿತ್ರವಲ್ಲ ವೆಂತಲ್ಲ. ಆದರೆ ನಮ್ಮ ಇಂದಿನ ಶಿಕ್ಷಣಸಂಸ್ಥೆಗಳಲ್ಲಿ ಇರುವ ವಾತಾವರಣವನ್ನು ನೆನೆದರೆ ಪ್ರಾಮಾಣಿಕವಾಗಿ ಹಾಗೆ ಹೇಳಲು ನನಗೆ ನಾಲಗೆ ಏಳದು. ನನ್ನ ಯಥಾಶಕ್ತಿ ಹಲಕೆಲವರಿಗೆ ಕೆಲವೊಂದು ವಿಧದಲ್ಲಿ ನೆರವಾಗಿದ್ದೇನೆ. ಅದರ ಪಟ್ಟಿಯನ್ನಿಲ್ಲಿ ಬಿಚ್ಚಲಾರೆ. ಉಣಿಸುವ ಕೈಗೆ ಕಚ್ಚಿಸಿಕೊಳ್ಳಬೇಕಾದುದೂ ಉಂಟು. ಆಗ ನಾನು ತಾಯಂದಿರನ್ನು ನೆನೆದುಕೊಳ್ಳುತ್ತೇನೆ. ಆದರೆ ಆ ಮಾರ್ಗದಿಂದ ಪರಾವೃತ್ತನಾಗಲಿಚ್ಛಿಸುವುದಿಲ್ಲ.

ನಾನು ಗಳಿಸಿದುದು, ಗಳಿಸಬೇಕೆಂದುದು, ಅನುಭವ;—ತನ್ಮೂಲಕ ಜ್ಞಾನ. ತಿಳಿಯಬೇಕು; ಬಾಳು ತಿಳಿಯಾಗಬೇಕೆಂದು ನನ್ನ ಹೆಬ್ಬಯಕೆ. ಇದರಲ್ಲಿ ನಾನು ಸಿರಿವಂತ; ನವಕೋಟಿ 'ನಾರಾಯಣ'ನಲ್ಲದಿದ್ದರೂ ಲಕ್ಷ ವನ್ನಿಟ್ಟ ಲಕ್ಷಾಧೀಶ ನರನು. ನಾನು ಗಳಿಸಿದುದನ್ನು ಉಳಿದವರಿಗೂ ಹಂಚಿ ಕೊಡುವುದರಲ್ಲಿಯೆ ನನಗೆ ಆನಂದ. ನನ್ನ ಕಂಡಿತವನ್ನು ಹೇಳುವಾಗ ಎಲ್ಲರೂ ಅದನ್ನು ಸತ್ಯ ಸಿದ್ಧಾಂತವೆಂದೇ ಸ್ವೀಕರಿಸಬೇಕೆಂಬ ಹಟವಿಲ್ಲ. 'ಅದು ನಾನು ಕಂಡುದು; ತಮಗೂ ಹೀಗೆಯೆ ಕಾಣುತ್ತಿದೆಯೆ? ನಿಮ್ಮ ಅನುಭವ, ವಿಚಾರಗಳು ಬೇರೆಯಿದ್ದರೆ ತಿಳಿಸಿರಿ; ನನಗೆ ಇನ್ನೂ ಒಮ್ಮೆ ಬಗೆದು ಭಾವಿಸಲು ನೆರವಾಗಿರಿ;' ಎಂದು ಕೇಳಿಕೊಳ್ಳುವುದಕ್ಕಾಗಿ ನಾಡಿನ ಬಲ್ಲಿದರ ಮುಂದೆ ನನ್ನ ವಿಚಾರದ ವರದಿಯನ್ನು ಒಪ್ಪಿಸುತ್ತಿರುತ್ತೇನಲ್ಲದೆ, ಬೇರೆ ಯಾವ ಲೋಕೋಪಕಾರದ ಇಲ್ಲದ ಹೆಮ್ಮೆ-ಬಿಂಕಗಳು ನನಗೆ ಸೋಂಕಿಲ್ಲ. ಮನುಷ್ಯನೆಂದ ಬಳಿಕ, ನನಗೆ ದೊರೆತ ಸಂಪತ್ತಿನ ಸಲುವಾಗಿ ನನಗೆ ಒಂದು ಬಗೆಯ ತೃಪ್ತಿಯ ಹಿರಿಮೆಯೆನಿಸುತ್ತಿದ್ದರೆ ಸೋಜಿಗವಲ್ಲ.

'ಕಣ್ಮರೆಯಾದ ಕನ್ನಡವು' ನನಗೆ ಕಂಡಿತು. ನಾನದನ್ನು ಹೇಳುವಲ್ಲಿ ಬಳಸಿದ ಭಾಷೆ ಅಂದಿನ ನನ್ನ ಆವೇಶ, ಉತ್ಸಾಹದ ದ್ಯೋತಕವಾಗಿದೆ. ಕನ್ನಡರಲ್ಲದವರಿಗೆ ಈ ಪ್ರಬಂಧದೊಳಗಿನ ಕೆಲವು ಮಾತುಗಳು ಸರಿದೋರ-ಲಿಕ್ಕಿಲ್ಲ; ಕೆಲವು ಕಠೋರವೆಂದೂ ಎನಿಸಬಹುದು. ಆದರೆ ಅಂತಹ ಕಡೆ ಗಳಲ್ಲಿ ಕೆಲವರಿಗೆ 'ಅಪ್ರಿಯವಾದರೂ ಸತ್ಯವಿದ್ದುದನ್ನು ಆಡದೆ ಇರುವದು ಅಪರಾಧವೆನಿಸಿ ಅದನ್ನು ಬರೆಯದೆ ಇರುವದಾಗಲಿಲ್ಲ;' ಎಂದು ಕ್ಷಮಾಪಣೆ ಯನ್ನೂ ಕೇಳಿದ್ದೇನೆ. ಆದರೂ ಇನ್ನೊಬ್ಬರನ್ನು ಕೆಣಕಿ ಆಡುವ ಮಾತು

ಆಷ್ಟು ಸರಿಯಲ್ಲವೆಂದು ನಾನಿಂದು ಒಪ್ಪಿಕೊಳ್ಳಲೇಬೇಕು. ಸ್ಪಷ್ಟ ಸತ್ಯವಾದಿತ್ವದ ಭರದಲ್ಲಿ ಆಡಿದ ಮಾತಿನಿಂದ ಹಲವರನ್ನು ನೋಯಿಸುವ ಅನ್ಯಾಯವು ನನ್ನಿಂದ ಆಗಿದೆ. ಅದರಲ್ಲಿ ಕೆಲವು ಅಸಮರ್ಪಕ ವಿವೇಚನೆಯೂ ಬಂದಿದ್ದುದು ಈಗ ನನಗೆ ಕಂಡುಬಂದಿದೆ. ಆದರೆ ಖಾನ ದೇಶವು ಕನ್ನದೇಶವೆಂಬ ಬಗೆಗೆ ನನ್ನ ಮಾತು ಸ್ಥಿರವಾಗಿ ಉಳಿದಿದೆ. ಇಷ್ಟೆ ಅಲ್ಲದೆ ಇನ್ನೂ ಹೆಚ್ಚಿನ ಪ್ರಮಾಣಗಳೂ ದೊರೆತವು. ಅವನ್ನು 'ಕರ್ಣಾಟದ ವೀರಕ್ಷತ್ರಿಯರು' ಮತ್ತು 'ಕನ್ನಡದ ನೆಲೆ' ಎಂಬ ಪುಸ್ತಕಗಳಲ್ಲಿ ವಿವರಿಸಿದ್ದೇನೆ.

ಕಾಲ್ಡವೆಲ್ಲ ಪ್ರಭೃತಿಗಳು 'ದ್ರಾವಿಡ' ಎಂಬ ಒಂದು ಜನಾಂಗವು ವೇದಪೂರ್ವಕಾಲದಿಂದ ಇಲ್ಲಿ ನೆಲಸಿದ್ದಿತೆಂದು ಪ್ರತಿಪಾದಿಸಿದ್ದಾರೆ. ಕರ್ಣಾಟ, ಆಂಧ್ರ, ತಮಿಳು, ತುಳು, ಕೊಡಗು, ಮಲೆಯಾಳ ಮೊದಲಾದವು ಆ ದ್ರಾವಿಡ ವರ್ಗಕ್ಕೆ ಸೇರಿದ ಜನಾಂಗಗಳೆಂದು ಅವರು ಹೇಳಿದ್ದಾರೆ. ಆದರೆ 'ದ್ರಾವಿಡ' ವೆಂಬ ಮಾತು ವೇದಗಳಲ್ಲಿ ಬರುವದಿಲ್ಲ. ಆದರೆ ಈ ಜನಾಂಗದ ಭಾಷೆಯ ಕುರುಹುಗಳು. ಕೆಲವು ಅಲ್ಲಿ ಇಲ್ಲಿ ಕಾಣಲು ಸಿಕ್ಕುತ್ತವೆಂಬುದು ನಿಶ್ಚಿತ. ಈ ಜನಾಂಗವು ಯದು-ತುರ್ವಶರದೆಂದು ನಾನು ಒಂದು ನಿರ್ಧಾರಕ್ಕೆ ಬಂದಿದ್ದೇನೆ. ಇವರ ಪೀಳಿಗೆಯೆ ಕರ್ಣಾಟಕಾಂಧ್ರತಮಿಳ ಮೊದಲಾದ ಶಾಖೋಪಶಾಖೆಗಳಾಗಿ ಮುಂದೆ ವಿಂಗಡಿಸಲ್ಪಟ್ಟಿತೆಂದು ನನ್ನ ಮನವರಿಕೆ ಆಗಿದೆ. ತುರ್ವಸುವಿನ ಸಂತತಿಯವರಾದ ಕಣ್ ಕರ್ಣ್ರೇ ಕರ್ಣಾಟದ ಮೊದಲಿಗರೆಂಬುದಕ್ಕೆ ಪುರಾಣ, ಸ್ಮೃತಿ, ಚಲುಕ್ಯ, ರಾಷ್ಟ್ರಕೂಟ, ಗಂಗ, ತುಳು (ವಿಜಯನಗರ) ಮೊದಲಾದ ಕಂನಾಡ ಅರಸುಮನೆತನಗಳ ಐತಿಹಾಸಿಕ ಪರಂಪರೆಯ ಸಂಪೂರ್ಣ ಬೆಂಬಲವು ದೊರೆಯುತ್ತಿರಲು, ನಮ್ಮಲ್ಲಿ ಕೆಲವರಿಗೆ ಇದನ್ನು ಒಪ್ಪಿಕೊಳ್ಳಲು ಇನ್ನೂ ಮನಸಾಗದಾಗಿದೆ. ಅವರು ಮೇಲಣ ಪ್ರಮಾಣಗಳನ್ನಾದರೂ ಖಂಡಿಸಿ ಅಲ್ಲಗಳೆಯಬೇಕು; ಇಲ್ಲವಾದರೆ ತಾವು ಒಪ್ಪಿಕೊಳ್ಳಲು ಅಡ್ಡಬರುವ ಸಂಗತಿಗಳನ್ನಾದರೂ ಬಿಡಿಸಿ ಹೇಳಬೇಕೆಂದು ನನ್ನ ಬಿನ್ನಹವಿದೆ. ತ್ರಿಷಷ್ಠಿ ಪುರಾತನರ ಉಗಮವೇನೆಂಬುದು ವೀರಶೈವ ರಿಗೂ ಅರಿಯದ ಮಾತಾಗಿದ್ದಿತು. ಅದನ್ನು ಕುರಿತು ನನಗೆ ದೊರೆತ ಹೊಸ ಬೆಳಕನ್ನು 'ಶಿವರಹಸ್ಯ'ದಲ್ಲಿ ಕಾಣಿಸಿದ್ದೇನೆ. ನನ್ನ ತಿಳುವಳಿಕೆಯಂತೆ ಶಿವನ ನಿಜಸ್ವರೂಪದ ಕೆಲವೊಂದು ವಿಚಾರಗಳನ್ನು ವಿವರಿಸಿದ್ದೇನೆ. ನನಗೆ ತಿಳಿದ ಈ ಸಂಗತಿಗಳ ಬಲದಿಂದ ಕರ್ಣಾಟ-ಮಹಾರಾಷ್ಟ್ರದ ಸಂಸ್ಕೃತಿಗಳೊಳಗಿನ

ತೊಡಕಿನ ಸಮಸ್ಯೆಗಳಿಗೆ ಬಹಳ ಸಮರ್ಪಕವಾಗಿ ಉತ್ತರವು ದೊರೆಯುತ್ತಿದೆ. ಕಂನಾಡು-ನುಡಿಗಳ ಐತಿಹಾಸಿಕ ಬೆಳಕು ಇಲ್ಲವೆ 'ಮಹಾರಾಷ್ಟ್ರದ ಮೂಲವು' ಸರಿಯಾಗಿ ತಿಳಿಯಲಾರದೆಂಬ ಮಾತು ಈಗ ಅಲ್ಲಿಯ ವಿದ್ವಾಂಸರಿಗೂ ಒಪ್ಪಿಗೆಯಾಗತೊಡಗಿದೆ.

ಸಂಸ್ಕೃತಿಯ ಅಂಗೋಪಾಂಗಗಳಲ್ಲಿ ಭಾಷೆಯೂ ಒಂದು ಮಹತ್ವದ ವಿಷಯ. ನಾಡಿನ ಸಂಸ್ಕೃತಿಯ ಮಟ್ಟವನ್ನು ಅಲ್ಲಿಯ ಭಾಷೆಯಲ್ಲಿ ಚೆನ್ನಾಗಿ ಕಂಡುಹಿಡಿಯಬಹುದು. ಸಾಂಸ್ಕೃತಿಕ ಅಭ್ಯಾಸಕ್ಕಾಗಿ ಕಂನುಡಿಯ ಆಳದಲ್ಲಿ ನಾವು ಸೇರಿದ್ದುದು. ಭಾಷಾಶಾಸ್ತ್ರವಾಗಲಿ, ವ್ಯಾಕರಣವಾಗಲಿ ನನ್ನ ಮುಖ್ಯ ಗುರಿಯಲ್ಲ. ಆ ಅಭ್ಯಾಸದಲ್ಲಿ ಆನುಷಂಗಿಕವಾಗಿ 'ಕಂನುಡಿಯ ಹುಟ್ಟು', ಮತ್ತು 'ಕಂನುಡಿಯ ಜೀವಾಳ' ಗಳನ್ನು ಬರೆದುದಾಯ್ತು.

ಸತ್ಯವು ಅವ್ಯಕ್ತ; ಅಲೌಕಿಕ; ಸೂಕ್ಷ್ಮ; ಮತ್ತು ಗಹನವಾದ ಮಹತ್ತತ್ವ. ಅಲೌಕಿಕ ಸತ್ಯವು ಲೌಕಿಕ ರೂಪವನ್ನು ತಾಳಿದಾಗ ಅದು 'ನಿಜ'ವೆನಿಸುವದು. ನಿಜವಾದುದೇ ವಾಸ್ತವ. ವಾಸ್ತವವು ವಸ್ತುಗತ; ವ್ಯಕ್ತ. ಸತ್ಯವು ದೇಶ-ಕಾಲ-ಪರಿಸ್ಥಿತಿಗಳ ಮೇರೆಯಲ್ಲಿ ವ್ಯಕ್ತವಾದಾಗ ಅದು ವ್ಯವಹಾರ್ಯವಾಗುವುದು. ಇತಿಹಾಸದ ಜ್ಞಾನವಿಲ್ಲದೆ ಯಾವ ನಿಜದ—ವ್ಯವಹಾರದ ಜ್ಞಾನವೂ ಆಗಲಾರದು. ಏಕೆಂದರೆ ದೇಶ-ಕಾಲ-ಪರಿಸ್ಥಿತಿಗಳ ಭೂಮಿಕೆಯಲ್ಲಿ ಅವತರಿಸಿದ ಸತ್ಯವೆ ಇತಿಹಾಸ. ಇತಿಹಾಸವೆಂದರೆ ನಡೆ. 'ನಡೆ'ಗೇ 'ಜಗತ್' ಎಂಬ ಸಂಸ್ಕೃತ ಹೆಸರು. ( ಗಚ್ಛತಿ ಇತಿ ಜಗತ್ ) ಆದಕಾರಣ ನಡೆಯ ನಿಜವನ್ನರಿಯಲು ಇತಿಹಾಸ ಅಭ್ಯಾಸವು ಬೇಕು. ಸಂಸ್ಕೃತಿಯೆಂಬುದು ನಡೆವಳಿಯ ಫಲ. ಈ ದೃಷ್ಟಿಯಿಂದಲೆ ನಾನು ಇತಿಹಾಸದ ಕಡೆಗೆ ಒಲೆದುದು.

ಸಾಹಿತ್ಯವೂ ಇತಿಹಾಸದ ಒಂದು ರೂಪ. ಏಕೆಂದರೆ ದೇಶ-ಕಾಲ ಪರಿಸ್ಥಿತಿಯ ಸನ್ನಿವೇಶಗಳಲ್ಲಿ ಅಡಕವಾದ ಸತ್ಯವನ್ನೇ ಸಾಹಿತ್ಯವೂ ವರ್ಣಿಸುವುದು. ಕತೆ, ಕಾದಂಬರಿ, ನಾಟಕ ಇಲ್ಲವೆ ಯಾವ ಮಹಾಕಾವ್ಯವಿರಲಿ, ಅದು ಆದ, ಆಗಬಹುದಾದ ಇಲ್ಲವೆ ಆಗಬಲ್ಲ ಘಟನೆಯ ವರ್ಣನೆಯೇ ಆಗಿರುತ್ತದೆ. ಇದಕ್ಕೆ ಹೊರಗಿನ ಸಂಗತಿಯು ಸಾಹಿತ್ಯಸೃಷ್ಟಿಯ ವಿಷಯವ ಆಗಲಾರದು. ಇತಿಹಾಸಕ್ಕೂ ಸಾಹಿತ್ಯಕ್ಕೂ ಇರುವ ವ್ಯತ್ಯಾಸವು ಅದನ್ನು ಬರೆವ ರೀತಿಯಲ್ಲಿ ಮುಖ್ಯವಾಗಿ ಇದೆ. ಆದಕಾರಣ ನಿಜವನ್ನು ಅರಿಯಬೇಕೆಂ

ಒವನು ಸಾಹಿತಿಯಾಗಿರಬೇಕಾಗಿಲ್ಲವಾದರೂ ಸಾಹಿತ್ಯದ ಬೆಂಬಲವನ್ನು ಪಡೆಯಲೇ ಬೇಕು.

ಜನಗಳಿಗೆ ನಿಜವನ್ನು ತೋರಿ ತಮ್ಮ ತಮ್ಮ ಬಗೆಯಿಂದ ಸತ್ಯದ ಅರಿವನ್ನುಂಟುಮಾಡಿಕೊಡುವುದು ಇತಿಹಾಸ ಸಾಹಿತ್ಯಗಳಗುರಿಯಾಗಿರಬೇಕು. ಸತ್ಯದ ಗುತ್ತಿಗೆ ಯಾರಿಗೆ ಒಬ್ಬರಿಗೇ ಇಲ್ಲ. ಸಾಹಿತಿಗಳು, ಸಂಶೋಧಕರು, ರಾಜಮಂತ್ರ ಪ್ರವೀಣರು ಮೊದಲಾದವರು ನಿಜದ ಒಂದೊಂದು ಅಂಗದ ಉಪಾಸಕರು. ಆದರೆ ಉಳಿದವರನ್ನು ಹೀಯಾಳಿಸಿ ತಾವೇ ಮಿಗಿಲೆಂದು ಹುಯಿಲು ಎಬ್ಬಿಸುವುದು, ಬಾಲ ಕಳೆದುಕೊಂಡು ತನ್ನಂತೆಯೆ ಆಗಿರೆಂದು ಕೂಗುವ ಇಸೋಪನೀತಿಯ ನರಿಯ ಲೆಕ್ಕವಾಗುವುದು. ಸೃಷ್ಟಿಯಲ್ಲಿ ನಿರರ್ಥಕ ವಾದುದು ಅವುದೂ ಇಲ್ಲ. ಎಲ್ಲಕ್ಕೂ ತಾರತಮ್ಯದಿಂದ ಒಂದೊಂದು ಬೆಲೆಯಿದೆ. ಆದರೆ ಆ ಬೆಲೆಯು ಯಾವುದು ಎಂಬುದನ್ನು—ಕಾಲಕಾಲಕ್ಕೆ ಆ ಬೆಲೆಯಲ್ಲಿ ಆಗುವ ಏರಿಳಿತಗಳನ್ನು ಇತಿಹಾಸವು ತನ್ನ ತಕ್ಕಡಿಯಿಂದಲೂ ಸಾಹಿತ್ಯವು ತನ್ನ ಧ್ವನಿಯಿಂದಲೂ ಜನಗಳಿಗೆ ಸ್ಪಷ್ಟಪಡಿಸಬೇಕಾಗುತ್ತದೆ. ವ್ಯವಹಾರದಲ್ಲಿ ಎಲ್ಲಕ್ಕೂ ಯಾವಾಗಲೂ ಒಂದೇ ಬೆಲೆ ಇರುವುದಿಲ್ಲ. ಆದರೆ ಈ ಬೆಲೆಗಳು ಯಾವುದನ್ನು ಹೊಂದಿಕೊಂಡು ಹೆಚ್ಚು ಕಡಿಮೆಯಾಗುತ್ತವೆ, ಎಂಬುದನ್ನು ತಿಳಿಯದವರು ಲೋಕಕ್ಕೆ ಏನನ್ನೂ ಹೇಳಲು ಸಮರ್ಥರಾಗಲಾರರು. ಈ 'ಅರ್ಥ'ಶಾಸ್ತ್ರದಲ್ಲಿ ಮೂಲ ಬಂಗಾರದಂತಹ ಮಾತು ಅವುದು ಎಂಬುದನ್ನು ಮೊದಲು ಮನಗಾಣಬೇಕಾಗುತ್ತದೆ. ಇದನ್ನು ಅರಿತು ಕುರಿತಲ್ಲದೆ ಆಡಿದ ನುಡಿ, ಹೇಳಿದ ಮಾತು ಎಲ್ಲರಿಗೂ ಹಳವಂಡ.

× × × ×

ಇದೊಂದು ಸಣ್ಣ ಜೀವದ ಒಂದು ಸಣ್ಣ ಕತೆ. ಇಲ್ಲಿಗೆ ನನ್ನ ಕತೆ ಮುಗಿಯುತ್ತ ಬಂದಿದೆ. ಕತೆ ಹೇಳುವ ಬುದ್ಧಿ ತಲೆದೋರುವುದು, ಕತೆ ಮುಗಿಯ ಬಂದ ಕಾಲದ ಲಕ್ಷಣವಂತೆ. ಆದರೆ ನಾನಿನ್ನೂ ನಾಲ್ವತ್ತು ಬಾಳಬೇಕೆಂದುದರಿಂದ ಇದನ್ನು ಬರೆಯುವ ಇಚ್ಛೆಯಿರಲಿಲ್ಲ: ಆದರೆ ಸಂಪಾದಕರ ಒತ್ತಾಯಕ್ಕೆ ಬರೆಯಲೇಬೇಕಾಯಿತು.

ನಾನೆಂದು ಸಾಹಿತಿ. ಏಕೆಂದರೆ ಎಂತಹದೆ ಆಗಲಿ, ಒಂದು ಕತೆಯನ್ನು ಬರೆದಿದ್ದೇನೆ. ಬಾಳುವೆಯೆ ನನ್ನದೊಂದು ಭಾವಗೀತ. ಈ ಅಲ್ಪ 'ಕೃತಿ'ಯನ್ನು

ಕಂನಾಡಿಗರ ಅಡಿಯಲ್ಲಿ ಮುಡಿಸಿದ್ದೇನೆ. ನನ್ನ ಪ್ರಚೋದಕ ಶಕ್ತಿ ನಾನು ಪಾಠಮಾಡಿದ 'ಗೋವಿನಕತೆ' '....ನೀನಾರಿಗಾದೆ ಎಲೆ ಮಾನವಾ' ಎಂಬುದು. ನನ್ನ ಮಾರ್ಗದಲ್ಲಿ ನಾನು ಸಾಧಿಸಬೇಕೆಂದುದು ಶಬ್ದಕ್ಕೂ ಅರ್ಥಕ್ಕೂ (ಎಂದರೆ ಇರುವಿಗೂ) ಅಂತರವು ಉಳಿಯಬಾರದೆಂಬುದು 'ನಿಮ್ಮ ಗ್ರಂಥಗಳು ನಿಮ್ಮ ಗುರಿಯನ್ನು ಎಷ್ಟರ ಮಟ್ಟಿಗೆ ಸಾಧಿಸಿವೆ?' ಎಂದು ಇನ್ನೂ ಒಂದು ಸಂಪಾದಕರ ಪ್ರಶ್ನೆ. ನನ್ನ 'ಕೃತಿ'ಯಲ್ಲಿ ಇದು ಬಹುಮಟ್ಟಿಗೆ ಕೈಗೂಡಿದೆ. 'ಇದರ ಕ್ರಿಯೆ ಪ್ರತಿಕ್ರಿಯೆ ಏನಾಗಿದೆ?' ಎಂಬ ಪ್ರಶ್ನೆಗೆ, ನನಗೆ ಇದು ಕಲ್ಯಾಣವನ್ನು ಮಾಡಿದೆ; ಆತ್ಮಶಾಂತಿಯನ್ನಿತ್ತಿದೆ' ಎಂದು ಉತ್ತರ. 'ನಿಮ್ಮ ಜೀವನದ ಫಲಶ್ರುತಿಯೇನು?' ಎಂದರೆ ಸಮಾಜದ ಹಿನ್ನೆಲೆಯಿಲ್ಲದೆ ವ್ಯಕ್ತಿಯು ಅರ್ಥವಿಹೀನ. ಅದು ಸಾರ್ಥವಾಗಬೇಕಾದರೆ ಸಮಾಜಕ್ಕಾಗಿ ತನ್ನನ್ನು ಯಾವ ಬಗೆಯಿಂದಲಾದರೂ ಉಪಯುಕ್ತನನ್ನಾಗಿ ಮಾಡಿಕೊಳ್ಳಬೇಕು: 'ಸರ್ವಭೂತೇಷು ಆತ್ಮಾನಂ; ಸರ್ವಭೂತಾನಿ ಆತ್ಮನಿ' ಎಂಬುದನ್ನು ಆಚರಿಸಿ ಅರಿತುಕೊಳ್ಳಬೇಕು, ಎಂಬುದು.

'ಸಾಹಿತ್ಯವು ಯಾವ ದೃಷ್ಟಿಯಿಂದ ಸಾಗಬೇಕು?' ಎಂಬ ಪ್ರಶ್ನೆಗೆ ಅದು 'ಕೃತಿ'ಯಾಗಬೇಕೆಂದೇ ನನ್ನ ಉತ್ತರ. ಅದೊಂದು ರಾಮ, ಕೃಷ್ಣ, ಗಾಂಧೀಜಿ ಮೊದಲಾದವರಂತಹ ಮಹಾ-ಕೃತಿ-ಕಾವ್ಯವಾಗಬೇಕೆಂಬ ಮಹತ್ವಾ-ಕಾಂಕ್ಷೆಯು ಪ್ರತಿಯೊಬ್ಬರದಾಗಿರಬೇಕು. ಕೊನೆಗೆ ಅದೊಂದು ಸಣ್ಣ ಭಾವ ಪೂರ್ಣವಾದ (ಜೀವನ) ಗೀತವಾದರೂ ಆಗಲೇಬೇಕು. ಆದರೆ 'ನಾಟಕ' ವಾಗಕೂಡದು. ಇರುತ್ತ ಬರೆಯಬೇಕು; '**ಆಡ' ಬೇಕು** ಬರೆ ಮಾಡು ವುದಾಗಲಿ, ಗೀಚುವುದಾಗಲಿ ಹುಸಿ, ಟೊಳ್ಳು ಶಬ್ದ. ಇರುತ್ತ ಬರೆಯದೆ ಬರೆಯುವುದಕ್ಕಾಗಿ ಇರುವುದು ತನಗೂ ಲೋಕಕ್ಕೂ ಕೂಡಿಯೇ ಮೋಸ. ಎರಡಿಲ್ಲದ ಬಾಳು ಗುರಿಯಾದರೇನೇ ನಾಡಿನ ಏಳ್ಗೆಯಾಗುವುದು ಎಂಬುದು ನನ್ನ ನಂಬುಗೆ.

ಇದರ ಸಿದ್ಧಿಗೆ ಅಭಯ ವೃತ್ತಿಯ ಸಾಧನೆಯು ಅವಶ್ಯಕ. ಭೀತಿಯು ದೂರವಾದ ಪ್ರಮಾಣದಲ್ಲಿ ನಮಗೆ ಸತ್ಯದರ್ಶನವಾಗಬಲ್ಲುದು. ಅಭಯವೃತ್ತಿ ಯೆಂದರೆ ಉದ್ದಾಮತನವಲ್ಲ. ಧೀರರು ಎಂದರೆ ತಿಳುವಳಿಕೆಯುಳ್ಳವರು.

ಅಲ್ಲದವರು ಭಯದಿಂದ ಮುಕ್ತರಾಗಲಾರರು. ಉದ್ದಾಮತನದಿಂದ ಬಾಯಿಗೆ ಬಂದುದನ್ನು ಮಾತಾಡುವುದೂ ಲೆಕ್ಕಣಿಕೆ ಓಡಿದಂತೆ ಗೀಚುವುದೂ ಈಗ ಪ್ರಗತಿಯ ಲಕ್ಷಣವೆಂದು ತಿಳುವಳಿಕೆಯಾಗಿದೆ. ವಿಚಾರಿಯೇ (ವಿ+ಚರ) ಪ್ರಗತಿಶೀಲನಾಗಿರಬಲ್ಲನು. ಇದ್ದಲ್ಲಿಯೆ ನಿಲ್ಲಬೇಕೆಂಬವನು ಅವಿಚಾರಿ. ಅಭ್ಯಾಸ, ವಿಚಾರ, ವಿಮರ್ಶೆಗಳ ನೆರವನ್ನು ಪಡೆಯದೆ 'ಕೃತಿ' ಬೆಲೆಯುಳ್ಳುದೂ ಆಗಲಾರದು. ಅದು ಬಹಳ ದಿನ ಬಾಳಲಾರದು.

ಶಂ. ಬಾ. ಜೋಶಿ

# ತಿರುಕನ ಹಾಡು ++ ++ ++ ++

## ಸೋ

ನಾನೊಬ್ಬ ತಿಳಿತಿಳುವಿನ ತಿರುಕ. ತಿರುಳುಗನ್ನಡ ತಿರುಕ. ಕಾಡಿ ಬೇಡುವವನಲ್ಲ. ಬೇಡಿ ಬಾಳಿದವನಲ್ಲ. ನೋಡಿ ಬಿಟ್ಟವನಲ್ಲ. ಮಹಾಕವಿಗಳು ಒಗೆದು ಬಿಟ್ಟಿದ್ದ ಎಂಜಲನ್ನು ಪ್ರಸಾದವೆಂದೆತ್ತಿ ತಂದು, ಕನ್ನಡಕ್ಕಾಗಿ ಹಸಿದ ಮಕ್ಕಳೆಲ್ಲರನ್ನು ಕರೆದುಕೊಂಡ ತಿರುಕ. ಇದಕ್ಕಾಗಿ ತಲೆತಿರುಕನೊಬ್ಬನನ್ನು ತಳಕು ಹಾಕಿಕೊಂಡ ತಿರುಕ. ಹೊರಗನ್ನು ನೋಡಿ, ಒಳ-ಗನ್ನರಿಯದವರ ಒಳಗನ್ನರಿಯಬೇಕೆಂದು ತಿರುಗಾಡಿದ ತಿರುಕ. ಈ ಹಂಚಿನ ಮೈಬಣ್ಣದ ತಿರುಕನನ್ನು ಮಿಂಚಿನಬಳ್ಳಿಯ ನನ್ನ ಮಿತ್ರರು, ಮಿಂಚಿದ ಸಾಹಿತಿಗಳ ಸಾಲಿನಲ್ಲಿ ನಿಲ್ಲಿಸಲು ಏಕೆ ಕರೆದರೋ ತಿಳಿಯದು. ಕರೆದರು 'ಓ' ಎಂದೆ. ಹೂವಿನಿಂದ ನಾರು ಸ್ವರ್ಗಕ್ಕೆಂದರು. 'ಹೂ' ಎಂದೆ. ನಾನು ಕವಿಯಲ್ಲ. ಕವನಗಾರನಲ್ಲ. ಕತೆಗಾರನಲ್ಲ. ಆದರೂ ನಾನೊಂದು ಹಾಡು ಹಾಡುವೆ. ಪ್ರಾಸವಿಲ್ಲದ ಹಾಡು. ಮೌನದ ಹಾಡು. ಅದನ್ನು ನೆನೆದಾಗೆಲ್ಲ ಉದುರುವ ಕಂಬನಿಗಳೇ ಅದರ ನುಡಿಗಳು. ನನ್ನ ಹಾಡನ್ನು ಬರೆದುಳಿಸಬೇಕೆಂಬ ಹಂಬಲ

---

"ಶ್ರೀಮಾನ್ ಉತ್ತಂಗಿ ಚೆನ್ನಪ್ಪನವರು ನಮ್ಮ ಬಿನ್ನಹಕ್ಕೆ ಮನ್ನಣೆಯನ್ನಿತ್ತು, ತಮ್ಮ ಕ್ರಾಂತಿಕಾರಕವಾದ ಚರಿತ್ರೆಯನ್ನು ಸುಮಾರು ಮುದ್ರಣದ ೩೨-೩೬ ಪುಟದಷ್ಟು ಬರೆದುಕಳಿಸಿದ್ದಾರೆ. ನಮ್ಮ ಪ್ರಶ್ನೆಗಳಿಗೂ, ಈ ಪುಸ್ತಕಕ್ಕೂ ಸಂಬಂಧಿಸಿದ ಸಾಹಿತ್ಯ ಚರಿತ್ರೆಯನ್ನು ಇಲ್ಲಿ ಕೊಡಲಾಗಿದೆ. ಉಳಿದುದನ್ನು ಇನ್ನೊಂದು ಭಾಗದಲ್ಲಿ ಕೊಡುವ ಯೋಚನೆ ಇದೆ.

—ಸಂಪಾದಕ

ನನ್ನಲ್ಲಿರಲಿಲ್ಲ. ಆದರೂ ಬರೆದೆ. ಮುಂದಣ ಪೀಳಿಗೆಯ ಏಳಿಗೆಗಾಗಿ; ಸುಖಜೀವಿಗಳಾದ ಸಾಹಿತಿಗಳಿಗಾಗಿ ಅಲ್ಲ, ಕಷ್ಟ ಜೀವನದ ಕನ್ನಡ ಸಾಹಿತಿಗಳಿಗಾಗಿ, ಲಕ್ಷ್ಮಿಯು ಬಿಟ್ಟುಹೋದ ಮನೆಯಲ್ಲಿ ಹುಟ್ಟಿದ ಸರಸ್ವತಿಯ ಪುತ್ರರಿಗಾಗಿ. ಬಡತನದ ಗೋಳಿನಲ್ಲಿ ಬಾಳುವವರಿಗಾಗಿ; ಸಾಹಿತ್ಯಸೇವೆಯಲ್ಲಿ ಕಾರಣಾಂತರಗಳಿಂದ ಕಂಗೆಟ್ಟ ಕನ್ನಡಿಗರಿಗಾಗಿ.

## ೬ ಶ್ಲೋಕ (ಶೋಕ)

### (ಸಾಹಿತ್ಯ ಸೇವೆಯಲ್ಲಿ)

ಕ್ರಾಂತಿಕಾರಿಯಾದ ನನ್ನ ಸಾಹಿತ್ಯದ ಹಾಡಾದರೂ ಇತರ ಶ್ಲೋಕಗಳಂತೆ ಶೋಕಮಯವಾಗಿದೆ. ನನ್ನ ಮನೋಧರ್ಮವನ್ನರಿಯದೆ ಈ ಹಾಡನ್ನು ತಿಳಿದುಕೊಳ್ಳಲು ಸಾಧ್ಯವಿಲ್ಲದುದರಿಂದ ಆ ಬಗೆಗೆ ಒಂದೆರಡು ಮಾತುಗಳನ್ನು ಇಲ್ಲಿ ಹೇಳುತ್ತೇನೆ. ನಾನು ಹದಿನೆಂಟು ವಯಸ್ಸಿನವನಾದಾಗ ನನ್ನಲ್ಲಿ ಅಪೂರ್ವವಾದ ಒಂದು ಜಾಗ್ರತಿಯುಂಟಾಯಿತೆಂದು ಹಿಂದೆ ಹೇಳಿದ್ದೇನೆ. ಭಗವದ್ಗೀತೆ (ಅಧ್ಯಾಯ ೨. ೬೯) ಯಲ್ಲಿ ಹೇಳಿದಂತೆ 'ಜಗತ್ತಿನ ರಾತ್ರಿಯು ಮುನಿಗೆ ಹಗಲೂ ಜಗತ್ತಿನ ಹಗಲು ಮುನಿಗೆ ರಾತ್ರಿಯೂ ಆಗಿತೋರುವದೆ'ಂಬ ಮಾತು ನನ್ನ ವಿಷಯದಲ್ಲಿ ಅಕ್ಷರಶಃ ಸತ್ಯವಾಗಿದೆ ಎಂದು ಹೇಳಿದರೆ ಅತ್ಯುಕ್ತಿಯಾಗದು, ಮುನಿಯ ರಾತ್ರಿ ಎಂದರೆ ನನ್ನ ಜಾಗ್ರತಾವಸ್ಥೆ. ಈ ಸ್ಥಿತಿಯಲ್ಲಿ ಹೊಸ ವಿಚಾರಗಳು ಹುಟ್ಟುವದು ಕಡಿಮೆ. ಮುನಿಯ ಹಗಲೆಂದರೆ ನನ್ನ ಸ್ವಪ್ನಾವಸ್ಥೆ. ಈ ಸ್ಥಿತಿಯಲ್ಲಿ ಹೊಸ ವಿಚಾರ ತರಂಗಗಳೆದ್ದು ಮಿಂಚಿನ ಕುದುರೆಯಂತೆ ಬಹುವೇಗದಿಂದ ಸಾಗಹತ್ತುವವು. ಇವುಗಳನ್ನು ಹಿಡಿಯು-ವದಕ್ಕೆ ರೇಡಿಯೋ ಯಂತ್ರದಂತಹ ಯಾವದೊಂದು ಸಾಧನೆ ಇಲ್ಲವೆ ಅತ್ಯಂತ ತೀಕ್ಷ್ಣವಾದ ಜ್ಞಾಪಕ ಶಕ್ತಿ ನನ್ನಲ್ಲಿರುತ್ತಿದ್ದರೆ ವಿಲಕ್ಷಣವಾದ ಒಂದು ಗ್ರಂಥ ಭಾಂಡಾರವೇ ನನ್ನಿಂದ ಪ್ರಕಾಶಕ್ಕೆ ಬರುತ್ತಿತ್ತೆಂದು ಕಂಠೋಕ್ತವಾಗಿ ಹೇಳುತ್ತೇನೆ. ಬೆಳಗಾದೊಡನೆ ಈ ಎಲ್ಲ ಯೋಚನೆಗಳು ಹರಿದುಹೋಗಿ ಮನಸ್ಸು ಶುಭ್ರವಾದ ಆಕಾಶದಂತಾಗುವದು. ನನ್ನ ಸ್ವಪ್ನಾವಸ್ಥೆಯಲ್ಲಿ ಹೊಳೆದ ಎಷ್ಟೋ ಬೆಲೆಯುಳ್ಳ ವಿಚಾರಗಳು ಒಮ್ಮೆ ಮರೆತುಹೋದರೆ ತಿರುಗಿ ಬಾರವು. ಇಂತಹ ಸಂಕಟಿ ಸ್ಥಿತಿಯನ್ನು ಅನುಭವ ಮಾಡಿದ ಒಬ್ಬ ಫ್ರೆಂಚ ಪತ್ರಿಕಾ

ಕರ್ತನು ತಿರುಗಿ ಬಾರದ ಅವೌಲ್ಯವಾದ ಒಂದು ಯೋಚನೆಗಾಗಿ ಆತ್ಮಹತ್ಯೆ ಮಾಡಿಕೊಂಡ ಉದಾಹರಣೆಯು ಇತಿಹಾಸದಲ್ಲಿದೆ.

ನನ್ನ ಪ್ರೇಮದ ವಿಷಯವೆಂದರೆ ತತ್ವಶಾಸ್ತ್ರ ನಾನು ಇಪ್ಪತ್ತೈದು ವರ್ಷ ಪ್ರಾಚ್ಯ ಹಾಗೂ ಪಾಶ್ಚ ತತ್ವದರ್ಶನಗಳ ವ್ಯಾಸಂಗ ಮಾಡಿರುವೆ. ತತ್ವ ಶಾಸ್ತ್ರವು ಕೊನೆಗೆ ಗಣಿತಶಾಸ್ತ್ರದಲ್ಲಿ ಪರ್ಯವಸಾನ ಹೊಂದುವದೆಂದು ನನ್ನ ಮತ. ಹೀಗಾಗಿ ಒಂದುವೇಳೆ ಬರೆದಿದ್ದರೆ 'Mathematics of Philosophy' ಎಂಬ ಗ್ರಂಥವೊಂದನ್ನು ಬರೆಯಬೇಕಾಗಿತ್ತು. ಆದರೆ ದರ್ಶನಗಳೆಲ್ಲ ಏಕದೇಶೀಯವಾಗಿದ್ದು ಪ್ರತಿ ಒಂದು ತತ್ವವು ಕೊನೆಗೆ ನೀಂಗಡೆ ಇಲ್ಲದೆ ಹೋಗುವದೆಂದು ತಿಳಿದುಬಂದುದರಿಂದ ಆ ವಿಷಯವಾಗಿ ನನ್ನಲ್ಲಿ ಅತ್ಯಂತ ಜಿಗುಪ್ಸೆ ಉಂಟಾಯಿತು. ನನಗೆ ಇಷ್ಟವಿದ್ದ ತತ್ವಶಾಸ್ತ್ರದ ಹಾಡೇ ಹೀಗಾದ ಬಳಿಕ ಇಷ್ಟವಿಲ್ಲದ ಭಾಷಾಶಾಸ್ತ್ರವಂತೂ ಬಹುದೂರ ಉಳಿಯಿತು. ಸಾಹಿತ್ಯಕ್ಕೂ ನನಗೂ ಇರುವ ಸ್ನೇಹ, ಹಾವಿಗೂ ಹದ್ದಿಗೂ ಇದ್ದಂತೆ. ಹೀಗೆ ವಿಷಯವೂ ವಿಷಯ ಸಾಧನವೂ ನನ್ನ ಪಾಲಿಗೆ ಶೂನ್ಯವಾಗಿ ಹೋದುದರಿಂದ ಗ್ರಂಥರಚನೆಯನ್ನು ಬಿಟ್ಟು ಆತ್ಮಜ್ಞಾನ ಮಾಡಿಕೊಂಡು ಸದ್ದಿಲ್ಲದೆ ಒಂದು ದಿನ ಈ ಲೋಕವನ್ನು ಬಿಟ್ಟು ಹೋದರಾಯಿತು. ಎಂದು ನನ್ನೊಳಗೆ ನಿಶ್ಚರ್ಷೆ ಮಾಡಿಕೊಂಡೆ. ಹೀಗೆ ಭಗ್ನಾಶನಾಗಿ ಸಾಗುತ್ತಿದ್ದ ನನ್ನ ಜೀವನದ ಹಾದಿಯಲ್ಲಿ ಸರ್ವಜ್ಞನೆಂಬ ತಿರುಕನ ಸಂದರ್ಶನವಾಯಿತು. ಉಭಯತರ ಹಾಡುಗಳು ಒಂದೇ ತರದವು-ಗಳೆಂದು ಗೊತ್ತಾಯಿತು. ಆಗ ನನ್ನನ್ನು ಅವನಲ್ಲಿ ಕಂಡೆ. ಇಬ್ಬರಿಗೂ ಮೇಳವಾಯಿತು. "ಕರಿಗೆ ಕರಿ ಕೂಡಿ"ದಂತಾಗಿ ಪರಸ್ಪರರಲ್ಲಿ 'ಹಿರಿದು ಸ್ನೇಹ' ಗಳುಂಟಾದವು. ಪ್ರಿಯನು ಪ್ರೇಯಸಿಯ ಭಾಷೆಯನ್ನು ಕಲಿಯುವಂತೆ ನಾನು ಸರ್ವಜ್ಞನಿಂದ ಸರ್ವಜ್ಞನಿಗಾಗಿ ಕನ್ನಡವನ್ನು ಕಲಿತೆ. ಕನ್ನಡ ವ್ಯಾಕರಣ, ಛಂದಸ್ಸು, ಕಾವ್ಯ, ಅಲಂಕಾರ ಮುಂತಾದ ಶಾಸ್ತ್ರಗ್ರಂಥಗಳನ್ನು ಓದಿದ್ದು, ಸರ್ವಜ್ಞನ ಕಾರ್ಯವನ್ನು ಕೈಕೊಂಡ ನಂತರ. ನಾನು ವೀರಶೈವಧರ್ಮವನ್ನರಿತುಕೊಳ್ಳಲೆತ್ನಿಸಿದ್ದು ಸರ್ವಜ್ಞನಿಗಾಗಿಯೇ. ಇದೇ ಸಮಯಕ್ಕೆ "ಜ್ಞಾನವೆಂದರೆ ಕ್ರಿಯೆ, ಕ್ರಿಯೆ ಎಂದರೆ ಜ್ಞಾನ"ವೆಂದು ನನಗೆ ಮನವರಿಕೆಯಾದುದರಿಂದ ಕ್ರಿಯಾರಹಿತವಾದ ತತ್ವವಿಚಾರಕ್ಕೆ ವಿಮುಖನಾಗಿ ಕ್ರಿಯಾಸಹಿತವಾದ ಅನುಭವಕ್ಕೆ ಅಭಿಮುಖಿಯಾದೆ. ಮುತ್ತು ಕಳೆದುಕೊಂಡವನಿಗೆ ಮಾಣಿಕವು ದೊರೆತಂತಾಯಿತು. ನನ್ನಿಂದ ಶೋಧಿಸಲ್ಪಟ್ಟ "ಅನುಭವ

ಮಂಟಪವು " ನನಗೆ ನೆರೆಮನೆಯಾಯಿತು. " ಅನುಭವಿಯ ವೇದವೇ ವೇದ"ವೆಂಬ ಸರ್ವಜ್ಞನ ಅನುಭಾವಸೂತ್ರವು ನನಗೆ ಮಂಗಲಸೂತ್ರ-ವಾಯಿತು. ಅನುಭಾವದ ಆಗರಗಳಾದ ಉಪನಿಷತ್ತು, ಭಗವದ್ಗೀತೆ, ವಚನ ಶಾಸ್ತ್ರ ಮುಂತಾದ ಉದ್ಗ್ರಂಥಗಳು ನನ್ನ ಪ್ರೀತಿಗೆ ಪಾತ್ರವಾದವು. ಪ್ಲೇಟೋ ಕ್ಯಾಂಟ್, ಬ್ರ್ಯಾಡ್ಲೆ ಮುಂತಾದವರ ಮೇಲಿದ್ದ ಪ್ರೇಮವು ವಿಲ್ಯಮ್‌ಜೇಮ್ಸ್, ಬರ್ಗ್‌ಸನ್, ಬೊಹಿಮೆ ಮುಂತಾದ ಅನುಭಾವಿಗಳತ್ತ ಹೊರಳಿತು. ಸರ್ವಜ್ಞನ ಗ್ರಂಥವು ನನ್ನ ಓಂ ಪ್ರಥಮ ಸಾಹಿತ್ಯವಾಯಿತು.

ಇತ್ತ ಸರ್ವಜ್ಞನಿಗಾಗಿ ನಾನು ಕನ್ನಡ ಭಾಷಾಭ್ಯಾಸವನ್ನು ಪ್ರಾರಂಭಿಸಿ-ದಾಗ ಅತ್ತ ಸ್ವಾತಂತ್ರ್ಯದ ಯುದ್ಧವೂ ಬಹುಭರದಿಂದ ನಡೆಯುತ್ತಿತ್ತು. ಆ ಸಮಯದಲ್ಲಿ ಒಂದು ಕೈಯಲ್ಲಿ ಲೇಖನಿ ಮತ್ತೊಂದು ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಈ ಸಾಹಿತ್ಯಸೇವೆಯನ್ನು ಸಾಧಿಸಬೇಕಾಯಿತು. ಸರ್ವಜ್ಞನ ಗ್ರಂಥಾಭ್ಯಾಸವು ೧೯೧೫ ರಲ್ಲಿಯೆ ಪ್ರಾರಂಭವಾಗಿದ್ದರೂ ಮೊತ್ತಮೊದಲು ನನ್ನಿಂದ ಹೊರಟ ಗ್ರಂಥವೆಂದರೆ " ಬನಾರಸಕ್ಕೆ ಬೆತ್ಲೆಹೇಮಿನ ವಿನಂತಿ " ಎಂಬದು. ಇದು ಮಿಶನರಿಗಳಿಗೂ ನನಗೂ ಉಂಟಾದ ತಿಕ್ಕಾಟದ ಸಮಯ ದಲ್ಲಿ ಹೊರಟದ್ದು. ಈ ಸಂದರ್ಭವನ್ನು ಕುರಿತು ಹಿಂದೆ ಸೂಚಿಸಿರುವೆ. ಮಿಶನ್ನಿನವರು ಇದನ್ನು ಮುದ್ರಿಸದೆ ಹೋದುದರಿಂದ ನಾನು ಸ್ವಂತ ಹಣ ವೆಚ್ಚಮಾಡಿ ಅಚ್ಚು ಹಾಕಿಸಬೇಕಾಯಿತು. ಇದು ೧೯೨೧ರಲ್ಲಿ ಧಾರವಾಡದ. ಕರ್ನಾಟಕ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಣವಾಗಿದೆ. ಇದೇ ಸಮಯಕ್ಕೆ ಹೊರಟ ಇನ್ನೊಂದು ಗ್ರಂಥವೆಂದರೆ " ಹಿಂದೂ ಸಮಾಜ ಹಿತಚಿಂತಕ " ಎಂಬುದು. ಸ್ವರಾಜ್ಯಸಂಘಟನೆಗೆ ವಿಘ್ನವಾಗಿರುವ ಜಾತಿಯ ದುರಭಿಮಾನ ವನ್ನು ಹೋಗಲಾಡಿಸುವದಕ್ಕಾಗಿ ಇದು ಬರೆಯಲ್ಪಟ್ಟಿದೆ. ಇದನ್ನು ಅನೇಕ ಶಾಸ್ತ್ರಾಧಾರಗಳಿಂದಲೂ ಶಿಲಾಶಾಸನಗಳ ಆಧಾರಗಳಿಂದಲೂ ಸಮರ್ಥಿಸಲು ಯತ್ನಿಸಿದ್ದೇನೆ. ಇದನ್ನು ಸಹ ಮಿಶನ್ನಿನವರು ಮುದ್ರಿಸಲೊಲ್ಲದೆ ಹೋದು-ದರೀದ ಸುಮಾರು ೫೦೦ರೂಪಾಯಿ ಸಾಲಮಾಡಿ ಅಚ್ಚುಹಾಕಿಸಬೇಕಾಯಿತು. ಇದು ೧೯೨೧ ರಲ್ಲಿ ರೋಮನ್ ಕಥೋಲಿಕ್ ಕೊಡಿಯಲ್ ಬಾಯಲ್ ಮುದ್ರಣಾಲಯದಲ್ಲಿ ಅಚ್ಚಾಗಿದೆ. ಮುಂದೆ ೧೯೨೫ರಲ್ಲಿ ಭರತಖಂಡದ ಭಾವಿ ಸಂತತಿಯನ್ನು ರಾಷ್ಟ್ರದ ಪ್ರಯೋಜನಕ್ಕಾಗಿ ಸಿದ್ಧಪಡಿಸುವದರ ದೆಸೆಯಿಂದ "ಮಕ್ಕಳ ಶಿಕ್ಷಣಪಟವು" ಹೊರಟಿದೆ. ಇದು ಬೆಂಗಳೂರಿನಲ್ಲಿ ಅಚ್ಚಾದುದು.

ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಸಮಯದಲ್ಲಿ ಕ್ರೈಸ್ತರು ಸಹ ದೇಶಾಭಿಮಾನಿಗಳೂ ರಾಷ್ಟ್ರಭಕ್ತರೂ ಆಗಿರಬೇಕೆಂಬುದನ್ನು ತೋರಿಸುವದಕ್ಕಾಗಿ ಮತಾಂತರ ಮಾಡಿದರೂ ದೇಶಾಭಿಮಾನದಿಂದ ತುಂಬಿತುಳುಕುತ್ತಿದ್ದ ಮಹಾರಾಷ್ಟ್ರದ ಪ್ರಸಿದ್ಧ ಕವಿಗಳಾದ ವಾಮನ ತಿಲಕ ಇವರ ಜೀವನ ಚರಿತೆಯನ್ನು ಪ್ರಕಾಶಕ್ಕೆ ತಂದಿರುವೆ. ಇದು ಕನ್ನಡ ಮಿಶನ್ನಿನವರಿಂದ ೧೯೨೭ ರಲ್ಲಿ ಮುದ್ರಣವಾಗಿದೆ. ಮುಂದೆ ೧೯೩೨ ರಲ್ಲಿ ಅನುಭವ ಮಂಟಪವು ಇಂಗ್ಲಿಷದಲ್ಲಿ ಹೊರಟಿದ್ದು ಶ್ರೀ ಆಲೂರ ವೆಂಕಟರಾಯರಿಂದ ಕನ್ನಡಿಸಲ್ಪಟ್ಟಿದೆ. ಹಿಂದೂ ಸಮಾಜ ಸುಧಾರಣೆಗಾಗಿ ಬರೆಯಲ್ಪಟ್ಟ ಇನ್ನೊಂದು ಗ್ರಂಥವೆಂದರೆ "ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ" ಎಂಬುದು. ಇದಕ್ಕೆ ಈಗ ಮುಂಬಯಿ ಮಂತ್ರಿಮಂಡಲದಲ್ಲಿ ಉಪಮಂತ್ರಿಗಳಾಗಿರುವ ಶ್ರೀ ಕೆ. ಎಫ್. ಪಾಟೀಲರೆಂಬವರು ಒಂದು ಮುನ್ನುಡಿಯನ್ನು ಬರೆದಿರುವರು. ಇದು ಮಹಾತ್ಮಾ ಗಾಂಧಿಯವರಿಗೆ ಅರ್ಪಿಸಲ್ಪಟ್ಟಿದ್ದು ೧೯೩೩ ರಲ್ಲಿ ಹುಬ್ಬಳ್ಳಿಯ ವಾಗ್ವಿಲಾಸ ಪ್ರೆಸ್ಸಿನಲ್ಲಿ ಮುದ್ರಣವಾಗಿದೆ. ಹಿಂದೂದೇಶದಲ್ಲಿ ಕ್ರೈಸ್ತ ಉಪದೇಶಕ್ಕಿಂತ ಕ್ರೈಸ್ತಜೀವನವೇ ಹೆಚ್ಚು ಅವಶ್ಯವೆಂದು ನನಗೆ ತೋರಿಬಂದ ಕಾಲದಲ್ಲಿ ಒಂದು ಗ್ರಂಥವನ್ನು ಬರೆದಿರುವೆ. ಇದು ಸಾಧು ಸುಂದರಸಿಂಗರ ದೃಷ್ಟಾಂತಗಳನ್ನೊಳಗೊಂಡಿದ್ದು ಇದಕ್ಕೆ "ದೃಷ್ಟಾಂತದರ್ಪಣ"ವೆಂದು ನಾಮಕರಣ ಮಾಡಲ್ಪಟ್ಟಿದೆ. ಇದು ೧೯೩೯ ರಲ್ಲಿ ಬಾಸೆಲ್ ಮಿಶನ್ನಿನವರಿಂದ ಮಂಗಳೂರಿನಲ್ಲಿ ಅಚ್ಚಾದದ್ದು. ಇನ್ನು ಸರ್ವಜ್ಞಸಾಹಿತ್ಯದ ವಿಷಯವಾಗಿ ಕೆಲವು ಮಾತುಗಳನ್ನು ಹೇಳಿ ಈ ವಿಷಯವನ್ನು ಸಮಾಪ್ತಗೊಳಿಸುತ್ತೇನೆ.

## ೭ ಶ್ಲೋಕ (ಶೋಕ)

### (ಸರ್ವಜ್ಞ ಸೇವೆಯಲ್ಲಿ)

ಕ್ರಾಂತಿಕಾರನಾದ ನನ್ನಿಂದ ಹೊರಟ ಎಲ್ಲ ಗ್ರಂಥಗಳು ಸ್ವಲ್ಪ ಹೆಚ್ಚು ಕಡಿಮೆ ಕ್ರಾಂತಿಕಾರಕಗಳಾಗಿವೆ. ಸರ್ವಜ್ಞನ ಸಾಹಿತ್ಯಗ್ರಂಥವೂ ಅದೇ ವರ್ಗಕ್ಕೆ ಸೇರುವದು. ಯಾಕಂದರೆ ಸರ್ವಜ್ಞನೂ ಒಬ್ಬ ಕ್ರಾಂತಿಕಾರ ಪುರುಷ. ನನಗೆ ಇವನ ಪರಿಚಯವಾದುದು ಒಬ್ಬ ವಿದೇಶೀಯ ಮಿಶನರಿಯಿಂದ. ನಾನು ಅವರಿಗೆ ಕನ್ನಡವನ್ನು ಹೇಳಿಕೊಡುತ್ತಿದ್ದ ಕಾಲದಲ್ಲಿ ಸರ್ವಜ್ಞನ ಬಗೆಗೆ ಅವರ

ಮಾಡಿದ ಪ್ರಶ್ನೆಗಳು ವಿಚಾರಾರ್ಹವಾಗಿದ್ದವು. ಮಾತ್ರವಲ್ಲದೆ ಅವನ ಉದಾತ್ತ ವಿಚಾರ, ಜಾತಿ, ಮೂರ್ತಿಪೂಜೆಖಂಡನೆ, ಮುಂತಾದವುಗಳನ್ನು ನೋಡಿ ಕ್ರೈಸ್ತ ಧರ್ಮದ ಪರಿಣಾಮ ಇವನ ಮೇಲೆ ಆಗಿರಬಹುದೆಂದು ಅವರು ಅಭಿಪ್ರಾಯಪಟ್ಟರು. ಅನುಭಾವಿಗಳೆಲ್ಲರು ಒಂದಿಲ್ಲೊಂದು ರೀತಿಯಿಂದ ಮಿಶನರಿಗಳಾಗುವುದರಿಂದಲೂ ವಚನಶಾಸ್ತ್ರದಲ್ಲಿ ಈ ತರದ ವಿಚಾರಗಳು ಧಾರಾಳವಾಗಿ ದೊರೆಯುವುದರಿಂದಲೂ ಕ್ರೈಸ್ತಧರ್ಮದ ಪರಿಣಾಮ ಆಗುವ ಅಗತ್ಯತೆ ಇಲ್ಲವೆಂದು ಹಿಂದಿನಿಂದ ನನಗೆ ತಿಳಿದುಬಂದಿತು. ಏನೇ ಇರಲಿ, ಸಾವಿರಾರು ಮೈಲು ದೂರದಿಂದ ಬಂದ ಮಿಶನರಿಯವರು ತಮ್ಮ ದೇಶದ ಕವಿಯಲ್ಲದ ಸರ್ವಜ್ಞನ ವಿಷಯಕ್ಕೆ ಇಷ್ಟು ಕುತೂಹಲವುಳ್ಳವರಾಗಲು ಕನ್ನಡಿ-ಗನೂ ಸರ್ವಜ್ಞನು ಜನಿಸಿದ ಜಿಲ್ಹೆಯಲ್ಲಿ ಜನಿಸಿದವನೂ ಆಗಿರುವ ನಾನು ಈ ವಿಷಯದಲ್ಲಿ ನಿಶ್ಚಿಂತನಾಗಿ ಕೈಮುಚ್ಚಿ ಕೂತುಕೊಳ್ಳುವುದು ಕೇವಲ ಲಾಂಛನವೆಂದು ತಿಳಿದು ಸರ್ವಜ್ಞನ ಸೇವೆಗೆ ಕಂಕಣಬದ್ಧನಾದೆ. ಇವನ ಕಾರ್ಯಕ್ಕೆ ಕೈಹಚ್ಚಿದಾಗ ಇಂಗ್ಲಿಷಿನಲ್ಲಿ ಅವನ ವಚನಗಳನ್ನು ಭಾಷಾಂತರಿಸಿ ಪ್ರಸಿದ್ಧಿಸಬೇಕೆಂಬ ಯೋಚನೆ ನನ್ನಲ್ಲಿತ್ತಲ್ಲದೆ, ಅವನ ಬಗೆಗೆ ಕನ್ನಡದಲ್ಲಿ ನಾನು ಒಂದು ಗ್ರಂಥವನ್ನು ಬರೆಯಬಹುದೆಂದು ಕನಸು ಮನಸ್ಸಿನಲ್ಲಿಯೂ ನೆನಸಿದ್ದಿಲ್ಲ. ತರಜುಮೆಗಾಗಿ ಅವನ ಪದ್ಯಗಳನ್ನು ಅಭ್ಯಸಿಸುತ್ತಿರುವಲ್ಲಿ ಪದ್ಯಗಳು ಬಹು ಮಟ್ಟಿಗೆ ಕೆಟ್ಟುಹೋಗಿರುವವೆಂದು ತಿಳಿದುಬಂದುದರಿಂದ ಸಹಜವಾಗಿ ಭಾಷಾಂತರದ ಕೆಲಸವನ್ನು ನಿಲ್ಲಿಸಿ ಗ್ರಂಥಸಂಸ್ಕರಣ ಕಾರ್ಯಕ್ಕೆ ಕೈಹಚ್ಚಿದೆ. ಇಂತಹ ವಿಷಯಗಳಲ್ಲಿ ನಾನು ಅನನುಭವಿಯಾದುದರಿಂದ 'ದಯವಿಟ್ಟು ಕೆಲವು ಸಲಹೆಗಳನ್ನು ಕೊಟ್ಟು ಸಹಾಯಮಾಡಬೇಕೆಂದು' ಪರಿಷತ್ತಿನ ಅಧಿಕಾರಿಗಳಿಗೆ ಕಾಗದ ಬರೆದೆ. ಇಷ್ಟರೊಳಗಾಗಿ ಉತ್ತಮವಾದ ಒಂದು ಗ್ರಂಥವು ತಮ್ಮಿಂದ ಹೊರಬಿದ್ದಿರುವುದರಿಂದ 'ನೀವು ಕೈಕೊಂಡ ಕಾರ್ಯವು ಬಹುಶಃ ಸಫಲವಾಗದು' ಎಂದು ಸಲಹೆ ಕೊಟ್ಟರು. ಅದನ್ನು ತರಿಸಿ ನೋಡಲಾಗಿ ಅದರಲ್ಲಿ ತುಂಬಾ ದೋಷಗಳಿರುವುದಾಗಿ ಕಂಡುಬಂದುದರಿಂದ ಕೆಲವು ಟೀಕಾತ್ಮಕ ಲೇಖಗಳನ್ನು 'ವಾಗ್ಭೂಷಣ'ವೆಂಬ ಮಾಸಪತ್ರಿಕೆಯಲ್ಲಿ ಪ್ರಸಿದ್ಧಿಸಿದೆ. ಪರಿಷತ್ತಿನವರು ಅದಕ್ಕೆ ಉತ್ತರ ಬರೆಯದೆ ಹೋದುದರಿಂದ ಪರಿಷತ್ತಿಗೂ ನನಗೂ ಇದ್ದ ಸ್ನೇಹವು ಅಷ್ಟಕ್ಕೆ ನಿಂತಂತಾಯಿತು. ಈ ಕಾರ್ಯದಲ್ಲಿ ಪಂಡಿತರಿಗಿಂತ ಮೂಲಪ್ರತಿಗಳ ಸಹಾಯವೆ ಮುಖ್ಯವಾದುದೆಂದು

ತಿಳಿದುಬಂದ ಕೂಡಲೆ ಓಲೆಗಳ ಕುಬೇರರಾದ ಶ್ರೀಮಾನ್ ಆರ್. ನರಸಿಂಹಾ ಚಾರ್ಯರಿಗೆ ಕಾಗದ ಬರೆದೆ. ಆದರೆ ಅವರಿಂದಲೂ ವಿಶೇಷ ಸಹಾಯವಾಗಲಿಲ್ಲ. ಈ ಪ್ರಕಾರ ನಿರಾಶೆಗೊಳಗಾದ ಕಾಲದಲ್ಲಿ ಬೇರೆ ಬೇರೆ ಕಡೆಯಿಂದ ಸುಮಾರು ಇಪ್ಪತ್ತು ಪ್ರತಿಗಳು ಹಸ್ತಗತವಾದುವು. ಇವುಗಳನ್ನು ಓದಿ ನೋಡುತ್ತಿರಲಾಗಿ ಗ್ರಂಥವನ್ನು ಹೊಸದಾಗಿಯೇ ಬರೆಯುವ ಪ್ರಸಂಗ ಬಂತು. ಇದೇ ಸಮಯಕ್ಕೆ ಅದನ್ನು ಆದಷ್ಟು ಸಂಪೂರ್ಣ ಸ್ಥಿತಿಗೆ ಒಯ್ಯಬೇಕೆಂಬ ಆಶೆಯೂ ಉಂಟಾಯಿತು. ಹೀಗಾಗಿ ವಚನಗಳ ವಿಷಯವರ್ಗೀಕರಣಕ್ಕೆ ಕೈಹಚ್ಚಲು ನಮಾಜು ಮಾಡಲು ಹೋಗಿ ಮಶೀದೆಯೇ ಕೊರಳಿಗೆ ಬಿದ್ದಂತಾಯಿತು. ಇಪ್ಪತ್ತು ಪ್ರತಿಗಳಲ್ಲಿಯ ಸುಮಾರು ಎರಡು ಸಾವಿರ ವಚನಗಳನ್ನು ವರ್ಗೀಕರಿಸ ಬೇಕಾದರೆ ಅವುಗಳನ್ನು ನಾಲ್ವತ್ತುಸಾವಿರ ಸಾರೆ ಓದುವ ಪ್ರಸಂಗ ಬಿತ್ತು. ಇದ ರಿಂದ ನನ್ನ ಜ್ಞಾನತಂತುಗಳು ಬಲಹೀನವಾಗಿ ಜನರ ಮುಖದ ಗುರುತು ಸಿಗ ದಷ್ಟು ಕಣ್ಣಿನ ದೃಷ್ಟಿಯು ಮಂದವಾಯಿತು. ಇದೇ ಕಾಲಕ್ಕೆ ಹೃತ್ಕ್ರಿಯೆಯು ನಿಂತುಹೋಗಿ ನನ್ನ ತಂದೆಯವರು ತೀರಿಕೊಂಡರು. ಇದು ಸಿಡಿಲು ಬಡಿದಂತಾಗಿ ನಾನು ಕಠಿಣ ಅಸ್ವಸ್ಥಕ್ಕೊಳಗಾದೆ. ಆರು ತಿಂಗಳ ಚಿಕಿತ್ಸೆ ಹೊಂದಿದರೂ ಗುಣಮುಖ ತೋರಲಿಲ್ಲ. ನಾನು ಮರಣಕ್ಕೆ ತುತ್ತಾಗುವದು ನಿಶ್ಚಯನೆಂದು ತಿಳಿದ ಕಾಲದಲ್ಲಿ ನನ್ನೊಳಗೆ ಎಷ್ಟು ಸಂಕಟವಿರಬಹುದೆಂದು ಸಹೃದಯರು ತಿಳಿಯಬಹುದು. ನಾನು ಹಾಸಿಗೆಯ ಮೇಲೆ ಹೊರಳುತ್ತಿರುವಾಗೆಲ್ಲ ಸಾಯ ಬೇಕಲ್ಲ ಎಂಬುದು ಎಷ್ಟು ಮಾತ್ರವೂ ನನ್ನನ್ನು ಕಾಡದೆ ಕೈಕೊಂಡ ಕೆಲಸವು ವ್ಯರ್ಥವಾಯಿತಲ್ಲಾ ಎಂಬ ಚಿಂತೆಯೊಂದೇ ನನ್ನನ್ನು ಕೊರೆಯುತ್ತಿತ್ತು. ಆ ಸಮಯದಲ್ಲಿ ನಾನು ಈಶ್ವರನನ್ನು ಕುರಿತು ಪ್ರಾರ್ಥಿಸಿದ್ದೇನಂದರೆ:— 'ಸರ್ವಜ್ಞನೇ, ಸರ್ವರ ಹೃದಯಾಂತರಂಗವನ್ನರಿತವನೇ, ನಾನು ಈ ಕಾರ್ಯ ವನ್ನು ಸ್ವಲಾಭ–ಮಾನಕ್ಕೋಸ್ಕರ ಕೈಕೊಂಡಿರುವದಾದರೆ ಅದನ್ನು ಇಲ್ಲಿಗೆ ನಿಲ್ಲಿಸಿಬಿಡು. ಸರ್ವಜ್ಞನ ಸೇವೆಯು ದೇಶಸೇವೆ ಮತ್ತು ನಿನ್ನ ಉಪಾಸನೆ ಆಗಿದ್ದರೆ ಅಲ್ಪನಾದ ನನ್ನಿಂದ ಈ ಸೇವೆಯನ್ನು ಮಾಡಿಸಿಕೊಳ್ಳಲು ನೀನು ಇಷ್ಟ ಪಟ್ಟರೆ ನನ್ನನ್ನು ಇನ್ನೂ ಕೆಲವು ದಿವಸ ಉಳಿಸು'ಎಂದು ಬೇಡಿಕೊಂಡೆ. ಹೀಗಾಗಿ ಕೆಲವು ದಿನಗಳ ಮೇಲೆ ಗುಣಾಂಶವು ತೋರಿತು. ನಾನು ಸಂಪೂರ್ಣ ಕ್ಷೇಮ ಹೊಂದಿ ಸುಮಾರು ಆರು ವರ್ಷ ಕೆಲಸ ಮಾಡಿದ ಬಳಿಕ ಕೈಬರಹದ ಗ್ರಂಥವು ಅಚ್ಚಿಗೆ ಸಿದ್ಧವಾಯಿತು. ಇದರ ಪ್ರಕಟನೆಗಾಗಿ ಮೂರು ವರ್ಷಗಳ ವರೆಗೆ

ಅನೇಕ ಮಹನೀಯರ ಮನೆಗೆ ಎಡತಾಕಿ ಬೇಸತ್ತೆ. ತಿರುಕನ ಈ ಕಾರ್ಯಕ್ಕೆ ಮಹತ್ವ ಕೊಡುವವರಾರೂ ಇದ್ದಿಲ್ಲ. ಆ ಕಾಲದಲ್ಲಿ ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್‌ದ ಒಡೆಯರಾದ ಶ್ರೀಮಾನ್ ಯಶವಂತರಾವ ಜಠಾರ ಇವರು ಇದರ ಮುದ್ರಣಕ್ಕಾಗಿ ಅಭಯ ಕೊಟ್ಟರು. ಇವರು ಆ ಕಾಲದಲ್ಲಿ ಸಹಾಯಮಾಡದೆ ಹೋಗಿದ್ದರೆ ಅದು ಇದುವರೆಗೆ ಪ್ರಕಾಶಕ್ಕೆ ಬರುತ್ತಿತ್ತೋ ಇಲ್ಲವೋ ಹೇಳುವುದು ಕಷ್ಟ. ವಚನಗಳು ಅಚ್ಚಾದರೂ ಅವುಗಳಿಗೆ ಪ್ರಸ್ತಾವನೆ ಇಲ್ಲದ ಕಾಲದಲ್ಲಿ ಗ್ರಂಥವು ಮೂಲೆಯನ್ನು ಹಿಡಿದು ಕೂತುದರಿಂದ ಅಚ್ಚುಹಾಕಿಸಿದವರಿಗೂ ವ್ಯಸನವಾಯಿತು. ಆದರೆ ಅದು ದೀರ್ಘವಾದ ಪ್ರಸ್ತಾವನೆಯೊಂದಿಗೆ ಕನ್ನಡಿಗರ ಕೈಗೆ ಬಂದೊಡನೆ ವಿಶೇಷವಾದ ಮನ್ನಣೆಯನ್ನು ಹೊಂದಿತು. ನನಗೆ ಕ್ಷೇಮವಾಗುತ್ತ ಬಂದಂತೆ ನನ್ನ ಧರ್ಮಪತ್ನಿಗೆ ಕಾಯಿಲೆ ಪ್ರಾರಂಭವಾಯಿತು. ಅಂದಿನಿಂದ ಇಪ್ಪತ್ತೆರಡು ವರ್ಷಗಳಾದರೂ ಆಕೆ ಹಾಸಿಗೆಬಿಟ್ಟು ಇಂದಿಗೂ ಏಳಲು ಶಕ್ತಳಾಗಿರುವುದಿಲ್ಲ. ಸರ್ವಜ್ಞಗ್ರಂಥವು ಹೊರಬಿದ್ದ ಕಾಲದಲ್ಲಿಯೇ ಸ್ವಾತಂತ್ರ್ಯದ ಯುದ್ಧವೂ ಕಠೋರವಾಗಿ ನಡೆದಿತ್ತು. ನಾನು ದೊಡ್ಡ ಊರಲ್ಲಿದ್ದರೆ ಚಳವಳಿಯು ಹೆಚ್ಚಾಗುವದೆಂದು ಮೇಲಿನವರು ನನ್ನನ್ನು ಸಣ್ಣ ಊರಿಗೆ ಅಂದರೆ ಹಾವೇರಿಗೆ ವರ್ಗಾಯಿಸಿದರು. ಆ ಕಾಲಕ್ಕೆ ಸಾಹಿತ್ಯ ಕಾರ್ಯಕ್ಕಾಗಿ ಸುಮಾರು ೫೦೦ ರೂಪಾಯಿ ಸಾಲವಾಗಿತ್ತು. ಇದನ್ನು ತೀರಿಸದೆ ನಾನು ಮರ್ಯಾದೆಯಿಂದ ಧಾರವಾಡವನ್ನು ಬಿಡುವಂತಿದ್ದಿಲ್ಲ. ಹೆಂಡತಿಯು ಬೆಟ್ಟಗೇರಿಯ ಆಸ್ಪತ್ರೆಯಲ್ಲಿದ್ದಳು. ಹೀಗೆ ಉಭಯ ಸಂಕಟಕ್ಕೊಳಗಾದ ಸಮಯದಲ್ಲಿ ನನ್ನ ಮಿತ್ರರಾದ ಶ್ರೀಮಾನ್ ಬೇಂದ್ರೆಯವರು ಸರ್ವಜ್ಞನ ಒಂದು ಪ್ರತಿಯನ್ನು ಆ ವರ್ಷದ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರಾಗಿ ನೇಮಕವಾಗಿದ್ದ ಶ್ರೀಮಾನ್ ಬೆನಗಲ್ಲು ರಾಮರಾಯರಿಗೆ ಕಳುಹಿಸಿಕೊಟ್ಟು ನಾನೂ ಬೆಳಗಾಂವಿಯ ಸಮ್ಮೇಲನಕ್ಕೆ ಬರಬೇಕೆಂದು ಆಪ್ತಾಲೋಚನೆ ಕೊಟ್ಟರು. ನಾನು ಅವರ ಹೇಳಿಕೆಯಂತೆ ಕಾರ್ಯವನ್ನು ಮಾಡಿ ಸಾಹಿತ್ಯಸಮ್ಮೇಲನಕ್ಕೂ ಹೋದೆ. ಇಂತಹ ಸಮ್ಮೇಲನದಲ್ಲಿ ಕಾಲಿಟ್ಟುದು ಇದೇ ಮೊದಲನೆಯ ಸಾರಿ. ಅಲ್ಲಿ ಶ್ರೀಮಾನ್ ನಾಮದಾರ ಬೆಳವಿಯವರಿಂದ ಒಂದು ನೂರು ರೂಪಾಯಿ, ಶ್ರೀಮಾನ್ ಗರುಡರವರಿಂದ ಸುಮಾರು ಮುನ್ನೂರು ರೂಪಾಯಿ, ಶ್ರೀಮಾನ್ ನರಸಿಂಹಾಚಾರ್ಯರಿಂದ ಐವತ್ತು, ವಿದ್ಯಾವರ್ಧಕ ಸಂಘದಿಂದ ಐವತ್ತು ಅಂತೂ ೫೦೦ ರೂಪಾಯಿಗಳು

ಸಂಗ್ರಹವಾಗಿ ನಾನು ಹಾವೇರಿಗೆ ಹೋಗುವದಕ್ಕೆ ಎಂಟು ದಿವಸ ಮುಂಚಿತ ವಾಗಿಯೇ ನನ್ನ ಕೈಸೇರಿದ್ದರಿಂದ ನಾನು ಮರ್ಯಾದೆಯಿಂದ ಧಾರವಾಡವನ್ನು ಬಿಡಬಹುದಾಯಿತು. ಇಂತಹ ಪ್ರಸಂಗಗಳು ನನ್ನ ಜೀವನದಲ್ಲಿ ಅನೇಕಸಾರೆ ಬಂದಿದ್ದು ಈಶ್ವರನ ಕೃಪಾಹಸ್ತದಿಂದ ನಡಿಸಲ್ಪಟ್ಟು ನಾನು ಇಲ್ಲಿಯ ವರೆಗೆ ಬಂದಿರುವೆ. ಸರ್ವಜ್ಞನ ಗ್ರಂಥವನ್ನು ಅಚ್ಚಿಗೆ ಸಿದ್ಧಪಡಿಸುವ ಕಾರ್ಯದಲ್ಲಿ ಅನೇಕ ಶಿಕ್ಷಿಕೆಯರು ನನ್ನ ಸಹಭಾಗಿನಿಗೆ ನೆರವಾದುದು ಕನ್ನಡಮಾತೆಗೊಂದು ಭೂಷಣ.

## ಫಲಶ್ರುತಿ

ಸರ್ವಜ್ಞಗ್ರಂಥವು ಹೊರಬಿದ್ದು ಇಂದಿಗೆ ಇಪ್ಪತ್ತು ವರ್ಷಗಳಾದವು. (೧೯೩೪-೫೪) ನಾಲ್ಕು ತರದ ಆವೃತ್ತಿಗಳು ಹೊರಟವು. ಇಂದಿಗೆ ಸುಮಾರು ಹತ್ತುಸಾವಿರ ಪ್ರತಿಗಳು ಕನ್ನಡಿಗರ ಕೈಸೇರಿದವು. ಆದುದರಿಂದ ಅವನ ಬಗೆಗೆ ವಿದ್ಯಾರ್ಥಿಗಳಲ್ಲಿಯೂ ಮಧ್ಯಮತರದ ಜನರಲ್ಲಿಯೂ ವಿದ್ಯಾವಂತರಲ್ಲಿಯೂ ವಿಶೇಷ ಜಾಗ್ರತೆಯುಂಟಾಗಿದೆ ಎಂದು ಕೈಎತ್ತಿ ಹೇಳಬಹುದು. ಸರ್ವಜ್ಞನ ತುತ್ತು ಸ್ವಾಭಾವಿಕವಾಗಿ ಸವಿ. ತಿರುಳುಗನ್ನಡ ತಿರುಕನು ಈ ಬೋನವನ್ನ- ಟ್ಟುದರಿಂದ ಸವಿಯು ಇಮ್ಮಡಿಯಾಯಿತು, ಎಂದು ಹೇಳಿದನೊಬ್ಬ. 'ಈ ಸವಿಯೂಟವನ್ನು ಕನ್ನಡಿಗರಿಗೆ ಬಡಿಸದೆ ಕಾಲವಾಗುವೆನೇನೋ ಎಂದು ಹಾಸಿಗೆಯಲ್ಲಿ ನರಳಿ ಈಶ್ವರನನ್ನು ಪ್ರಾರ್ಥಿಸಿದನು. ಈಶ್ವರನ ಪ್ರಸಾದದಿಂದಲೋ ತಿರುಕನ ಮನೋಬಲದಿಂದಲೋ ಸರ್ವಜ್ಞನ ಸುಕೃತದಿಂದಲೋ ಕನ್ನಡಿಗರ ಪುಣ್ಯಬಲದಿಂದಲೋ ತಿರುಕನು ಹಾಸಿಗೆಯಿಂದೆದ್ದನು. ಸರ್ವಜ್ಞನು ಹೊರ ಬಿದ್ದನು' ಎಂದು ಹರಸಿದನು ಇನ್ನೊಬ್ಬ. 'ಚೆನ್ನಪ್ಪನವರು ವಿಮರ್ಶಕರು, ಕನ್ನಡ ಸಾಹಿತ್ಯ ವಿಮರ್ಶೆಗೆ ತಳಹದಿಯನ್ನು ಹಾಕಿದವರು, ವಿಮರ್ಶೆ ಶಬ್ದದ ತಿರುಳು ಅವರ ಕೃತಿಯಲ್ಲಿ ಒಡೆದು ಕಾಣುತ್ತದೆ' ಎಂದು ಹೇಳಿದನು ವಿಮರ್ಶ- ಕನೊಬ್ಬ. 'ಹಸಿದವಗೆ ಹಣ್ಣನಿತ್ತಂತೆ ಕ್ರೈಸ್ತರ ಶಿಸ್ತು ಕಾಣಯ್ಯ' ಎಂದು ಹಾಡಿದನು ಕಾವ್ಯಾನಂದನೊಬ್ಬ. 'ಖಿನ್ನನಾದರೂ ಚಿನ್ನದಂತಹ ಚೆನ್ನನೆಂದು ಕೀರ್ತಿಸಿದನು ಕೀರ್ತನ ಕೇಸರಿಯೊಬ್ಬ. 'ಹೆಸರು ಚೆನ್ನನಾಗಿ ಏನು ? ಕೃತಿಯು ಚೆನ್ನವಿರದಿರೆ? ' ಎಂದು ಕೇಳಿದನು ಕವೀಂದ್ರನೊಬ್ಬ. ಇದನ್ನು

ನೋಡಿದರೆ ಸರ್ವಜ್ಞನು ನನ್ನಿಂದ ಪ್ರಸಿದ್ಧಿಗೆ ಬಂದನೋ ಇಲ್ಲವೆ ನಾನು ಸರ್ವಜ್ಞನಿಂದ ಪ್ರಸಿದ್ಧಿಗೆ ಬಂದೆನೋ ಹೇಳುವುದು ಕಠಿಣ. ಸಿದ್ದವ್ವನಹಳ್ಳಿಯ ಕೃಷ್ಣಶರ್ಮರು ಸರ್ವಜ್ಞನನ್ನು ನೋಡಿ ಕುಣಿದರು. ಬೆಟ್ಟಗೇರಿಯ ಕೃಷ್ಣ ಶರ್ಮರು ಅವನನ್ನು ಕುಣಿಸಿದರು. ತಿ. ತಾ. ಶರ್ಮರು ಅವನಿಗೆ ಮಣಿದರು. ಆ. ನ. ಕೃಷ್ಣರಾಯರು ಅವನ ಧ್ವಜವನ್ನೆತ್ತಿ ಸೆಣಿಸಿದರು. ತಿಪಟೂರಿನ ಮಹಾಶಯರು ಅವನ ದಿನಾಚರಣೆಯನ್ನು ಮಾಡಿ ತಣಿದರು. ಪಂಜೆ ಮಂಗೇಶರಾಯರು ಇವನ ಶಿಕ್ಷಣಪದ್ಧತಿಯನ್ನರಿಯಲು ದಣಿದರು. ಪ್ರೊಫೆಸರ ಗೋಕಾಕರವರು ಅವನ ವಚನಗಳನ್ನು ಆಂಗ್ಲದಲ್ಲಿ ಹೆಣೆದರು. ಅಥಣಿಯ ಚಿಚ್ಚಕೋರನು ಎಲ್ಲ ಕಡೆಗೆ ಹಾರಿಹೋಗಿ ಅವನ ಸಂದೇಶವನ್ನು ಸಂಭ್ರಮ ದಿಂದ ಸಾರಿದನು. ಇನ್ನೆಷ್ಟೋ ಕನ್ನಡಿಗರು ಎಷ್ಟೋ ಪರಿಯಿಂದ ಅವನನ್ನು ಹೊಗಳಿದ್ದಾರೆ. ಹೀಗೆ ಕನ್ನಡನಾಡು ಸರ್ವಜ್ಞನಿಗೆ ಚಿರ ಋಣಿಯಾಗಿದೆ ಎಂಬ ಸಂಗತಿಯು ಸರ್ವರ ಕೈಯೊಳಗಿನ ಕನ್ನಡಿಯಂತಿದೆ.

## ಮುಂಬಯಕೆ

ಕನ್ನಡವು ಮಾಧ್ಯಮಿಕ ಭಾಷೆಯಾಗಿ ಮೆರೆಯುವ ಕಾಲವು ಸಮೀಪಿಸು ತ್ತಿರುವುದರಿಂದ ಪ್ರತಿ ಒಬ್ಬ ಕನ್ನಡ ವಿದ್ಯಾರ್ಥಿಯು ಸುಮಾರು ೫೦೦ ವಚನ ಗಳನ್ನು ಕಂಠಪಾಠ ಮಾಡಬೇಕೆಂದು ಅನೇಕ ಶಿಕ್ಷಕರ ಅಭಿಪ್ರಾಯವಿದೆ. ಇದಕ್ಕಾಗಿ ವಿದ್ಯಾರ್ಥಿಯಾವೃತ್ತಿಯೊಂದನ್ನು ಸಿದ್ಧಪಡಿಸಬೇಕಾಗಿದೆ. ಸರ್ವಜ್ಞ ವಚನಗಳು ಸುಲಭವಾಗಿದ್ದರೂ ಕೆಲವೆಡೆಗಳಲ್ಲಿ ಬಹು ಮಾರ್ಮಿಕವಾಗಿರುವು ದರಿಂದ ಇದಕ್ಕೂ ಒಂದು ಟೀಕೆಯು ಅವಶ್ಯವೆಂದು ಶ್ರೀಮಾನ್ ಬೆಳವಿಯವರ ಹೇಳಿಕೆ. ಈ ಕಾರ್ಯಕ್ಕಾಗಿ ಅನೇಕ ಸಂಗತಿಗಳನ್ನು ಇಷ್ಟರೊಳಗಾಗಿ ವಿವರಿಸಿಕೊಂಡಿದ್ದೇನೆ. ಭಗವದ್ಗೀತೆಯ ವಿಷಯವಾಗಿ ನಾಲ್ಕು ಸಂಪುಟ ಗಳು ಇಂಗ್ಲಿಷಿನಲ್ಲಿ ಬರೆಯಲ್ಪಟ್ಟಿದ್ದು ಬಹುಮಟ್ಟಿಗೆ ಅಚ್ಚಿಗೆ ಸಿದ್ಧವಾಗಿದೆ. ದೃಷ್ಟಾಂತ ದರ್ಪಣದ ಉಳಿದ ಭಾಗಗಳು ಸಿದ್ಧವಾಗಿದ್ದು ಅಚ್ಚಿಗಾಗಿ ಕಾಯು ತ್ತಿವೆ. ಭಾರತೀಯರಿಗಾಗಿ ಯೇಸುವಿನ ಜೀವನ ಚರಿತೆಯೊಂದನ್ನು ಬರೆಯ ಬೇಕೆಂಬ ಆಶೆಯು ಅನೇಕ ವರ್ಷಗಳಿಂದ ನನ್ನಲ್ಲಿ ಮನೆ ಮಾಡಿಕೊಂಡಿದೆ. ಕನ್ನಡಕ್ಕೂ ಒಂದು ಸ್ವತಂತ್ರವಾದ ಸಂಸ್ಕೃತಿ ಇದೆ ಎಂಬ ವಿಷಯವಾಗಿಯೂ

ಉಪನಿಷತ್ತು, ವಚನ ಶಾಸ್ತ್ರಗಳ ತುಲನಾತ್ಮಕ ತತ್ವ ವಿಷಯವಾಗಿಯೂ ಸ್ವತಂತ್ರವಾದ ಲೇಖಗಳನ್ನು ಬರೆಯಬೇಕೆಂದು ನನ್ನ ಹೆಬ್ಬಯಕೆ. ಕನ್ನಡ ಗಾದೆಗಳು, ಕನ್ನಡ ನುಡಿಗಟ್ಟುಗಳು, ಕನ್ನಡ ಶಬ್ದಗಳು ಇವುಗಳಲ್ಲಿರುವ ಕನ್ನಡತನವನ್ನು ಬಯಲಿಗೆಳೆದು ಅದನ್ನು ಕನ್ನಡಿಗರ ಮುಂದೆ ಇಡಬೇಕೆಂಬು ದೊಂದು ಮಹತ್ವಾಕಾಂಕ್ಷೆ. ಆದರೆ ಇವೆಲ್ಲ ಇಳಿವಯಸ್ಸಿನ ಬಯಕೆಗಳು, ಇವುಗಳಲ್ಲಿ ಹೆಚ್ಚಿನವುಗಳನ್ನು ಭಾವೀ ಕನ್ನಡ ಸಾಹಿತಿಗಳು ಪೂರೈಸುವರೆಂದು ತುಂಬಾ ನಂಬಿದ್ದೇನೆ. ಕನ್ನಡನಾಡು ಇಂತಹ ಅನೇಕ ಸಾಹಿತ್ಯಸಿದ್ಧರನ್ನು ಕಾಣಲೆಂದು ನನ್ನ ಹರಿಕೆ. ನನ್ನ ೭೦ನೆಯ ವರ್ಷದ ಹಬ್ಬದ ಕಾಲಕ್ಕೆ ಸರ್ವಜ್ಞನಿಗಾಗಿ ನಾನು ರಚಿಸಿದ ಹಾಡಿನ ಕಡೆಯ ಶ್ಲೋಕದಿಂದ ಮಂಗಳ ಮಾಡಿ ಈ ನನ್ನ ಹಾಡನ್ನು ಮುಗಿಸುತ್ತೇನೆ.

## ಮಂಗಲ

ತಿರುಳುಗನ್ನಡ ತಿರುಕ ಮರುಳನಾದನು ಅವಗೆ
ಅರಳಿಹೋಯಿತು ಅವನ ಸರಳ ಭಾವಕೆ ಮನವು
ನಿರುತ ಕೊರತೆಯುಲಿದ್ದು ಇರುಳು ಸೇವೆಯಗೈದು
ವರುಷ ಇರವತ್ತಾಯ್ತು ಇರವು ಅರವತ್ತಾಯ್ತು
ತರುಣರೆಲ್ಲರೆ ಕೇಳಿ ನಿರುತ ಸೇವೆಗೆ ಏಳಿ
ಭರತ ಮಾತೆಯ ಪುತ್ರನಿರುವ ಕನ್ನಡ ಮಿತ್ರ.

ತಿ. ತಿ.
ಚೆನ್ನಪ್ಪ ಉತ್ತಂಗಿ

# ಮಿಂಚಿನ ಬಳ್ಳಿಯ ಪ್ರಕಟನೆಗಳಲ್ಲಿ ಈಗ ದೊರೆಯುವ ಪುಸ್ತಕಗಳು



| | | ಕ್ಯಾಲಿಕೊ | ಸಾದಾ ಪ್ರತಿ |
|---|---|---|---|
| ೧ | ಮಿಂಚಿದ ಮಹಿಳೆಯರು | | ೨ ೦ ೦ |
| ೨ | ಜಾಗ್ರತಚೀನ | | ೨ ೦ ೦ |
| ೩ | ರಾಷ್ಟ್ರಪತಿಗಳು | | ೪ ೦ ೦ |
| ೪ | ಕಂನಾಡ ಸಾಹಿತ್ಯಜ್ಞರ ಆತ್ಮಕಥನ | | ೨ ೦ ೦ |
| ೫ | ಗಾಂಧೀಜಿಯವರ ರಾಜಕೀಯ ಪತ್ರಗಳು | | ೨ ೦ ೦ |
| ೬ | ಮಹಾತ್ಮರ ಸ್ವತಂತ್ರ ರಾಜ್ಯಘಟನೆ | | ೧ ೪ ೦ |
| ೭ | ಬೆಳಕಿನ ಬಾಳು | | ೨ ೮ ೦ |
| ೮ | ಬಂಡಾಯದ ಇತಿಹಾಸ (೧೮೫೭) | | ೫ ೦ ೦ |
| ೯ | ಬುದ್ಧಜಾತಕಗಳು | | ೨ ೦ ೦ |
| ೧೦ | ಅರವಿಂದರ ಧರ್ಮ ಹಾಗೂ ರಾಷ್ಟ್ರೀಯತ್ವ | | ೧ ೮ ೦ |
| ೧೧ | ಗಾಂಧೀ ಸೂತ್ರಗಳು | | ೨ ೮ ೦ |
| ೧೨ | ಸಮಾಜ ದರ್ಶನ | | ೧ ೮ ೦ |
| ೧೩ | ಮಾರ್ಕ್ಸವಾದ | | ೨ ೦ ೦ |
| ೧೪ | ಗಾಂಧೀಜಿಯವರ ದಕ್ಷಿಣಯಾತ್ರೆ | | ೨ ೪ ೦ |
| ೧೫ | ಸ್ವರ್ಗದೋಲೆಗಳು (೨ನೇ ಆವೃತ್ತಿ) | | ೧ ೪ ೦ |
| ೧೬ | ಆಹಾರ ವಿಜ್ಞಾನಸಾರ | | ೧ ೪ ೦ |
| ೧೭ | ಭಕ್ತಿ ಸುಮನಾಂಜಲಿ | ೩ ೦ ೦ | ೨ ೮ ೦ |
| ೧೮ | ಕಲಿ | ೧ ೮ ೦ | ೧ ೦ ೦ |
| ೧೯ | ಪಶ್ಚಿಮದ ಪ್ರತಿಭೆ : ಭಾಗ ೧ | ೨ ೮ ೦ | ೨ ೦ ೦ |

| | | ಕ್ಯಾಲಿಕೊ | | | ಸಾದಾ ಪ್ರತಿ | | |
|---|---|---|---|---|---|---|---|
| ೨೦ | ಬ್ಯಾಂಕ ವ್ಯವಸಾಯದ ಕೈಪಿಡಿ | ೨ | ೮ | ೦ | ೨ | ೦ | ೦ |
| ೨೧ | ಪಶ್ಚಿಮದ ಪ್ರತಿಭೆ : ಭಾಗ ೨ | ೨ | ೦ | ೦ | ೧ | ೮ | ೦ |
| ೨೨ | ಆದರ್ಶ ರಾಜ್ಯ | ೨ | ೮ | ೦ | ೨ | ೦ | ೦ |
| ೨೩ | ಶ್ರೀ ಸಾನೆ ಗುರೂಜಿಯುವರ ಚರಿತ್ರೆ ಹಾಗೂ ಅವರ ಕೃತಿಗಳು (ಅಸ್ತಿಕ ಕಾದಂಬರಿ ಸಹಿತ) | ೮ | ೦ | ೦ | ೬ | ೮ | ೦ |
| ೨೪ | ಗೀತಾಂಜಲಿ | ೨ | ೮ | ೦ | ೨ | ೦ | ೦ |
| ೨೫ | ದೇವತಾತ್ಮಾ | ೧ | ೮ | ೦ | ೧ | ೦ | ೦ |
| ೨೬ | ಸತ್ಯಾರ್ಥಿ | ೨ | ೮ | ೦ | ೨ | ೦ | ೦ |
| ೨೭ | ಸೆರೆಮನೆಯ ಶೂರ | | | | ೨ | ೮ | ೦ |
| ೨೮ | ಪ್ರಾರ್ಥನೆ (ಪ್ರಾರ್ಥನೆಯ ಬಗೆಗೆ ಗಾಂಧೀಜಿಯುವರ ವಿಚಾರಗಳು) | | | | ೦ | ೮ | ೦ |
| ೨೯ | ಹಾಸ್ಯ ಪ್ರಬಂಧಗಳು | ೨ | ೮ | ೦ | ೨ | ೦ | ೦ |
| ೩೦ | ಛತ್ರಪತಿ ಶಿವಾಜಿ (ಚರಿತ್ರೆ) | | | | ೦ | ೪ | ೦ |
| ೩೧ | ಶ್ರೀ ವಿನೋಬಾ ಭಾವೆ (ಚರಿತ್ರೆ) | | | | ೦ | ೮ | ೦ |
| ೩೨ | ಅಪೂರ್ವತ್ಯಾಗ (ಕಥಾ ಸಂಕಲನ) | | | | ೦ | ೧೨ | ೦ |
| ೩೩ | ಆಸ್ತಿಕ (ಕಾದಂಬರಿ) | ೪ | ೮ | ೦ | ೩ | ೮ | ೦ |
| ೩೪ | ಶ್ರೀ ಸಾನೆ ಗುರೂಜಿಯುವರ ಚರಿತ್ರೆ (ಆಸ್ತಿಕ ಕಾದಂಬರಿ ಬಿಟ್ಟು) | | | | ೩ | ೦ | ೦ |

ವ್ಯಾಪಾರಸ್ಥರಿಗೆ ಯೋಗ್ಯ ಕಮೀಶನ್ ಕೊಡಲಾಗುವದು.

**ವ್ಯವಸ್ಥಾಪಕರು, ಮಿಂಚಿನಬಳ್ಳಿ, ಧಾರವಾಡ**